# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ತನು, ಗೀತಾ ಶಾಸ್ತ್ರಿ, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ, ಆದರ್ಶ ಪೈ

**ಮುಖಪುಟ :** ಅರ್ನೆಸ್ಟೊ ಚೆ ಗೆವಾರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಗಳು

ನಂಬಿಕೆ ಮತ್ತು ಸಂವಿಧಾನದ ಮಧ್ಯೆ ತಾಕಲಾಟ ನಡೆದೇ ಇದೆ. ಇದಕ್ಕೆ ಕೆಲವೊಮ್ಮೆ ಸರ್ವೋಚ್ಚ ನ್ಯಾಯಾಲಯದ ಅಡ್ಡಗೋಡೆ ಮೇಲೆ ದೀಪ ಇರಿಸುವ ತೀರ್ಮಾನಗಳೂ ಕಾರಣ. ಸಂವಿಧಾನಬದ್ಧವಾಗಿ ಸರ್ವೋಚ್ಚ ನ್ಯಾಯಾಲಯವು ಸ್ಪಷ್ಟವಾದ ತೀರ್ಮಾನ ಕೈಗೊಂಡಾಗ ವಿವಾದ ಉದ್ಭವಿಸುವುದು ಜಾಯಮಾನ. ಅಂಥದ್ದೇ ವಿವಾದ ಈಗ ಶಬರಿಮಲೈ ವಿಚಾರದಲ್ಲಿ ನಡೆದಿದೆ. ರಾಮಜನ್ಮಭೂಮಿ ವಿಚಾರದಲ್ಲಿ ಸರ್ವೋಚ್ಚ ನ್ಯಾಯಾಲಯ ನಂಬಿಕೆ ವಿಷಯದಲ್ಲಿ ತಳೆದ ಧೋರಣೆ ವಿವಾದಕ್ಕೆ ಕಾರಣ ಎನ್ನಬಹುದು. ಶಬರಿಮಲೈ ದೇವಾಲಯ ಪ್ರವೇಶಕ್ಕೆ ಇದ್ದ ಸ್ತ್ರೀಯರ ಪ್ರವೇಶ ನಿರ್ಬಂಧವನ್ನು ಕುರಿತು ದೇಶದ ಸುಪ್ರೀಮ್ ಕೋರ್ಟು ನೀಡಿರುವ ತೀರ್ಪು ಸ್ವಾಗತಾರ್ಹ ಹಾಗೂ ದಿಟ್ಟವಾದ್ದು. ಅಲ್ಲಿನ ಅಯ್ಯಪ್ಪ ದೇವಸ್ಥಾನಕ್ಕೆ ೧೬ರಿಂದ ೫೦ ವಯಸ್ಸಿನ ಸ್ತ್ರೀಯರಿಗೆ ಪ್ರವೇಶ ನಿಷೇಧವನ್ನು ತೆರವುಗೊಳಿಸಿರುವುದು ಐತಿಹಾಸಿಕ. ಒಂದು ಕಾಲದಲ್ಲಿ ಕೇರಳ ಮತ್ತು ಆಸುಪಾಸಿನ ಸ್ಥಳಗಳಲ್ಲಿ ಪ್ರಸಿದ್ಧವಾಗಿದ್ದ ಅಯ್ಯಪ್ಪ ಭಾರತದ ಇತರ ಕಡೆಗಳಲ್ಲಿ ಭಕ್ತಾದಿಗಳನ್ನು ಆಕರ್ಷಿಸಿದ್ದು ಕಳೆದ ಶತಮಾನದ ೫೦ರ ದಶಕದ ನಂತರ. ಭದ್ರತೆಯ ದೃಷ್ಟಿಯಿಂದ ಯಾವುದೇ ಕಾಲದಲ್ಲಿ ಸ್ತ್ರೀಯರ ಪ್ರವೇಶಕ್ಕೆ ನಿರ್ಬಂಧ ವಿಧಿಸಲಾಗಿತ್ತು. ಆದರೆ ಜಾಗೃತ ಮಹಿಳೆ ಅದನ್ನು ಪ್ರತಿಭಟಿಸಿದ್ದಾಳೆ. ಯಾವ ದೇವಾಲಯಗಳಲ್ಲೂ ಇಲ್ಲದ ಪ್ರವೇಶ ನಿರ್ಬಂಧವನ್ನು ಕುರಿತು ಪ್ರತಿಭಟಿಸಿದ್ದಾಳೆ. ಹಿಂದೆ ಈಗ ಸಚಿವೆ ಆಗಿರುವ ಜಯಮಾಲಾ ಅಯ್ಯಪ್ಪ ದೇವಾಲಯಕ್ಕೆ ಭೇಟಿ ನೀಡಿದಾಗ ಎದ್ದ ವಿವಾದವನ್ನು ನೆನಪಿಗೆ ತಂದುಕೊಳ್ಳಬಹುದು.

ಸುಪ್ರೀಮ್ ಕೋರ್ಟಿನ ತೀರ್ಪಿನ ವಿರುದ್ಧವಾಗಿ ಈಗ ದೇವಾಲಯದ ಆಡಳಿತ ಮಂಡಲಿ ಪುನರ್‌ಪರಿಶೀಲನಾ ಅರ್ಜಿ ದಾಖಲಿಸಿದೆ. ಹಿಂದೂ ಸನಾತನಿಗಳು, ಧರ್ಮಾಂಧರು, ಸಂಘಪರಿವಾರದವರು ಪ್ರತಿಭಟನೆಯಲ್ಲಿ ನಿರತರಾಗಿದ್ದಾರೆ. ಭಾಜಪ ನೇರವಾಗಿ ಕೇರಳ ರಾಜ್ಯದಲ್ಲಿ ಸ್ಥಾಪನೆಗೊಳ್ಳುವ ಪ್ರತಿಭಟನೆಯ ಮುಂದಳದಲ್ಲಿದೆ. ಸ್ತ್ರೀಯರ ಪ್ರವೇಶದ ಮೇಲೆ ನಿರ್ಬಂಧ ವಿಧಿಸಿರುವುದು ಸರಿ ಎನ್ನುವುದೇ ಧರ್ಮಾಂಧರ ವಿಚಾರ. ಅದಕ್ಕೆ ಎಲ್ಲೆಲ್ಲೂ ಪ್ರತಿಭಟನೆ. ವಿಚಾರವಾದಿಗಳು, ಕೇರಳ ಸರ್ಕಾರ ತೀರ್ಪಿಗೆ ಬೆಂಬಲ ನೀಡಿದ್ದಾರೆ. ಹಿಂದೂ ಸನಾತನಿಗಳು ನಂಬಿಕೆ ಎನ್ನುವುದು ಸಂವಿಧಾನವನ್ನೂ ಮೀರಿದ್ದು ಎಂಬ ನಿಲುತಳೆದಿದ್ದಾರೆ. ಕಾಂಗ್ರೆಸ್ ಕೂಡ ಸಂದರ್ಭದ ಲಾಭ ಪಡೆಯಲು ವಿರೋಧಿಗಳ ಗುಂಪು ಸೇರಿದೆ. ದೇಶಾದ್ಯಂತ ಸ್ತ್ರೀವಾದಿಗಳು, ವಿಚಾರವಂತ ಮಹಿಳೆಯರು ಸುಪ್ರೀಮ್ ಕೋರ್ಟಿನ ತೀರ್ಪನ್ನು ಸ್ವಾಗತಿಸಿದ್ದಾರೆ. ಹೆಣ್ಣಾಗಲಿ, ಗಂಡಾಗಲಿ ಯಾವ ನಿರ್ಬಂಧವೂ ಇಲ್ಲದೆ ದೇವಾಲಯ ಪ್ರವೇಶಿಸುವುದು, ಪೂಜೆ ಸಲ್ಲಿಸುವುದು ಸಂವಿಧಾನಬದ್ಧ ಹಕ್ಕು. ಯಾವ ರೀತಿಯ ಭೇದಕ್ಕೂ ಅವಕಾಶವಿಲ್ಲ. ಹಿಂದುತ್ವವಾದಿಗಳು ಮಾತ್ರ ಇದಕ್ಕೆ ವಿರೋಧವಿದ್ದಾರೆ. ಇದು ಮುಂದೆ ಯಾವ ಸ್ವರೂಪ ತಳೆಯುವುದು ನೋಡಬೇಕಾಗಿದೆ. ಪುನರ್‌ಪರಿಶೀಲನಾ ಅರ್ಜಿ ತಿರಸ್ಕರಿಸಬೇಕು ಎನ್ನುವ ಒತ್ತಾಯವೂ ಇದೆ. ಐತಿಹಾಸಿಕವಾದ ತೀರ್ಪು ಎತ್ತಿ ಹಿಡಿಯುವುದೇ ಸರಿಯಾದ ನಿಲುವು. ಸಂವಿಧಾನದಲ್ಲಿ ನಂಬಿಕೆ ಎಲ್ಲಕ್ಕಿಂತ ಶ್ರೇಷ್ಠ.

✶ ✶ ✶

'ಮೀಟೂ' ಚಳವಳಿ ಈಗ ಮತ್ತೆ ತೀವ್ರಗೊಂಡಿದೆ ಲೈಂಗಿಕ ಕಿರುಕುಳದ ವಿರುದ್ಧ ಮಹಿಳೆ ಸಿಡಿದೆದ್ದು ನಿಂತಿದ್ದಾಳೆ. ಈ ಚಳವಳಿ ಪ್ರಾರಂಭವಾಗಿ ಹತ್ತು ವರ್ಷಕ್ಕೂ ಮೇಲಾಗಿದೆ. ಅದು ಪ್ರಾರಂಭವಾದ್ದೂ ಕೂಡ ತುಳಿತಕ್ಕೊಳಗಾದ ಜನಾಂಗದಿಂದ. ಅಮೆರಿಕದ ಕರಿಯರ ಸ್ತ್ರೀವಾದಿ ಚಳವಳಿಯಿಂದ. ಲೈಂಗಿಕ ದೌರ್ಜನ್ಯಗಳಿಗೆ ಬಲಿಯಾಗುವವರೂ ಕೂಡ ಹೆಚ್ಚಾಗಿ ತುಳಿತಕ್ಕೆ ಒಳಗಾಗುವ ಜನಾಂಗದವರೇ. ನಮ್ಮ ದೇಶದಲ್ಲಿ ಅಂಥ ಶೋಷಣೆಗೆ, ಕಿರುಕುಳಕ್ಕೆ ಒಳಗಾಗುವವರೂ ಕೂಡ ದಲಿತ ವರ್ಗದ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೪ ನವೆಂಬರ್ ೨೦೧೮

**■ ಗೌರವ ಸಂಪಾದಕ**

ಜಿ. ರಾಮಕೃಷ್ಣ

**■ ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**■ ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

**■ ವ್ಯವಸ್ಥಾಪಕ**

ಎ. ರಮೇಶ ಉಡುಪ

**■ ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

**■ ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಸಂವಿಧಾನಕ್ಕೇ ಸವಾಲು

**ಭಾ**ರತದಂತಹ ಒಂದು ಉಪಖಂಡವನ್ನು, ಹಲವಾರು ರಾಷ್ಟ್ರೀಯತೆ, ಧರ್ಮ, ಜಾತಿ, ಭಾಷೆ, ಸಂಸ್ಕೃತಿ, ಪ್ರಾಂತಗಳನ್ನು ಒಂದು ಒಕ್ಕೂಟ ವ್ಯವಸ್ಥೆಯ ಭಾಗವಾಗಿಸಿ ಸ್ವಾತಂತ್ರ್ಯಾನಂತರ ಏಕಾತ್ಮಕವಾಗಿ ಮುನ್ನಡೆಸಿಕೊಂಡು ಬರಲು ಸಾಧ್ಯವಾದದ್ದು ನಮ್ಮ ಸಂವಿಧಾನದ ಅಂತಃಶಕ್ತಿಯಿಂದ. ಡಾ॥ ಬಿ. ಆರ್. ಅಂಬೇಡ್ಕರ್ ಅವರ ಅಧ್ಯಕ್ಷತೆಯ ಸಂವಿಧಾನ ರಚನಾ ಸಮಿತಿ ೧೯೪೯ ನವೆಂಬರ್ ೨೬ರಂದು ಮಂಡಿಸಿದ ಕರಡು, ಸಂವಿಧಾನ ಸಭೆಯಿಂದ ಅಂಗೀಕೃತಗೊಂಡು ೨೬ ಜನವರಿ ೧೯೫೦ರಿಂದ ಜಾರಿಯಾಯಿತು. ಅಂದಿನಿಂದ ಇಂದಿನವರೆಗೆ ಭಾರತದ ಏಕತೆಗೆ ಕಾರಣವಾಗಿದ್ದೇ ಈ ಸಂವಿಧಾನ. ಭಾರತದಂಥ ಬಹುಮುಖಿ ವ್ಯವಸ್ಥೆಯಲ್ಲಿ ಹಲವಾರು ಸಂದರ್ಭದಲ್ಲಿ ಭಾರತದ ಏಕತೆಗೆ ಧಕ್ಕೆ ಬರುವಂಥ ವಾತಾವರಣದಲ್ಲಿ ಭಾರತದ ನ್ಯಾಯಾಂಗ ಮಧ್ಯಪ್ರವೇಶ ಮಾಡಿ ಸಂವಿಧಾನದ ಆಶಯಗಳನ್ನು ಎತ್ತಿ ಹಿಡಿದಿದೆ.

ಸಂವಿಧಾನದ ಪ್ರಸ್ತಾವನೆಯಲ್ಲಿ, ಭಾರತದ ಪ್ರಜೆಗಳಾದ ನಾವು ಎಂದು ಆರಂಭವಾಗಿ... ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ, ಅರ್ಪಿಸಿಕೊಂಡಿದ್ದೇವೆ ಎಂದು ಹೇಳಲಾಗಿದೆ. ನಮ್ಮ ಸಂವಿಧಾನದ ಪ್ರಸ್ತಾವನೆಯಲ್ಲಿ 'ಭಾರತವನ್ನು ಒಂದು ಸಾರ್ವಭೌಮ, ಸಮಾಜವಾದಿ, ಪ್ರಜಾಸತ್ತಾತ್ಮಕ ಗಣರಾಜ್ಯ'ವಾಗಿ ಘೋಷಿಸಿಕೊಂಡಿದ್ದೇವೆ. ಭಾರತದ ಸಮಾಜ ವಿಕಾಸಕೊಂಡಂತೆ ಸಂವಿಧಾನದ ಮೂಲ ಆಶಯಗಳನ್ನು ಬಲಪಡಿಸಲು ಪ್ರಸ್ತುತ ಸಂದರ್ಭಕ್ಕೆ ಅನ್ವಯಿಸಲು ಹಲವಾರು ತಿದ್ದುಪಡಿಗಳನ್ನು ಮಾಡಲಾಗಿದೆ. ಉದಾಹರಣೆಗೆ ಮೂಲ ಪ್ರಸ್ತಾವನೆಯಲ್ಲಿಯೇ 'ಸಮಾಜವಾದಿ' ಹಾಗೂ 'ರಾಷ್ಟ್ರದ ಏಕತೆಯನ್ನು ಹಾಗೂ ಅಖಂಡತೆಯನ್ನು' ಎನ್ನುವ ಪದಗಳನ್ನು ೧೯೭೬ರ ಸಂವಿಧಾನ (೪೨ನೇ ತಿದ್ದುಪಡಿ) ಅಧಿನಿಯಮದಿಂದ ಸೇರಿಸಲ್ಪಟ್ಟಿತು. ಈ ಪದಗಳು ಕೇವಲ ಪದಗಳಲ್ಲ ಸಮ ಸಮಾಜದ ನಿರ್ಮಾಣಕ್ಕಾಗಿ, ರಾಷ್ಟ್ರದ ಏಕತೆ ಮತ್ತು ಅಖಂಡತೆಯ ಸಂಕಲ್ಪಕ್ಕಾಗಿ ಪ್ರಸ್ತಾವನೆಗೆ ಸೇರಿಸಲ್ಪಟ್ಟವು. ಹೀಗೆ ೧೯೫೦ರಿಂದ ಕಾಲಕಾಲಕ್ಕೆ ಸಂವಿಧಾನವನ್ನು ಶಾಸಕಾಂಗದ ಮೂಲಕ ಹಾಗೂ ನ್ಯಾಯಾಂಗದ ಮೂಲಕ ಸಬಲೀಕರಣಗೊಳಿಸಿ ಸಂವಿಧಾನ ಕರ್ತೃಗಳ ಕನಸನ್ನು ನನಸಾಗಿಸಲು ಯತ್ನಿಸಲಾಗಿದೆ. ಆದರೆ ಇಂದು ಭಾರತದಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಸಂವಿಧಾನಕ್ಕೇ ಸವಾಲು ಎಸೆಯುತ್ತಿವೆ.

ಸ್ವಾತಂತ್ರ್ಯ, ಸಮಾನತೆ, ಸಹೋದರತೆ ಇವು ಫ್ರಾನ್ಸ್ ಕ್ರಾಂತಿಯ ಘೋಷವಾಕ್ಯಗಳಾದಂತೆ ಭಾರತದ ಸಂವಿಧಾನದ ಹೃದಯ ಮಿಡಿತವೂ ಹೌದು. ಇದರಲ್ಲಿನ 'ಸ್ವಾತಂತ್ರ್ಯ'ದಲ್ಲಿ ವೈಚಾರಿಕ ಸ್ವಾತಂತ್ರ್ಯ, ವಾಕ್ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಧರ್ಮಶ್ರದ್ಧೆ ಹಾಗೂ ಮತಾಚರಣೆಯ ಸ್ವಾತಂತ್ರ್ಯ. ವಿಶ್ವಾಸವಿಡುವ ಅಥವಾ ಯಾವುದೇ ದೇವರನ್ನು ಪೂಜಿಸುವ ಸ್ವಾತಂತ್ರ್ಯ ಇವು ಭಾರತದ ಸಾಮಾಜಿಕ ಜೀವನದಲ್ಲಿ ಸಂವಿಧಾನದತ್ತವಾಗಿ ಲಭಿಸಿವೆ. ಕಳೆದ ಎರಡು ದಶಕದಿಂದ ಭಾರತದಲ್ಲಿ ವೈಚಾರಿಕ ಸ್ವಾತಂತ್ರ್ಯಕ್ಕೆ ಮತ್ತು ವಾಕ್ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ, ಪ್ರಮುಖ ಹಕ್ಕುಗಳಿಗೆ ಧಕ್ಕೆಯಾಗುತ್ತಿದೆ. ಭಿನ್ನ ಧ್ವನಿಯನ್ನು ಅಡಗಿಸಲಾಗುತ್ತಿದೆ. ಪ್ರಭುತ್ವದ ವಿಮರ್ಶಕರನ್ನು ದಮನಿಸಲಾಗುತ್ತಿದೆ. 'ಜಾತ್ಯತೀತ' ಎಂದರೆ ಪ್ರಭುತ್ವ ಮತಧರ್ಮಗಳಿಂದ ಅತೀತವಾಗಿರಬೇಕು. ಆದರೆ ಇಂದು ಭಾರತದ ಪ್ರಭುತ್ವ ಒಂದು ಧರ್ಮದ, ಆ ಧರ್ಮದ ಮೌಢ್ಯಗಳ ಪ್ರತಿಪಾದಕನಾಗಿ ಬೆಳೆದುನಿಂತಿದೆ. 'ಧರ್ಮಶ್ರದ್ಧೆ' ಹಾಗೂ 'ಉಪಾಸನಾ' ಸ್ವಾತಂತ್ರ್ಯಗಳನ್ನು ತಪ್ಪಾಗಿ ಅರ್ಥೈಸಲಾಗುತ್ತಿದೆ.

ಕೇರಳದಲ್ಲಿ ಅಯ್ಯಪ್ಪ ಸ್ವಾಮಿ ದೇವಸ್ಥಾನದಲ್ಲಿ ಎಲ್ಲ ವಯೋಮಾನದ ಮಹಿಳೆಯರ ಪ್ರವೇಶ ಕುರಿತ ಸುಪ್ರೀಂ ಕೋರ್ಟ್ ತೀರ್ಪನ್ನು ಬಹಿರಂಗವಾಗಿಯೇ ವಿರೋಧಿಸಲಾಗುತ್ತಿದೆ, ಮಾತ್ರವಲ್ಲ ತೀರ್ಪಿನ ಜಾರಿಯನ್ನು ಗೂಂಡಾಗಿರಿಯ ಮೂಲಕ ತಡೆಯಲಾಗುತ್ತಿದೆ. ಕೇರಳ ರಾಜ್ಯದ ಪೊಲೀಸ್ ಪಡೆಯ ರಕ್ಷಣೆಯೊಂದಿಗೂ ಮಹಿಳೆಯರು ದೇವಸ್ಥಾನ ಪ್ರವೇಶಿಸಲು ಸಾಧ್ಯವಾಗುತ್ತಿಲ್ಲ. ರಾಜ್ಯ ಸರಕಾರದ ಮೇಲೆ ಸುಪ್ರೀಂ ಕೋರ್ಟಿನ ತೀರ್ಪು ಮರುಪರಿಶೀಲಿಸಲು ಅರ್ಜಿ ಹಾಕುವಂತೆ ಒತ್ತಡ ಹೇರಲಾಗುತ್ತಿದೆ. ಎಲ್ಲ ವಯೋಮಾನದ ಹೆಣ್ಣು ಮಕ್ಕಳು ಅಯ್ಯಪ್ಪ ದೇವಸ್ಥಾನ ಪ್ರವೇಶ ಪಡೆಯಬಹುದೆಂಬ ಆಶಯ ಅಲ್ಲಿ ಧರ್ಮದ್ರೋಹವೆಂಬಂತೆ ಬಿಂಬಿತವಾಗುತ್ತಿದೆ. ದೇವಸ್ಥಾನದ ಪ್ರವೇಶಕ್ಕೆ ಹೋದ ಮಹಿಳೆಯರ ಮೇಲೆ ದೈಹಿಕ ಹಲ್ಲೆ ನಡೆಸಲಾಗಿದೆ. ಅವರ ಮನೆಗಳನ್ನು ಧ್ವಂಸ ಮಾಡಲಾಗಿದೆ. ಮಹಿಳೆಯರು ದೇವಸ್ಥಾನ ಪ್ರವೇಶಿಸಲು ಬಂದರೆ ದೇವಸ್ಥಾನದ ದ್ವಾರ ಮುಚ್ಚಿ ಬೀಗ ಹಾಕುವುದಾಗಿ ದೇವಸ್ಥಾನದ ತಂತ್ರಿ ಹೇಳಿಕೆ ಕೊಟ್ಟಿದ್ದಾನೆ. ಇದು ಸಂವಿಧಾನದತ್ತವಾದ 'ಉಪಾಸನೆ'ಯ ಸ್ವಾತಂತ್ರ್ಯಕ್ಕೆ ಉಂಟುಮಾಡಿದ ಧಕ್ಕೆ. ನಂಬಿಕೆ, ಪರಂಪರೆ, ಸಂಪ್ರದಾಯ ಇವೆಲ್ಲ ಕಾಲಕಾಲಕ್ಕೆ ಬದಲಾಗಬೇಕು. ಕಾಲದ ಅವಶ್ಯಕತೆಯನ್ನು ಪೂರೈಸಬೇಕು. ಒಬ್ಬ ವ್ಯಕ್ತಿಗೆ ನಂಬಿಕೆಯ ಹಕ್ಕಿದೆ, ಆದರೆ ಆ ನಂಬಿಕೆ ಇನ್ನೊಬ್ಬನ ನಂಬಿಕೆಗೆ ಧಕ್ಕೆ ತರಬಾರದು. ಅದು ಸಂವಿಧಾನದ ಆಶಯ. ನಮ್ಮ ದೇಶದಲ್ಲಿ ಒಂದು ಕಾಲದಲ್ಲಿ ರೂಪಗೊಂಡ ನಂಬಿಕೆ, ಸಂಪ್ರದಾಯಗಳಲ್ಲಿ ಉಪಾಸನೆಯ ಸ್ವಾತಂತ್ರ್ಯ, ಲಿಂಗ, ಜಾತಿ, ಧರ್ಮಗಳ ಹೆಸರಿನಲ್ಲಿ ಸೀಮಿತಗೊಂಡಿದೆ. ಮನುಷ್ಯರಲ್ಲಿಯೇ ತಾರತಮ್ಯವನ್ನು ಎಣಿಸುವ ಗುರಿ ಹೊಂದಿದೆ. ಮಹಿಳೆಯರಿಗೆ ಹಿಂದುಳಿದವರಿಗೆ, ಕೆಳಜಾತಿಯವರಿಗೆ ಹಲವಾರು ದೇವಸ್ಥಾನಗಳಲ್ಲಿ ಪೂಜಾ ಕಾರ್ಯಕ್ರಮಗಳಲ್ಲಿ ನಿಷೇಧ ಹೇರಲಾಗಿದೆ. ಒಂದೇ ಧರ್ಮದಲ್ಲಿ ಮಹಿಳೆ ಮತ್ತು ಕೆಳಜಾತಿಯವರನ್ನು ಅಸ್ಪೃಶ್ಯರನ್ನಾಗಿಯೂ, ಕೀಳಾಗಿಯೂ ನೋಡಲಾಗುತ್ತಿದೆ. ಇದು ಒಂದೇ ಧರ್ಮದ ಬಹುಸಂಖ್ಯಾತರನ್ನು ಕೀಳರಿಮೆಗೆ

ಗುರಿ ಮಾಡುತ್ತಿದೆ. ಇಂಥ ನಂಬಿಕೆಗಳು ಸಂವಿಧಾನದ ಸಮಾನ ಅವಕಾಶದ ಪರಿಕಲ್ಪನೆಗೇ ವಿರುದ್ಧವಾದವುಗಳು. ದುರಂತವೆಂದರೆ ಇಂಥ ನಂಬಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ನಿಷೇಧಕ್ಕೊಳಗಾದವರನ್ನೇ ಬಳಸಿಕೊಳ್ಳುವುದು. ಇಂಥ ಒಂದು ಹೀನ ರಾಜಕೀಯ ನಡೆ ಭಾರತದ ನೆಲದಲ್ಲಿ ಧಾರ್ಮಿಕ ನಂಬಿಕೆ, ಸಂಪ್ರದಾಯ, ಸ್ವಾತಂತ್ರ್ಯದ ಹೆಸರಿನಲ್ಲಿ ನಡೆದಿದೆ. ಭಾರತೀಯ ಜನತಾ ಪಕ್ಷ ತನ್ನ ಸಾಮೂಹಿಕ ಸಂಘಟನೆಗಳೊಂದಿಗೆ ಕೇರಳದ ನೆಲದಲ್ಲಿ ರಾಜಕೀಯವಾಗಿ ನೆಲೆಯೂರಲು ಇಂಥ ಕೀಳು ರಾಜಕಾರಣವನ್ನು ಮಾಡುತ್ತಿದೆ. ಈ ಹಿಂದೆ 'ಮನು'ಮೂರ್ತಿಯ ಉದ್ಘಾಟನೆಯಲ್ಲಿ ಮಹಿಳೆಯರನ್ನೇ ಬಳಸಿಕೊಂಡಂತೆ, ಇಂದು ಮಹಿಳೆಯರ ಪರವಾಗಿ ಬಂದ ಸುಪ್ರೀಂ ಕೋರ್ಟಿನ ತೀರ್ಪಿನ ವಿರುದ್ಧ ಮಹಿಳೆಯರನ್ನೇ ಬಳಸಿಕೊಳ್ಳುತ್ತಿದೆ.

ಕರ್ನಾಟಕ ಮೂಲದ ಕೇಂದ್ರ ಸಚಿವ ಅನಂತಕುಮಾರ ಹೆಗಡೆ ಸಂವಿಧಾನ ಬದಲಾವಣೆಯೇ ತಮ್ಮ ಪಕ್ಷದ ಗುರಿ ಎಂದು ಹೇಳಿದ್ದರು. ಇದು ಹೇಳಿಕೆಗೆ ಮಾತ್ರ ಸೀಮಿತವಾಗಿಲ್ಲ. ಸಂವಿಧಾನದ ಆಶಯಗಳ ವಿರುದ್ಧ ಈಗಾಗಲೇ ಆಡಳಿತಾತ್ಮಕವಾದ, ಸಾಮಾಜಿಕವಾದ ಅಭಿಯಾನ ಆರಂಭವಾಗಿದೆ. ಸಂವಿಧಾನದ ಪ್ರಮುಖ ಆಶಯವಾದ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ, ವಿಚಾರವಾದಗಳ ಮೇಲೆ ಈಗಾಗಲೇ ದಾಳಿ ನಡೆದಿವೆ. ಸಂವಿಧಾನದಲ್ಲಿ ಸಮ ಸಮಾಜದ ನಿರ್ಮಾಣದ ಆಶಯದಿಂದ ತಿದ್ದುಪಡಿಯ ಮೂಲಕ ಸೇರಿಸಲಾದ 'ಸಮಾಜವಾದ' ಎಂಬ ಪರಿಕಲ್ಪನೆಯನ್ನೇ ಅಪ್ರಸ್ತುತಗೊಳಿಸಲಾಗಿದೆ. ಆರ್ಥಿಕ ಸ್ವಾತಂತ್ರ್ಯವನ್ನು ಸಾಮಾನ್ಯರಿಂದ ಕಸಿದು ಕಾರ್ಪೊರೇಟ್ ಕಂಪನಿಗಳಿಗೆ ಕೊಡಲಾಗಿದೆ. ಇಂಥ ನಡೆಗಳು ಅವ್ಯಾಹತವಾಗಿ ಪ್ರಭುತ್ವಗಳಿಂದಲೇ ನಡೆದು ಭಾರತದ ಸಂವಿಧಾನವನ್ನು ಅಪ್ರಸ್ತುತಗೊಳಿಸಲಾಗುತ್ತಿದೆ. ವಾಸ್ತವವಾಗಿ ಈಗ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಪಕ್ಷ ಸಾಂವಿಧಾನಿಕವಾಗಿ ಆಯ್ಕೆಯಾದರೂ ನಮ್ಮ ದೇಶದ ಸಂವಿಧಾನದ ಬಗೆಗೆ ಅವರಿಗೆ ಗೌರವವಿಲ್ಲ.

ಭಾರತದ ಸಂವಿಧಾನ ರಚನಾ ಸಮಿತಿ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಅಧ್ಯಕ್ಷತೆಯಲ್ಲಿ ಅಂತಿಮ ಕರಡು ಸಲ್ಲಿಸಿದಾಗ ಅದನ್ನು ರಾಷ್ಟ್ರೀಯ ಸ್ವಯಂಸೇವಕ ಸಂಘದ ನಾಯಕರಾಗಿದ್ದ ಶ್ರೀ ಗೋಳವಲಕರ್ ಅವರು ವಿರೋಧಿಸಿದ್ದರು. ಇಂದು ರಾಷ್ಟ್ರಧ್ವಜ ಹಿಡಿದು 'ಭಾರತ ಮಾತಾಕಿ ಜೈ' ಎನ್ನುವ ಕಾರ್ಯಕರ್ತರು ಗಮನಿಸಬೇಕು, ಭಾರತದ ತ್ರಿವರ್ಣಧ್ವಜ ಮತ್ತು ಅದರಲ್ಲಿನ ಅಶೋಕಚಕ್ರವನ್ನು ಗೋಳವಲಕರ್ ಅವರು ವಿರೋಧಿಸಿದ್ದರು. ಭಾರತಕ್ಕೆ ಭಗವಾಧ್ವಜ ರಾಷ್ಟ್ರೀಯ ಧ್ವಜವಾಗಬೇಕು ಎಂದು ಪ್ರತಿಪಾದಿಸಿದ್ದರು. ಭಾರತದ ಒಗ್ಗಟ್ಟಿಗೆ ಮೂಲವಾದ, ಸಂವಿಧಾನದ ಆಶಯವಾದ ಒಕ್ಕೂಟ ವ್ಯವಸ್ಥೆಯನ್ನೇ ಇವರು ವಿರೋಧಿಸಿದ್ದರು. ರಾಜ್ಯ, ಪ್ರಾಂತೀಯ ಸರಕಾರಗಳ ವಿಧಾನವನ್ನು, ಬಹುಭಾಷಾ ಆಡಳಿತ ಪದ್ಧತಿಯನ್ನು ವಿರೋಧಿಸಿದ್ದರು. 'ಹಿಂದಿ, ಹಿಂದು, ಹಿಂದುಸ್ತಾನ್' ಅವರ ಘೋಷಣೆಯಾಗಿತ್ತು. ಗೋಳವಲಕರ್ ಅವರ ಸರ್ವಾಧಿಕಾರಿ, ಸಂವಿಧಾನ ವಿರೋಧಿ, ಒಕ್ಕೂಟ ವ್ಯವಸ್ಥೆಗೆ ಮಾರಕವಾದ ನೀತಿಗಳನ್ನು ಇಂದು ಭಾರತದ ರಾಜಕೀಯ, ಸಾಮಾಜಿಕವಲಯಗಳಲ್ಲಿ ಜಾರಿ ಮಾಡಲಾಗುತ್ತಿದೆ. ಇದು ಭಾರತದ ಸಂವಿಧಾನ ಹಿಂದೆಂದಿಗಿಂತಲೂ ತೀವ್ರವಾಗಿ ಎದುರಿಸಬೇಕಾಗುತ್ತಿರುವ ಸವಾಲು.

ಭಾರತದ ಸಂವಿಧಾನದ ಆಶಯಗಳನ್ನು ಕಾಪಾಡಿಕೊಳ್ಳುವಲ್ಲಿ ಭಾರತದ ನ್ಯಾಯಾಂಗ ಮಹತ್ವದ ಪಾತ್ರವನ್ನು ವಹಿಸಿದೆ. ಯಾವುದೇ ಪಕ್ಷದ ಆಡಳಿತವಿರಲಿ, ಶಾಸಕಾಂಗದ ನಡೆ, ಕಾರ್ಯಾಂಗದ ಕ್ರಿಯೆ ಸಂವಿಧಾನದ ಆಶಯಕ್ಕೆ ವಿರುದ್ಧವಾಗಿದ್ದರೆ ನ್ಯಾಯಾಂಗ ಅದನ್ನು ತಡೆದಿದೆ. ಇತ್ತೀಚಿನ ದಿನಗಳಲ್ಲಿ ನ್ಯಾಯಾಂಗದ ಕ್ರಿಯಾಶೀಲತೆಯಿಂದ ಹೆದರಿದ ನಮ್ಮ ಆಡಳಿತಗಾರರು ನ್ಯಾಯಾಂಗವನ್ನೇ ಅಸ್ಥಿರಗೊಳಿಸುವ ಕ್ರಿಯೆಗೆ ಕೈಹಾಕಿದ್ದಾರೆ. ಆದರೆ ಅದಿನ್ನೂ ಸಾಧ್ಯವಾಗಿಲ್ಲ. ಆದರೆ ಭವಿಷ್ಯದಲ್ಲಿ ಹೀಗೇ ಇರುತ್ತದೆಂದು ಹೇಳಲಾಗುವುದಿಲ್ಲ. ರಾಮಮಂದಿರದಿಂದ – ಪಂಕ್ತಿಭೇದದವರೆಗಿನ ಸಾವಿರಾರು ವ್ಯಾಜ್ಯಗಳು ಇಂದು ನ್ಯಾಯಾಲಯದಲ್ಲಿ ವಿಚಾರಣೆಯ ಹಂತದಲ್ಲಿದೆ. ಮುಂದಿನ ದಿನಗಳಲ್ಲಿ ಕೇರಳದ ಅಯ್ಯಪ್ಪ ದೇವಸ್ಥಾನದಲ್ಲಿ ನಡೆದಂತೆ, ನ್ಯಾಯಾಲಯದ ತೀರ್ಪು ಜಾರಿಗೆ ತಡೆಯೊಡ್ಡಿದಂತೆ ಎಲ್ಲ ತೀರ್ಪುಗಳಿಗೂ ಒಂದು ಗುಂಪು ನಂಬಿಕೆಯ ಹೆಸರಿನಲ್ಲಿ ತಡೆಯೊಡ್ಡಿದರೆ ಸಂವಿಧಾನ, ನ್ಯಾಯಾಂಗದ ಅಸ್ಮಿತೆಗೇ ಧಕ್ಕೆ ಬರುತ್ತದೆ. ಸಂವಿಧಾನದ ಆಶಯಗಳನ್ನು ವಿಶ್ಲೇಷಿಸುವ ನ್ಯಾಯಾಂಗವೇ ಅಪ್ರಸ್ತುತವಾದರೆ ಅದು ನಾಗರಿಕ ಸಂಘರ್ಷಕ್ಕೆ ದಾರಿಮಾಡಿಕೊಡುತ್ತದೆ. ಅದು ಒಂದು ದೇಶದ ಐಕ್ಯತೆಗೇ ಮಾರಕವಾಗುತ್ತದೆ.

ಒಂದು ದೇವಸ್ಥಾನದ ಪ್ರವೇಶ, ಉಪಾಸನೆ, ನಂಬಿಕೆ, ಆಚರಣೆ ಇವೆಲ್ಲ ಧಾರ್ಮಿಕ ವಿಷಯಗಳೇ ಹೊರತು ರಾಜಕೀಯ ವಿಷಯಗಳಲ್ಲ. ಆದರೆ ಇಂದು ಧಾರ್ಮಿಕ ಅಸ್ಮಿತೆಯ ಮೂಲಕವೇ ರಾಜಕೀಯ ಅಸ್ತಿತ್ವ ಕಂಡುಕೊಳ್ಳುವ ರಾಜಕೀಯ ಪಕ್ಷಗಳಿರುವಾಗ 'ಉಪಾಸನೆ' 'ನಂಬಿಕೆ' ಎನ್ನುವ ಸಾಂವಿಧಾನಿಕ ಪದಗಳು ಅಸಂವಿಧಾನಿಕ ಮಾರ್ಗದಲ್ಲಿ ಬಳಸಲ್ಪಡುತ್ತವೆ. ವೈಚಾರಿಕವಾಗಿ ನೋಡಿದರೆ ಮೌಢ್ಯಾಚರಣೆಗೆ ಜನರನ್ನು ಬಲಿ ಮಾಡುತ್ತಿರುವ ಇಂದಿನ ದೇವಳಗಳಲ್ಲಿ ಭಕ್ತರನ್ನು ಭಕ್ತಿಯ ಹೆಸರಿನಲ್ಲಿ ಶೋಷಿಸಲಾಗುತ್ತಿದೆ. ಆಚರಣೆಗಳ ಹೆಸರಿನಲ್ಲಿ ಹಿಂಸೆಗೆ ಗುರಿಪಡಿಸಲಾಗುತ್ತಿದೆ. ನಿಜವಾದ ಧರ್ಮಾಸಕ್ತರು ಧಾರ್ಮಿಕರ ಸುಲಿಗೆ, ಶೋಷಣೆಯನ್ನು ತಡೆಯಲು ಹೋರಾಡಬೇಕು. ಆದರೆ ಮೌಢ್ಯತೆಯನ್ನೇ ಮೌಲ್ಯವಾಗಿಸಿ ರಾಜಕೀಯ ಬೆಳೆ ಬೆಳೆವ ಹುನ್ನಾರವನ್ನು ಧಾರ್ಮಿಕ, ದೈವಶ್ರದ್ಧೆಯುಳ್ಳವರು ಅರ್ಥಮಾಡಿಕೊಳ್ಳಬೇಕು.

ಇಂದು ಸಂವಿಧಾನವನ್ನು ಮತ್ತು ಸಂವಿಧಾನದ ಆಶಯಗಳನ್ನು ಉಳಿಸಿಕೊಳ್ಳುವ ಹೋರಾಟ ಪ್ರತಿಯೊಬ್ಬ ಭಾರತೀಯನ ಆದ್ಯಕರ್ತವ್ಯವಾಗಬೇಕು. ಆ ಮೂಲಕ ಮಾತ್ರ ಭಾರತದ ಪ್ರಜಾಸತ್ತೆಯನ್ನೂ ಒಕ್ಕೂಟ ವ್ಯವಸ್ಥೆಯನ್ನೂ ಉಳಿಸಿಕೊಳ್ಳಲು ಸಾಧ್ಯ. ಆ ನಿಟ್ಟಿನಲ್ಲಿ ಇತ್ತೀಚೆಗೆ ನ್ಯಾಯಮೂರ್ತಿ ನಾಗಮೋಹನದಾಸ ಅವರು ಸಂವಿಧಾನ ಓದು ಅಭಿಯಾನ ಆರಂಭಿಸಿದ್ದಾರೆ. ಅದು ಸ್ವಾಗತಾರ್ಹ ಕೆಲಸ. ಸಂವಿಧಾನ ಉಳಿದರೆ ಮಾತ್ರ 'ಭಾರತ' ಉಳಿಯುತ್ತದೆ ಮತ್ತು ಬೆಳೆಯುತ್ತದೆ. ಸಂವಿಧಾನ ರಕ್ಷಿಸಿ, ದೇಶ ಉಳಿಸಿ ಎಂಬುದು ಪ್ರಸ್ತುತ ಸಂದರ್ಭದ ಘೋಷಣೆಯಾಗಬೇಕು.




ತಿಂಗಳ ಪತ್ರಿಕೆ

ಹೊಸತು

ನಮ್ಮುದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | **₹ ೨೫/-** |
| **ವಾರ್ಷಿಕ ಚಂದಾ** | **₹ ೩೦೦/-** |
| **ಮೂರು ವರ್ಷಕ್ಕೆ** | **₹ ೬೦೦/-** |

**ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೮೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಹೆಣ್ಣು ಮಕ್ಕಳೇ ಜಾಸ್ತಿ. ಈಗ ಮಹಿಳೆ ಪುರುಷರಿಗೆ ಸಮಾನವಾಗಿ ಎಲ್ಲ ಕ್ಷೇತ್ರಗಳಲ್ಲೂ ಮುಂದಳದಲ್ಲಿ ಇರುವಾಗ ಭಾರತದಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗುವ ಸ್ತ್ರೀಯರ ಸಂಖ್ಯೆಯೂ ಹೆಚ್ಚಾಗುತ್ತಿದೆ. ಕೇಂದ್ರ ಸಚಿವರೊಬ್ಬರ ಪ್ರಕರಣವೂ ಅವುಗಳಲ್ಲಿ ಒಂದು.

ಎಂ. ಜೆ. ಅಕ್ಬರ್ ಹೆಸರಾಂತ ಪತ್ರಕರ್ತ ಈಗ ಮೋದಿ ಸರ್ಕಾರದಲ್ಲಿ ವಿದೇಶಾಂಗ ಸಚಿವಾಲಯದ ಸ್ಟೇಟ್ ಸಚಿವ, ಲೈಂಗಿಕ ಕಿರುಕುಳದ ಆರೋಪಿ. ಆರೋಪ ಮಾಡಿರುವವರು ಮಹಿಳಾ ಪತ್ರಕರ್ತರು. ಹಿರಿಯ ಪತ್ರಕರ್ತೆ ಪ್ರಿಯಾರಮಣಿ ಹಾಗೂ ಹದಿಮೂರು ಪತ್ರಕರ್ತೆಯರು ಎಂ. ಜೆ. ಅಕ್ಬರ್‌ರ ವಿರುದ್ಧ ಲೈಂಗಿಕ ಕಿರುಕುಳದ ಆರೋಪ ಮಾಡಿದ್ದಾರೆ. ವಿದೇಶ ಪ್ರವಾಸದಲ್ಲಿದ್ದ ಸಚಿವರು ವಾಪಸು ಬಂದನಂತರ ಆರೋಪವನ್ನು ತಿರಸ್ಕರಿಸಿದ್ದಾರೆ. ಪತ್ರಕರ್ತೆ ಪ್ರಿಯಾರಮಣಿ ವಿರುದ್ಧ ಮಾನನಷ್ಟ ಮೊಕದ್ದಮೆ ದಾಖಲಿಸಿದ್ದಾರೆ. ಉಳಿದ ಹದಿಮೂರು ಮಂದಿ ಮಹಿಳಾ ಪತ್ರಕರ್ತರ ವಿಚಾರ ಚಕಾರವೆತ್ತಿಲ್ಲ. ಪ್ರಿಯಾರಮಣಿ ಮಾನನಷ್ಟ ಮೊಕದ್ದಮೆಗೆ ಜಗ್ಗುವುದಿಲ್ಲ, ಎದುರಿಸುತ್ತೇನೆ ಎಂದು ಹೇಳಿದ್ದಾರೆ. ಇವರಿಗೆ ಎಲ್ಲ ಪತ್ರಕರ್ತರ ಬೆಂಬಲವೂ ಇದೆ. ಎಂದಿನಂತೆ ಪ್ರಧಾನಿ ಈ ವಿಚಾರದಲ್ಲಿ ಮೌನ ತಳೆದಿದ್ದಾರೆ. ಆರೋಪ ಎದುರಿಸುತ್ತಿರುವ ಸಚಿವರು ಅಳೆದೂ ಸುರಿದೂ ಒತ್ತಾಯದ ಮೇಲೆ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ್ದಾರೆ. 'ಮೀಟೂ' ಚಳವಳಿಯ ವಿಶೇಷ ಪ್ರಕರಣ ಇದು.

✶ ✶ ✶

ತೈಲ ಬೆಲೆ ಒಂದೇ ಸಮನೆ ಏರುತ್ತಿದೆ. ಕೆಲ ದಿನಗಳ ಹಿಂದೆ ಮೋದಿ ಸರಕಾರ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಎರಡು ರೂ.ಗಳ ಸುಂಕವನ್ನು ಕಡಿಮೆ ಮಾಡಿತು. ಭಾಜಪ ಆಡಳಿತದಲ್ಲಿರುವ ರಾಜ್ಯಗಳೂ ಕೂಡ ವಿಧಿಸಿರುವ ತೆರಿಗೆಯನ್ನು ಕಡಿತಗೊಳಿಸಿತು. ಆದರೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಲೆ ಏರುತ್ತಲೇ ಇದೆ. ಅದರ ಪರಿಣಾಮವಾಗಿ ತೈಲ ಕಂಪನಿಗಳು ಪೆಟ್ರೋಲ್, ಡೀಸಲ್ ದರವನ್ನು ಹೆಚ್ಚಿಸುತ್ತಲೇ ಇವೆ. ತೈಲಬೆಲೆ ಏರಿಕೆಯಿಂದಾಗಿ ಎಲ್ಲ ಸರಕುಗಳ ಬೆಲೆಯು ಅಧಿಕಗೊಂಡು ಜನಸಾಮಾನ್ಯರು ಕಕ್ಕಾಬಿಕ್ಕಿಯಾಗಿ ಹೆಚ್ಚು ಹಣ ತೆರುತ್ತಿದ್ದಾರೆ. ದಿನನಿತ್ಯ ಬಳಕೆಯ ವಸ್ತುಗಳು ದುಬಾರಿಯಾಗಿ ಬಡಜನರ ಜೀವನವನ್ನು ಅಸ್ತವ್ಯಸ್ತಗೊಳಿಸುತ್ತಿದೆ.

ಒಂದು ಕಡೆ ತೈಲಬೆಲೆ ಏರುತ್ತಿರುವಂತೆಯೇ ಡಾಲರ್ ಎದುರು ರೂಪಾಯಿಯ ಬೆಲೆಯೂ ಕುಸಿಯುತ್ತಿದೆ. ಕೆಲವು ವಾರಗಳ ಹಿಂದೆ ಡಾಲರ್ ಬೆಲೆ ರೂ. ೬೫ರ ಆಸುಪಾಸಿನಲ್ಲಿದ್ದುದು ಈಗ ರೂ. ೭೦ರ ಗಡಿದಾಟಿ ೭೩ ಚಿಲ್ಲರೆ ಆಗಿದೆ. ಇದರಿಂದಾಗಿ ಭಾರತದ ರಫ್ತು ವ್ಯಾಪಾರದ ಮೇಲೆ ದುಷ್ಪರಿಣಾಮ ಉಂಟಾಗಿದೆ. ಆಮದು ಮಾಡಿಕೊಳ್ಳುವ ಸರಕುಗಳಿಗೂ ಡಾಲರ್ ರೂಪದಲ್ಲಿ ಹಣಪಾವತಿಸಬೇಕಾಗಿರುವುದರಿಂದ ದುಬಾರಿ ಆಗುತ್ತಿದೆ. ವಿನಿಮಯ ದರವನ್ನು ನಿಯಂತ್ರಿಸಲು ರಿಸರ್ವ್ ಬ್ಯಾಂಕಿಗಾಗಲಿ, ಸರಕಾರಕ್ಕಾಗಲೀ ಸಾಧ್ಯವಾಗಿಲ್ಲ. ಜನಸಾಮಾನ್ಯರಿಗೆ ಮಾತ್ರ ಬವಣೆ ತಪ್ಪಿಲ್ಲ ಇದರಿಂದಾಗಿ.

✶ ✶ ✶

ಉಪಚುನಾವಣೆಗಳ ಭರಾಟೆ ಶುರುವಾಗಿದೆ ರಾಜ್ಯದಲ್ಲಿ. ಮೂರು ಲೋಕಸಭಾ ಹಾಗೂ ಎರಡು ವಿಧಾನಸಭಾ ಕ್ಷೇತ್ರಗಳು ಚುನಾವಣಾ ಕಣದಲ್ಲಿವೆ. ಕಾಂಗ್ರೆಸ್–ಜೆಡಿಎಸ್ ಮೈತ್ರಿ ಮುಂದುವರಿದಿದ್ದು ಚುನಾವಣೆ ಎದುರಿಸಲು ಸಿದ್ಧವಾಗಿದೆ. ಮಾಮೂಲಿನಂತೆ ಭಿನ್ನಮತ ಎಲ್ಲ ಪಕ್ಷಗಳಲ್ಲೂ ಭುಗಿಲೆದ್ದಿದೆ. ಚುನಾವಣೆಗಳಲ್ಲಿ ಬಹುತೇಕ ಜೆಡಿಎಸ್‌ಗೆ ಸಿಂಹಪಾಲು ದೊರೆತಿದೆ. ರಾಮನಗರದಿಂದ ಮುಖ್ಯಮಂತ್ರಿ ಕುಮಾರಸ್ವಾಮಿ ಪತ್ನಿ ಸ್ಪರ್ಧಿಸುತ್ತಿದ್ದಾರೆ. ಈಕೆ ಚುನಾವಣೆಯಲ್ಲಿ ಜಯಿಸಿ ಸಚಿವೆಯಾದರೂ ಅಚ್ಚರಿ ಇಲ್ಲ. ಭಾಜಪ ಶತಾಯಗತಾಯ ಉತ್ತಮ ಫಲಿತಾಂಶದ ನಿರೀಕ್ಷಣೆಯಲ್ಲಿದೆ. ಇಲ್ಲಿಯೂ ಅಪ್ಪ ಮಗನ ರಾಜಕೀಯ ಮುಂದುವರಿದಿದೆ. ಶಿವಮೊಗ್ಗದಲ್ಲಿ ಯಡಿಯೂರಪ್ಪ ಪುತ್ರ ರಾಘವೇಂದ್ರ ಕಣಕ್ಕಿಳಿದಿದ್ದಾರೆ. ಮೈತ್ರಿ ಸರಕಾರವನ್ನು ಉರುಳಿಸುವುದೇ ಭಾಜಪದ ಗುರಿಯಾಗಿಬಿಟ್ಟಿದೆ. ಮಾಧ್ಯಮಗಳಲ್ಲಿ ಪ್ರಚಾರ ಜೋರಾಗಿದೆ. ಕಾಂಗ್ರೆಸ್ ಭಾಜಪವನ್ನು ಮಣಿಸಲು ಎಲ್ಲ ಕ್ಷೇತ್ರಗಳಲ್ಲೂ ಉಸ್ತುವಾರಿಗೆ ನಾಯಕರುಗಳನ್ನೂ ಹೆಸರಿಸಿದೆ. ಅಸಮಾಧಾನ, ಕುಟುಂಬ ರಾಜಕಾರಣ. ಇವುಗಳ ಮಧ್ಯೆ ಈ ಉಪಚುನಾವಣೆಗಳು ಸ್ವಾರಸ್ಯಕರ. ಈ ಉಪಚುನಾವಣೆ ಫಲಿತಾಂಶದ ಮೇಲೆ ಮುಂದಿನ ಲೋಕಸಭಾ ಚುನಾವಣೆಗಳ ಭವಿಷ್ಯ ನಿರ್ಧಾರವಾಗಲಿದೆ ಎನ್ನುವುದು ರಾಜಕೀಯ ಲೆಕ್ಕಾಚಾರ. ಉಪಚುನಾವಣೆಗಳ ಹಿನ್ನೆಲೆಯಲ್ಲಿ ನೀತಿಸಂಹಿತೆ ಜಾರಿಯಲ್ಲಿರುವುದರಿಂದ ಸಚಿವ ಸಂಪುಟದ ವಿಸ್ತರಣೆ ಹಾಗೂ ನಿಗಮ ಮಂಡಲಿಗಳಿಗೆ ನೇಮಕ ಮುಂದಕ್ಕೆ ಹೋಗಿದೆ. ಸಚಿವ ಆಕಾಂಕ್ಷಿಗಳು ತಾಳ್ಮೆಯಿಂದ ಕಾದು ಕುಳಿತುಕೊಳ್ಳಬೇಕಾಗಿದೆ. ಉಪಚುನಾವಣಾ ಫಲಿತಾಂಶವು ಸಂಪುಟ ವಿಸ್ತರಣೆಯ ಮೇಲೆ ಪ್ರಭಾವ ಬೀರಲಿದೆ.

✶ ✶ ✶

ದೇಶದ ಆರ್ಥಿಕ ಮುಗ್ಗಟ್ಟು ತೀವ್ರವಾಗಿದ್ದು, ನಾಳಿನ ಪರಿಸ್ಥಿತಿ ಏನೆಂಬ ಪ್ರಶ್ನೆ ಗಾಢವಾಗಿ ತಟ್ಟುತ್ತಿದೆ. ಒಳಗೆ ಕುದಿಯುತ್ತಿದ್ದರೂ ಏನೂ ಆಗಿಲ್ಲವೇನೋ ಎಂಬಂತೆ ಮೇಲೆ ಮೇಲೆ ತೋರಿಕೆಯ ಸಮಾಧಾನ ಮತ್ತು ಭರವಸೆಗಳ ಭಾವ ವ್ಯಕ್ತವಾಗುತ್ತಿದೆ. ಔದ್ಯಮಿಕ ಘಟಕಗಳನ್ನು ಹೊಸದಾಗಿ ಸ್ಥಾಪಿಸುವವರಿಗೆ ಮತ್ತು ದೊಡ್ಡ ಪ್ರಮಾಣದ ವಹಿವಾಟು ನಡೆಸುವವರಿಗೆ ಸಾಲ ಕೊಡಲು ಒಂದು ಹಣಕಾಸು ಸಂಸ್ಥೆಯನ್ನು ಸ್ಥಾಪಿಸಲಾಗಿತ್ತು. ಬ್ಯಾಂಕುಗಳಿಗೆ ಸಾಲ ವಾಪಸ್ಸು ಮಾಡದೆ ಬಾಕಿ ಉಳಿಸಿಕೊಳ್ಳಲಾಗಿರುವ ಹಣ ಸುಮಾರು ಒಂದು ಲಕ್ಷ ಕೋಟಿ ರೂಪಾಯಿಗಳಿಗೂ ಅಧಿಕವಾಗಿದೆ. ಸಾಲಗಾರರು ಕೇಂದ್ರ ಸರ್ಕಾರದ ಸಹಾಯದಿಂದಾಗಿ ದೇಶದಿಂದ ಪರಾರಿಯಾಗಿದ್ದಾರೆ. ಹೀಗಿರುವಾಗ ಮೂಲಸೌಕರ್ಯ ನಿರ್ಮಾಣ ನಿಧಿಯ ಸಂಸ್ಥೆಯು ನೀಡಿರುವ ಸಾಲ ಸಹ ಹಿಂದಿರುಗುವುದು ಅನುಮಾನವೆಂದು ಹೇಳಲಾಗಿದೆ. ಆ ಸಂಸ್ಥೆಯು ಕುಸಿದು ಬಿದ್ದಿದೆ ಮತ್ತು ಅದರ ಚೇತರಿಕೆಗೆ ಕ್ರಮ ಕೈಗೊಳ್ಳಲು ಸಮಿತಿಯನ್ನು ರಚಿಸಲು ಕೇಂದ್ರ ಸರ್ಕಾರ ಯೋಚಿಸುತ್ತಿದೆ. ಒಟ್ಟಿನಲ್ಲಿ ರಾಷ್ಟ್ರೀಯ ಹಣಕಾಸು ಸ್ಥಿತಿಯು ದಿವಾಳಿತನದ ಹಂತಕ್ಕೆ ಕುಸಿದಿದೆ. ಪೆಟ್ರೋಲ್ ಮತ್ತು ಡೀಸೆಲ್ ಬೆಲೆಯ ಬಗ್ಗೆ ಹೇಳುವುದೇ ಬೇಡ. ಸದ್ಯದಲ್ಲೇ 'ಸೆಂಚುರಿ' ಬಾರಿಸುವ ಹೊಸ ದಾಖಲೆ ಬರೆಯಲಾಗುವ ಸಾಧ್ಯತೆ ಇದೆ. ಲೀಟರಿಗೆ ೬೦–೭೦ ರೂಪಾಯಿಗಳಿರುತ್ತಿದ್ದುದು ೧೦೦ ಮುಟ್ಟಿದೆಯೆಂದರೆ ದೇಶದ ಮೇಲೆ ಪರ್ವತ ಬಿದ್ದಿದೆ ಇಲ್ಲವೇ ಬೀಳಲಿದೆ ಎಂದೇ ಅರ್ಥ. ಪ್ರಧಾನಿಯೂ ಸೇರಿದಂತೆ ಕೇಂದ್ರದ ಇಂದಿನ ಮಂತ್ರಿಗಳೆಲ್ಲಾ ಹಿಂದೆ ಕಾಂಗ್ರೆಸ್ ಸರ್ಕಾರದಡಿ ಲೀಟರ್‌ಗೆ ೭೦ ರೂಪಾಯಿ ಆದಾಗ ಆರ್ಭಟಿಸಿದ್ದುದನ್ನು ನೆನಪಿಸಿಕೊಳ್ಳಬಹುದು. ಈಗ ಮೋದಿಯವರು ಆ ಬಗ್ಗೆ ತುಟಿ ಬಿಚ್ಚದ ಜಾಣ ಸಂನ್ಯಾಸಿಯಾಗಿದ್ದಾರೆ. ಗಡ್ಡವನ್ನು ಇನ್ನೂ ದೊಡ್ಡದಾಗಿ ಬೆಳೆಸಿಕೊಂಡು ಅವರು ಸ್ವಾಮೀಜಿ ಪಟ್ಟಕ್ಕೂ ಏರಿಬಿಡುವ ವೇಳೆಗೆ ಬೆಲೆಗಳು ಅನೂಹ್ಯವಾಗಿ ಗಗನಕ್ಕೇರಿರುತ್ತವೆ. ವಿದೇಶಿ ವಿನಿಮಯದಲ್ಲಿ ಡಾಲರಿಗೆ ೮೦ ರೂಪಾಯಿಗಳನ್ನು ಮೀರುವ ಆತಂಕ ನಮ್ಮೆದುರಿನಲ್ಲಿದೆ. ಅಂದರೆ ಆರ್ಥಿಕತೆಯು ಪಾತಾಳಕ್ಕೆ ಮುಟ್ಟಿದೆ. ಪ್ರಧಾನಿಯವರು ಎಲ್ಲೂ ಹೇಳುತ್ತಿಲ್ಲ, ಆದರೆ ಅವರಿಗೂ ತಿಳಿದಿರುವಂತೆ ನಿರುದ್ಯೋಗದ ಸಮಸ್ಯೆಯು ಹಿಮಾಲಯದಷ್ಟು ಬೆಳೆದಿದೆ. ಗುಜರಾತಿನಿಂದ ಬಿಹಾರ – ಉತ್ತರ ಪ್ರದೇಶಗಳ ದುಡಿಮೆಗಾರರನ್ನು ಹೊರದೂಡಲಾಗುತ್ತಿರುವುದು ಇದಕ್ಕೆ ಹಿಡಿಯಲಾದ ಕನ್ನಡಿ. ಮೋದಿಯವರ ಹುಲಿಯು ಮೈಮೇಲೆಲ್ಲಾ ಉದ್ಯಮಗಳ ಚಿಹ್ನೆಯನ್ನು ಬಳಿದುಕೊಂಡು 'ಮೇಕ್ ಇನ್ ಇಂಡಿಯಾ' ಎಂದು ಗರ್ಜಿಸುತ್ತಿತ್ತು. ಈಗ ಅದರ ಸದ್ದಡಗಿದೆ. ಏಕೆಂದರೆ ವಿದೇಶಿ ಬಂಡವಾಳದ ಮೂಟೆಗಳನ್ನು ಹೊತ್ತು ತಂದು ಯಾರೂ ಹೇಳಿಕೊಳ್ಳಬಹುದಾದಷ್ಟು ಉದ್ಯಮಗಳನ್ನು ಸ್ಥಾಪಿಸಲಿಲ್ಲ, ಯಾರಿಗೂ ಉದ್ಯೋಗ ನೀಡಲಿಲ್ಲ, ಏನನ್ನೂ ರಫ್ತು ಮಾಡಲಿಲ್ಲ. ವಿದೇಶಿ ಬಂಡವಾಳದ ನದಿ ಹರಿಸಲು ಮೋದಿಯವರು ಐವತ್ತಕ್ಕೂ ಹೆಚ್ಚು ದೇಶಗಳಿಗೆ ಹಾರಿಹೋದರು ಮತ್ತು ಅಲ್ಲಿಂದ ಬರಿಗೈಯ್ಯಲ್ಲಿ ಹಾರಿ ಬಂದರು. ನಮ್ಮ ಖಜಾನೆಯಿಂದ ಸುಮಾರು ೫೦೦ ಕೋಟಿಗಳಿಗೂ ಹೆಚ್ಚು ಹಣ ಖಾಲಿಯಾಯಿತು, ಅಷ್ಟೆ. ವಿದೇಶಿ ವಿನಿಮಯದಲ್ಲಿ ಕುಸಿತ ಮತ್ತು ಪೆಟ್ರೋಲ್ ಬೆಲೆಯಿಂದಾಗಿ ನಮ್ಮಲ್ಲಿ ಶೇಖರಣೆಗೊಂಡಿದ್ದ

ಬಿಲಿಯಗಟ್ಟಲೆ ಡಾಲರುಗಳು ಮಾಯವಾಗುತ್ತಿವೆ. ರಿಸರ್ವ್ ಬ್ಯಾಂಕ್‌ನ ಮಾಜಿ ಗವರ್ನರ್ ಬಿಮಲ್ ಜಲಾನ್ ಇತ್ತೀಚೆಗಷ್ಟೆ ಹೇಳಿದ್ದು ಜನರ ಕಿವಿಗೆ ಬಿದ್ದಿದೆ: ವಿದೇಶಿ ವಿನಿಮಯದ ಶೇಖರಣೆಯು ಸದ್ಯದಲ್ಲಿ ಬೇರೆಲ್ಲ ಪದಾರ್ಥಗಳ ಬೆಲೆ ಕುಸಿಯದಂತೆ ತೋರಿಸಿಕೊಳ್ಳಲು ಬಳಸಲಾಗುತ್ತಿದೆ. ಅದು ಖಾಲಿಯಾದಾಗ ಖಜಾನೆಯಲ್ಲಿ ಏನೂ ಉಳಿದಿರುವುದಿಲ್ಲ, ಯಾವ ಪದಾರ್ಥಗಳ ಬೆಲೆಗಳೂ ಸ್ಥಿರವಾಗಿರುವುದಿಲ್ಲ. ರಫ್ತಿನಿಂದ ಕಡಿಮೆ ಆದಾಯ ಮತ್ತು ಆಮದಿನಿಂದ ಹೆಚ್ಚು ವೆಚ್ಚ ಈಗಾಗಲೆ ನೆಲೆಗೊಂಡಿದೆ. ವಿದೇಶಿ ಹಣದ ಶೇಖರಣೆ ಸುತರಾಂ ನಡೆಯುತ್ತಿಲ್ಲ. ಇದರ ಅಪಾರ ದುಷ್ಪರಿಣಾಮಗಳನ್ನು ಜೇಟ್ಲಿಯವರಾಗಲಿ ಮೋದಿಯವರಾಗಲಿ ಜನರಿಗೆ ತಿಳಿಸುತ್ತಿಲ್ಲ. ಇದು ಹೀಗೆಯೇ ಮುಂದುವರಿದರೆ ನಾಲ್ಕೈದು ತಿಂಗಳು ಗಳಲ್ಲಿ ನಮ್ಮ ದೇಶವು ಮೂರು ವರ್ಷಗಳ ಹಿಂದೆ ಗ್ರೀಸ್ ಎದುರಿಸುತ್ತಿದ್ದ ದುಸ್ಥಿತಿಯನ್ನು ಮೀರಿ ಬಿಡುವ ಸಾಧ್ಯತೆ ಇದೆ. ಮೋದಿಯವರ ಘನ ಸರ್ಕಾರ ಕಳೆದ ನಾಲ್ಕು ವರ್ಷಗಳಲ್ಲಿ ಸಾಧಿಸಿದ್ದು ಇದೇ!! ದೇಶದ ಜನರ ಬ್ಯಾಂಕ್ ಖಾತೆಗಳಿಗೆಲ್ಲಾ ತಲಾ ೧೫ ಲಕ್ಷ ರೂಪಾಯಿಗಳನ್ನು ತುಂಬುವ ಆಮಿಷವನ್ನೊಡ್ಡಿ ಶೇಕಡ ೩೧.೪ರಷ್ಟು ಮತ ಗಳನ್ನು ಪಡೆದು ಪ್ರಧಾನಿಯಾದ 'ಸನ್ಮಾನ್ಯ' ಮೋದಿಯವರು ಇದ್ದ ಎಲ್ಲರ ಬ್ಯಾಂಕ್ ಖಾತೆ ಗಳಿಗೂ ಕನ್ನ ಹಾಕಿದ್ದಾರೆ. ದೇಶದ ಆರ್ಥಿಕ ಹತಾಶೆಯು ಸ್ವಾತಂತ್ರ್ಯೋತ್ತರ ವರ್ಷಗಳಲ್ಲಿ ಎಂದೂ ಇಷ್ಟು ಹೀನಾಯವಾಗಿರಲಿಲ್ಲ. ಜನರಿಗೆ ಆರ್ಥಿಕತೆಯ ಒಳಸುಳಿವುಗಳೆಲ್ಲಾ ಹೇಗೂ ತಿಳಿಯು ವುದಿಲ್ಲವೆಂಬ ಖಾತ್ರಿಯಿಂದ ಪ್ರಧಾನಿಯವರು ತಮ್ಮ ಅಬ್ಬರದ ಪ್ರಚಾರ ಮುಂದುವರಿಸಿದ್ದಾರೆ. ಅವರ ಇಂದಿನ ಅಬ್ಬರದಿಂದ ಮುಗ್ಧರಾಗಿರುವ ಜನ ಇನ್ನು ಕೆಲವು ತಿಂಗಳುಗಳಲ್ಲಿ ತಾವೇ ಬಾಯಿ ಬಡಿದುಕೊಳ್ಳುವ ಸ್ಥಿತಿ ಉಂಟಾದರೆ ಆಶ್ಚರ್ಯ ಇಲ್ಲ. ಜನರು ಪ್ರಜ್ಞಾವಂತರಾಗಬೇಕಾದ ತುರ್ತು ಎಷ್ಟಿದೆಯೆಂಬುದು ಇದರಿಂದ ತಿಳಿಯುತ್ತದೆ. ೨೦೧೯ರ ಪಾರ್ಲಿಮೆಂಟ್ ಚುನಾವಣೆಯ ವೇಳೆ ತಮ್ಮ ಆಯ್ಕೆ ಏನಾಗಬೇಕೆಂದು ಇಂದೇ ನಿರ್ಧರಿಸುವುದು ಆರೋಗ್ಯಕರ.

* * *

ಅಕ್ಟೋಬರ್ ೧೦ರಂದು ಫ್ರಾನ್ಸಿನ ಡಸೋಲ್ ಕಂಪನಿಯು ನಮ್ಮ ದೇಶದ ಕೇಂದ್ರ ಸರ್ಕಾರಕ್ಕೆ ಮುಟ್ಟಿ ನೋಡಿಕೊಳ್ಳುವಂತಹ ಭಯಾನಕ ಪೆಟ್ಟು ನೀಡಿತು: "ನಮ್ಮ ಕಂಪನಿಯು ರಫಾಲ್ ಯುದ್ಧ ವಿಮಾನಗಳ ತಯಾರಿಕೆ ಮತ್ತು ಸರಬರಾಜು ಬಾಬ್ತು ಭಾರತದಲ್ಲಿ ಯಾವ ಕಂಪನಿಯ ಸಹಯೋಗ ಪಡೆಯಬೇಕೆಂಬುದರ ಬಗ್ಗೆ ನಮಗೆ ಆಯ್ಕೆಯ ಪ್ರಶ್ನೆಯೂ ಇರಲಿಲ್ಲ, ಸ್ವಾತಂತ್ರ್ಯವೂ ಇರಲಿಲ್ಲ; ಭಾರತ ಸರ್ಕಾರದ ನಿರ್ಧಾರದಂತೆ ಅನಿಲ್ ಅಂಬಾನಿ ಕಂಪನಿಯನ್ನು ನಾವು ಆಯ್ಕೆ ಮಾಡಿಕೊಳ್ಳಲೇಬೇಕಾಯಿತು." ಇದು ಡಸೋಲ್ ಕಂಪನಿಯ ಹೇಳಿಕೆ. ಶ್ರೀ. ಮೋದಿ ಮತ್ತು ಶ್ರೀಮತಿ ನಿರ್ಮಲಾ ಸೀತಾರಾಮನ್ ಇಬ್ಬರನ್ನೂ ಗೋಣಿಚೀಲಗಳಲ್ಲಿ ತುಂಬಿ ಡಸೋಲ್ ಕಂಪನಿಯು ಚೀಲದ ಬಾಯಿಗೆ ಹುರಿಯನ್ನು ಕಟ್ಟಿಬಿಟ್ಟಿತು. ರಕ್ಷಣಾ ಸಚಿವೆಯು ತಮ್ಮ ಸ್ವಂತದ ರಕ್ಷಣೆಗಾಗಿ ಅಕ್ಟೋಬರ್ ೧೧ರಂದೇ ಫ್ರಾನ್ಸಿಗೆ ಪ್ರಯಾಣ ಬೆಳೆಸಿದರು. "ಅಂಬಾನಿ ಕಂಪನಿಯ ಆಯ್ಕೆಯನ್ನು ಸ್ವತಃ ನಾವೇ ಮಾಡಿಕೊಂಡೆವು" ಎಂದು ಡಸೋಲ್ ಕಂಪನಿಯಿಂದ ಹೇಳಿಕೆ ನೀಡಿಸುವುದು ಮತ್ತು ಫ್ರಾನ್ಸಿನ ಮಾಜಿ ಅಧ್ಯಕ್ಷ ಹೊಲಾಂಡ್‌ಗೆ ಬಾಯಿಗೆ ಬೀಗ ಜಡಿದುಕೊಂಡು ಸುಮ್ಮನೆ ಬಿದ್ದಿರು ಎಂದು ತಾಕೀತು ಮಾಡುವುದು ಭೇಟಿಯ ಅಪ್ರಕಟಿತ ಉದ್ದೇಶ. ಅಕ್ಟೋಬರ್ ೯ರಂದು ಇದೇ ನಿರ್ಮಲಾ ಅವರು 'ದಿ ಹಿಂದು' ಪತ್ರಿಕೆಗೆ ದೀರ್ಘ ಸಂದರ್ಶನ ನೀಡಿ ರಫಾಲ್ ಕೊಳ್ಳುವುದರಲ್ಲಿ ಯಾವ ಹಗರಣವೂ ಇಲ್ಲ, ಕಾಂಗ್ರೆಸ್ ಬೇಕಾದರೆ ಬೊಬ್ಬೆ ಹೊಡೆಯಲಿ, ಎಂದು ಹೇಳಿದ್ದರು. ಎರಡು ದಿನಗಳ ನಂತರ ಫ್ರಾನ್ಸಿಗೆ ಹಾರಬೇಕಾದ ಅನಿವಾರ್ಯತೆ ಬಂದಿತು! ರಫಾಲ್ ಕೊಳ್ಳುವಿಕೆಯು ಭಾರಿ ಹಗರಣದ ಆಗರವೆಂಬುದಕ್ಕೆ ಇದಕ್ಕಿಂತಲೂ ಬೇರೆ ಸಾಕ್ಷಿ ಬೇಕೇ? ಅಕ್ಟೋಬರ್ ೧೦ರಂದು ಸರ್ವೋಚ್ಚ ನ್ಯಾಯಾಲಯವು ಹಗರಣದ ಬಗ್ಗೆ ವಿವರಗಳನ್ನು ಸಲ್ಲಿಸಬೇಕೆಂದು ಕೇಂದ್ರಕ್ಕೆ ಸೂಚಿಸಿ 'ಮುಚ್ಚಿದ ಲಕೋಟೆಯಲ್ಲಿ ನೀಡಿ' ಎಂದು ನಿರ್ದೇಶಿಸಿತ್ತು. ಬೇರೊಬ್ಬರು ರಕ್ಷಣಾ ಸಚಿವರಾಗಿದ್ದಾಗ ನಡೆದ ಹಗರಣಕ್ಕೆ ಈಗ ಶ್ರೀಮತಿ ನಿರ್ಮಲಾ ಸಮರ್ಥನೆ ಒದಗಿಸುವ ಪೇಚಿಗೆ ಸಿಲುಕಿದ್ದಾರೆ. ಕೇಂದ್ರ ಸಚಿವ ನಿತಿನ್ ಗಡ್ಕರಿಯಂತೆ ನಿರ್ಮಲಾ ಅವರು ಅಂತಸ್ಸತ್ವವನ್ನು ಅರುಹಿ ನಿಸೂರಾಗಿ ಕುಳಿತು ಬಿಡಬಹುದಿತ್ತು. ಆದರೆ ಅವರು ಅದನ್ನು ಮಾಡ ಬಲ್ಲರೆ? ಗಡ್ಕರಿಯೇನೋ ಹೇಳಿಬಿಟ್ಟರು: "ನಾವು ಹೇಗೂ ಚುನಾವಣೆಯಲ್ಲಿ ಗೆಲ್ಲುವುದಿಲ್ಲವೆಂದು ತಿಳಿದಿದ್ದೆವು, ಆದ್ದರಿಂದ ೧೫ ಲಕ್ಷ ರೂಪಾಯಿ ತುಂಬುವುದು ಮುಂತಾದ ಭರವಸೆಗಳನ್ನು ಬೇಕಾಬಿಟ್ಟಿ ನೀಡಿಬಿಟ್ಟಿದ್ದೆವು. ಈಗ ಮಂದಹಾಸ ಬೀರಿ ಸುಮ್ಮನಾಗುವುದಷ್ಟೇ ನಮಗುಳಿದಿರುವ ಮಾರ್ಗ" ಎಂದು. ಇದರಿಂದ ಪ್ರಧಾನಿಯವರಿಗೆ ಇರಿಸುಮುರಿಸೇನಾದರೂ ಉಂಟಾಗಿದ್ದರೆ ಅವರು ಅದನ್ನು ಬಹಿರಂಗಗೊಳಿಸಿಲ್ಲ. 'ಮೌನಿಬಾಬಾ' ಎಂದು ಮನಮೋಹನಸಿಂಗರನ್ನು ಛೇಡಿಸುತ್ತಿದ್ದ ಮೋದಿ ಬಾಬಾ ಈಗ ಬೇಕಾದಷ್ಟು ಯಥಾ ಪ್ರಕಾರ ಮಾತನಾಡುತ್ತಾರೆ, ಆದರೆ ಕೆಲವು ಸಂಗತಿಗಳು ಘಟಿಸಿಯೇ ಇಲ್ಲವೆಂಬ ಬೂಟಾಟಿಕೆ ಅವರನ್ನು ಬಾಧಿಸುತ್ತಿದೆಯೆಂಬುದನ್ನು ಜನ ಅವರ ಕಣ್ಣುಗಳಲ್ಲಿ ನೋಡಬಹುದಾಗಿದೆ. ಮೋದಿ ಯವರ ಮೋಡಿಯ ಜಾಗದಲ್ಲಿ ಈಗ 'ಮೂಡಿ' ಮನೆಮಾಡಿದೆ!

* * *

ಇರಾನಿನಿಂದ ತೈಲ ಕೊಳ್ಳಲು ಮತ್ತು ರಷ್ಯಾದಿಂದ ಎಸ್ – ೪೦೦ ಯುದ್ಧ ವಿಮಾನ ಗಳನ್ನು ಕೊಳ್ಳಲು ವಾಷಿಂಗ್‌ಟನ್ನಿನ ಮಹಾರಾಜ ಟ್ರಂಪ್‌ನಿಂದ ನಮ್ಮ ದೇಶವು ಪರವಾನಗಿ ಪಡೆಯಬೇಕಂತೆ. ಆತ ದೊಣೆನಾಯಕನ ಪಟ್ಟ ಕಟ್ಟಿಕೊಂಡಿದ್ದಾನೆ ಮತ್ತು ನಮ್ಮ ಸರ್ಕಾರ ಡೊಗ್ಗುಸಲಾಮು ಹಾಕಲು ಸಿದ್ಧವಾಗಿರಬೇಕೆಂದು ಆಣತಿ ನೀಡುತ್ತಿದ್ದಾನೆ. "ನಾವು ಮಂಡಿಯೂರಿ ಕೂಡುವುದಿಲ್ಲ" ಎಂದು ಕೇಂದ್ರ ಸರ್ಕಾರವು ನಿಷ್ಠುರವಾಗಿ ಹೇಳಿದರೆ ಜನತೆ ಅದಕ್ಕೆ ದನಿ ಗೂಡಿಸಲು ಸಿದ್ಧವಿರುತ್ತದೆ. "ನಾವೇನು ಮಾಡುತ್ತೇವೆ ನೋಡಿ, ನೀವು ಬಹಳ ದಿನ ಕಾಯ ಬೇಕಾಗುವುದಿಲ್ಲ" ಎಂದು ಟ್ರಂಪ್ ಅಕ್ಟೋಬರ್ ೧೦ರಂದು ತಿಳಿಸಿರುವುದಾಗಿ ವರದಿಯಾಗಿದೆ. ರಷ್ಯಾದಿಂದ ಯುದ್ಧ ವಿಮಾನಗಳನ್ನು ಕೊಳ್ಳಲು ಅಕ್ಟೋಬರ್ ೯ರಂದು ಕೇಂದ್ರ ಸರ್ಕಾರವು ಒಪ್ಪಂದ ಮಾಡಿಕೊಂಡಿದೆ, ಆದರೆ ಅದನ್ನು ಧೈರ್ಯವಾಗಿ ಘೋಷಿಸಲು ಹಿಂಜರಿಯುತ್ತಿದೆ. ಆ ಟ್ರಂಪ್‌ನ ಬಾಯಿ ಬೊಂಬಾಯಿ, ಅದಕ್ಕೆ ನಮ್ಮ ದೇಶವು ಕಂಗಾಲಾಗಬೇಕಾಗಿಲ್ಲ; ಆತನ ಬಾಯಿಗೆ ಒಂದು ಬಡಿಗೆ ತೂರಿಸುವ ಕೆಲಸ ಆದರೆ ಸಾಕು.

* * *

೨೦೧೯ರ ಮೇ ತಿಂಗಳಲ್ಲಿ ಪಾರ್ಲಿಮೆಂಟ್‌ಗೆ ದೇಶಾದ್ಯಂತ ಚುನಾವಣೆ ನಡೆಯಬೇಕಾಗಿದೆ. ಒಂದೆರಡು ಕ್ಷೇತ್ರಗಳಿಂದ ನಾಲ್ಕು ವರ್ಷಗಳ ಹಿಂದೆ ಚುನಾಯಿತರಾಗಿದ್ದವರು. ರಾಜಿನಾಮೆ ಸಲ್ಲಿಸಿರು ವುದರಿಂದ ಆ ಸ್ಥಾನಗಳನ್ನು ತುಂಬಲು ಈಗ ನಮ್ಮ ರಾಜ್ಯದ ಎರಡು ಕ್ಷೇತ್ರಗಳಲ್ಲಿ ಮರುಮತದಾನ ನಡೆಸುವುದಾಗಿ ಚುನಾವಣಾ ಆಯೋಗವು ವೇಳಾಪಟ್ಟಿಯನ್ನು ಸಿದ್ಧಗೊಳಿಸಿದೆ. ಚುನಾವಣಾ ಫಲಿತಾಂಶವು ನವೆಂಬರ್ ಅಂತ್ಯದಲ್ಲಿ ಹೊರ ಬೀಳುವ ನಿರೀಕ್ಷೆ ಇದೆ. ಮೇ ೨೦೧೯ರ ಚುನಾವಣೆಗೆ ಫೆಬ್ರವರಿಯಲ್ಲಿ ಹೊರಸೂಚನೆ ಬಂದೀತು. ಅಂದರೆ ಚುನಾಯಿತರಿಗೆ ಜೀವ ಎರಡು ತಿಂಗಳದು ಮಾತ್ರ. ಪಾರ್ಲಿಮೆಂಟ್ ಸದಸ್ಯರಾಗಿ ಅವರಿಬ್ಬರೂ ಸಭಾಧ್ಯಕ್ಷರ ಕೊಠಡಿ ಯಲ್ಲಿ ಶಪಥ ಕೈಗೊಳ್ಳಬಹುದೇ ವಿನಾ ಲೋಕ ಸಭೆಯಲ್ಲಿ ಭಾಗವಹಿಸುವ ಅವಕಾಶ ಬಹುಮಟ್ಟಿಗೆ ಸೊನ್ನೆ. ಹಾಗಿದ್ದರೆ ಚುನಾವಣೆಯ ಈಗಿನ ಪ್ರಹಸನ ಏಕೆ? ಏಕೆಂದರೆ, ಗೆದ್ದು ಶಪಥ ತೆಗೆದು ಕೊಳ್ಳುವವರಿಗೆ ಅವರು ಬದುಕು ಕೊನೆ ಮುಟ್ಟುವ ವರೆಗೆ ಪಿಂಚಣಿ ದೊರೆಯುತ್ತದಲ್ಲಾ, ಅದಕ್ಕೆ! ನಮ್ಮ ರಾಜಕೀಯ ಪಕ್ಷಗಳಿಗೆ ಮರ್ಯಾದೆ ಎಂಬುದೇನಾದರೂ ಇದ್ದರೆ ಈ ಮರು ಚುನಾವಣೆಯಲ್ಲಿ ಯಾವ ಪಕ್ಷವೂ ಅಭ್ಯರ್ಥಿಗಳನ್ನು ಹಾಕದೆ ಚುನಾವಣಾ ಆಯೋಗದ ಪ್ರಹಸನಕ್ಕೆ ಬಹಿಷ್ಕಾರ ಹಾಕಬೇಕು. ಅದನ್ನು ಯೋಚಿಸದೆ ಅಭ್ಯರ್ಥಿಗಳ ಹೆಸರುಗಳಿಗಾಗಿ ಮೂರು ಪಕ್ಷಗಳಲ್ಲಿ ಜಟಾಪಟಿ ನಡೆದಿದೆ. ಜನ ಮೂಗಿನ ಮೇಲೆ ಬೆರಳಿಟ್ಟುಕೊಂಡು ವಿಸ್ಮಿತರಾಗಿದ್ದಾರೆ. ●




ಆಂಧ್ರದಲ್ಲಿ ಮುಸಲ್ಮಾನರಿಗೆ ವಿಶೇಷವಾಗಿ ೪% ಹೆಚ್ಚಿಸಿದ್ದ ಸರಕಾರದ ನಿರ್ಣಯವನ್ನು ಕೋರ್ಟು ಬದಿಗಿಟ್ಟದ್ದು ಸೂಕ್ತವಾಗಿದೆ. ಮೀಸಲಾತಿಯನ್ನು ಹೊಂದಿದವರ ಜನಸಂಖ್ಯೆಯು ಹೆಚ್ಚಾಗಿದ್ದು ಮೀಸಲಾತಿಯನ್ನು ಹೆಚ್ಚಿಸಬೇಕು ಎನ್ನುವ ಕೂಗು ಕೇಳಿಬರುತ್ತಿದೆ. ಅದು ಸರಿಯಲ್ಲ. ಯಾಕೆಂದರೆ ಮೀಸಲಾತಿ ಇಲ್ಲದವರ ಸಂಖ್ಯೆಯೂ ಹೆಚ್ಚಾಗಿದೆ. ಅದರಿಂದ ಮೀಸಲಾತಿಯು ಈಗಿರುವ ಪ್ರಕಾರವೇ ಇರಲಿ. ಪಟೇಲರು ಮತ್ತು ಮರಾಠರು ಮೀಸಲಾತಿಯನ್ನು ಕೇಳುವದು ಸರಿಯಲ್ಲ. ಅವುಗಳನ್ನು ಪುರಸ್ಕರಿಸಿದರೆ ಮುಂದೆ ಎಲ್ಲರೂ ಪ್ರತ್ಯೇಕ ಮೀಸಲಾತಿಯನ್ನು ಕೇಳುತ್ತಾರೆ. ಕರ್ನಾಟಕದಲ್ಲಿ ನ್ಯಾಯಮೂರ್ತಿ ಸದಾಶಿವ ಆಯೋಗದ ವರದಿಯನ್ನು ಇದ್ದಹಾಗೆ ಒಪ್ಪಿಕೊಂಡು ಜಾರಿಗೆ ತರಬೇಕು. ಈಗಿನ ಎಸ್. ಸಿ. ಮೀಸಲಾತಿಯಿಂದ ಲಮಾಣಿ ಮತ್ತು ಬೋಗಿ (ವಡ್ಡರು) ಜನರಿಗೆ ಬಹಳ ಅನುಕೂಲವಾಗಿದೆ. ಎಡಗೈ ಮತ್ತು ಬಲಗೈಯವರು ೦೧ ಸಂಖ್ಯೆಗೆ ಹೊಡೆದಾಡಿದರೆ, ಅವರಿಗೇ ಅನ್ಯಾಯವಾಗಿ ೧೫ ಸಂಖ್ಯೆಯನ್ನು ಕಳೆದುಕೊಳ್ಳುತ್ತಾರೆ. ಆದ್ದರಿಂದ ಈಗ ಸದಾಶಿವ ಆಯೋಗದ ಜಾರಿಗೆ ಅವರು ಒತ್ತಾಯಿಸಬೇಕು. ಮೀಸಲಾತಿಯು ಎಲ್ಲಿಯವರೆಗೆ ಜಾತಿ ಪದ್ಧತಿ ಇರುವದೋ ಅಲ್ಲಿಯವರೆಗೆ ಇರಬೇಕು.

*ರಾಣೇಬೆನ್ನೂರು* **ಎ. ಸಿ. ಹಿರೇ ಒಡೆಯರ**

### 'ಹೊಸತು' ಗ್ರಾಮಗಳಿಗೆ ಆದ್ಯತೆ ನೀಡಲಿ!

ಸೆಪ್ಟೆಂಬರ್ ೨೦೧೮ರ ಸಂಚಿಕೆಯಲ್ಲಿ ಶ್ರೀ. ಸಾಯಿನಾಥ್ ಅವರ ಸಂದರ್ಶನ ರೈತರ ಪರವಾಗಿತ್ತೆಂಬುದಕ್ಕಿಂತ ಗ್ರಾಮೀಣ ಭಾಗದ ವಿಚಾರಗಳಿಗೆ, ಗ್ರಾಮೀಣ ಮಂದಿಯನ್ನು ಒಂದು ಪತ್ರಿಕೆ ಗುರುತಿಸಿದೆ ಎಂದರೆ ತಪ್ಪಾಗದು. ಈ ಬದಲಾವಣೆಗೆ 'ಹೊಸತು' ಮಾಸಿಕವನ್ನು ಅಭಿನಂದಿಸುತ್ತ ಈ ಸಂದರ್ಶನದ ಉಪಾಂತ ಪ್ರಶ್ನೆಯ ವಿಚಾರಕ್ಕೆ ಹೆಚ್ಚು ಒತ್ತುನೀಡಲು ಇಚ್ಛಿಸುತ್ತೇನೆ. ಪತ್ರಕರ್ತ ಸಾಯಿನಾಥ್ ಅವರ ಪ್ರಕಾರ ಪತ್ರಿಕೋದ್ಯಮದ ಸ್ಥಿತಿಗತಿ ಚಿಂತಾಜನಕ ವಾಗಿದೆ ಎನ್ನುವುದರ ಹಿಂದೆ ಅನೇಕ ಕಾರಣ ಗಳಿದ್ದರೂ ಈ ವಿದ್ಯಮಾನವನ್ನು ಬದಲಾಯಿಸುವಲ್ಲಿ ಪ್ರಯತ್ನಗಳಾಗಬೇಕಿದೆಯೇ ಹೊರತು ಕಾರಣ ಹುಡುಕುವುದು ವ್ಯರ್ಥ ಪ್ರಯತ್ನ ಆಗಬಹುದು. 'ಹೊಸತು' ಮಾಸಿಕದಲ್ಲಿ ಕಂಡು ಬಂದಂತೆ ಜಾಹೀರಾತುಗಳ ಮೇಲಿನ ಅವಲಂಬನೆ ಇಲ್ಲದಿರುವುದು ಒಂದು ಅದ್ಭುತ ವಾದರೆ 'ಓದುಗರಲ್ಲೊಂದು ಮನವಿ' ಮತ್ತೊಂದು ನಿರಾಶಾದಾಯಕ ವಿಶೇಷ ಮನವಿ ಯಾಗುತ್ತದೆ. ಪ್ರಸ್ತುತವಾಗಿ, ಬಹುತೇಕ ನಿಯತಕಾಲಿಕಗಳು, ಪತ್ರಿಕೆಗಳು ಪ್ರಕಾಶನಗೊಳ್ಳುತ್ತಿರುವುದೇ ಜಾಹೀರಾತುಗಳ ಸಲುವಾಗಿ ಎಂದರೆ ಅತಿಶಯೋಕ್ತಿಯಾಗದು. ಒಂದು ವೇಳೆ ಇಂತಹ ಪತ್ರಿಕೆಗಳ ಪ್ರಕಾಶನ ಸ್ಥಗಿತವಾದರೆ ಅದಕ್ಕೆ ಕಾರಣ ಓದುಗರಲ್ಲ, ಲೇಖಕರಲ್ಲ.... ಬದಲಾಗಿ ಜಾಹೀರಾತು ನೀಡುವ ಉದ್ಯಮಿಗಳು, ಸಂಸ್ಥೆಗಳು ಎಂದು ಖಡಾ ಖಂಡಿತವಾಗಿ ಹೇಳಬಹುದು!




ಈ ಮಾದರಿಯ ನಿರ್ಬಂಧಗಳ ಕಟ್ಟುಪಾಡಿಗೆ ಸಿಲುಕಿ ಪತ್ರಿಕೆ ನಡೆಸುವುದಕ್ಕಿಂತ ಸಮಾನ ಮನಸ್ಕ ಬರಹಗಾರರ ಸಮೂಹದ ಬೆಂಬಲದಿಂದ ಪತ್ರಿಕೆ ಮುಂದುವರೆದರೆ ಅದಕ್ಕೆ ದೀರ್ಘಾಯುಷ್ಯ ಖಂಡಿತ! ಒಂದು ಮುದ್ರಿತ ಪತ್ರಿಕೆಗೆ ಬರಹಗಾರರು ಎಷ್ಟು ಪ್ರಮುಖವೋ ಅಷ್ಟೇ ಮುಖ್ಯ ಓದುಗರು, ಚಂದಾದಾರರು! ಆಸಕ್ತಿಯುಕ್ತ ಓದುಗರು ಹೇರಳ ವಾಗಿದ್ದರೆ, ಓದುಗರ ಸಂಖ್ಯೆ ಹೆಚ್ಚಾಗುತ್ತಲಿದ್ದರೆ ಮಾತ್ರ ಪತ್ರಿಕೆಗೆ ಆರ್ಥಿಕ ಬಲ ಬರಲು ಸಾಧ್ಯವಲ್ಲವೇ ? ಆದರೆ, ಇಂದು ಡಿಜಿಟಲ್ ಮಾಧ್ಯಮದ ಕಾರಣದಿಂದ ಮುದ್ರಣ ಮಾಧ್ಯಮಕ್ಕೆ ಸಾಕಷ್ಟು ಪೆಟ್ಟು ಬಿದ್ದಿದ್ದು, ಬಹುತೇಕ ಮಂದಿಗೆ ಪುಟಗಟ್ಟಲೇ ಓದುವದಿರಲಿ, ಓದುವ ಹವ್ಯಾಸವೇ ಕಬ್ಬಿಣದ ಕಡಲೆಯಾಗಿದೆ. ಎಲ್ಲದಕ್ಕೂ ಸಂಕ್ಷಿಪ್ತ ರೂಪ ! ಇಂತಹ ವಾಸ್ತವಿಕ, ಅನಿವಾರ್ಯ ಸಂದರ್ಭದಲ್ಲಿ, ಮನದಲ್ಲಿ ಮೂಡುವ ಒಂದು ಅಪರೂಪದ ಭಾವನೆ, ಅನಿಸಿಕೆ, ಅಪೇಕ್ಷೆ – 'ಹೊಸತು' ಮಾಸಿಕ ಕಡ್ಡಾಯವಾಗಿ, ನಿಯಮಿತವಾಗಿ ಗ್ರಾಮೀಣ ಭಾಗದ ಹವ್ಯಾಸಿ ಲೇಖಕರಿಗೋಸ್ಕರ ಪ್ರತಿ ಸಂಚಿಕೆಯಲ್ಲಿ ಒಂದೆರಡು ಪುಟಗಳನ್ನು ಮೀಸಲಿಡಬಹುದೇ ? ಮೂಲಭೂತ ಸೌಕರ್ಯಗಳಿಂದ ಇಂದಿಗೂ ವಂಚಿತರಾಗಿರುವ ಗ್ರಾಮೀಣ ಭಾಗದ ಮಂದಿ ಬರವಣಿಗೆಗೆ, ಓದುವುದಕ್ಕೆ ಒತ್ತು ನೀಡುವುದನ್ನು 'ಹೊಸತು' ಮಾಸಿಕ ಕಾರ್ಯಗತ ಗೊಳಿಸುವತ್ತ ಪ್ರಯತ್ನಿಸಲಿ ಎಂಬುದು ನನ್ನ ಮನದಾಳದ ಅನಿಸಿಕೆ.

*ಹಾಸನ* **ನಳಿನಿ ಆರ್. ಮಾಗಲ್**

### ಕೃಷಿ ಅವಲಂಬಿತ ಬದುಕು... ಸಾಧಕವೋ? ಬಾಧಕವೋ?

ಶ್ರೀ ಸಾಯಿನಾಥ್ ಅವರು ಗ್ರಾಮೀಣ ಭಾಗದಿಂದ, ಕೃಷಿ ಕ್ಷೇತ್ರದಿಂದ ದೇಶದ ಜಿ.ಡಿ.ಪಿ.ಯ ಮೇಲಾಗುವ ಪರಿಣಾಮ, ನೋಟು ಅಮಾನ್ಯೀಕರಣದಿಂದ ಗ್ರಾಮೀಣ ಮಂದಿಯ ಪರದಾಟ, ಜಾತಿವಾರು ಮೀಸಲಾತಿ, ಗ್ರಾಮೀಣ ಬದುಕಿನಲ್ಲಿ, ಕೃಷಿ ಕಸುಬಿನಲ್ಲಿ ಮಹಿಳೆಯರ ಪಾತ್ರ, ಸರ್ಕಾರದಿಂದ ಕೃಷಿಕರ ಸಾಲ ಮನ್ನಾ, ನರಕವಾಗುತ್ತಿರುವ ಶಿಕ್ಷಣ ಕ್ಷೇತ್ರ ಇತ್ಯಾದಿ ವಿಚಾರಗಳ ಬಗ್ಗೆ ತಮ್ಮ ಅನಿಸಿಕೆಯನ್ನು ಹೊರ ಹಾಕಿರುವುದು ಓರ್ವ ಪತ್ರಕರ್ತನಾಗಿಯೇ ಹೊರತು ನಿಯಮಿತವಾದ ಸವಲತ್ತುಗಳ ಅಡಿಯಲ್ಲಿ ನಿರಂತರವಾಗಿ ದುಡಿಯುವ ಕೃಷಿಕನಾಗಿ ಅಲ್ಲ ಎಂಬುದು ವಾಸ್ತವ. ನಮ್ಮದು ಸುಮಾರು ಮೂರು ತಲೆಮಾರಿಗೂ ಅಧಿಕ ಸಮಯದಿಂದ ಮಲೆನಾಡಿನಲ್ಲಿ ಕೃಷಿ ಜೀವನದಲ್ಲಿ ತೊಡಗಿಸಿಕೊಂಡ ಕುಟುಂಬವಾದ್ದರಿಂದ ಕೆಲವು ಕಟುಸತ್ಯಗಳನ್ನು ಇದುವರೆಗೆ ಗಮನಿಸಿದ ಬದಲಾವಣೆಗಳನ್ನು ವಿಸ್ತೃತವಾಗಿ ಹಂಚಿಕೊಳ್ಳ ಬಯಸಿದರೂ, ಪತ್ರಿಕೆಯಲ್ಲಿ ಓದುಗರಿಗೆ ಕಲ್ಪಿಸಿದ ಸ್ಥಳ ನಿಯಮಿತವಾಗಿರುತ್ತೆ.

ಸರ್ಕಾರದ ಅನೇಕ ಏಕಪಕ್ಷೀಯ ಹಾಗೂ ರಾಜಕೀಯ ಪ್ರೇರಿತ ನಿರ್ಧಾರಗಳಿಂದ ಕೃಷಿಕರ ಬದುಕು ಮಾತ್ರವಲ್ಲ, ಕೃಷಿ ಕಸುಬೇ ಮೂರಾಬಟ್ಟೆ ಯಾಗಿದೆ ಎಂದರೆ ತಪ್ಪಾಗದು. ಕೂಲಿ ಆಳುಗಳ ಅಲಭ್ಯತೆ, ಮೂಲ ಸೌಕರ್ಯಗಳಿಂದ ವಂಚಿತ ವಾಗಿರುವ ಗ್ರಾಮಗಳು, ನಗರಗಳ ಅಭಿವೃದ್ಧಿಯ ಕೈಗಾರಿಕೀಕರಣದ ನೆಪದಲ್ಲಿ ಗ್ರಾಮಗಳ ಪರಿಸ್ಥಿತಿಯ ಬಗ್ಗೆ ಸಂಪೂರ್ಣ ಅಸಡ್ಡೆ, ತಿರಸ್ಕಾರ, ಜನಪ್ರತಿನಿಧಿಗಳು ತಮ್ಮ ಕ್ಷೇತ್ರದಿಂದ, ಕ್ಷೇತ್ರದ ಮತದಾರರಿಂದ ದೂರ ಉಳಿಯುವುದು, ರಾಜಕೀಯ ಪಕ್ಷಗಳು ಚುನಾವಣಾಪೂರ್ವದಲ್ಲಿ ನೀಡುವ ಪೊಳ್ಳು ಆಶ್ವಾಸನೆಗಳಿಂದ ಗ್ರಾಮೀಣ ಭಾಗದ ಯುವಕರನ್ನು ದಾರಿ ತಪ್ಪಿಸುವ ಹುನ್ನಾರ ಹಾಗೂ ಅತ್ಯಂತ ಪ್ರಮುಖವಾಗಿ ದೈಹಿಕ ಶ್ರಮ ವನ್ನು ಮೂಲವಾಗಿ ನಿರೀಕ್ಷಿಸುವ ಕೃಷಿ ಕಸುಬಿನತ್ತ ಗ್ರಾಮೀಣ ಭಾಗದ ಯುವಕರನ್ನು ಪ್ರೇರೇಪಿಸು ವುದಕ್ಕೆ ಸರ್ಕಾರಗಳ ಬಳಿ ಯೋಜನೆಗಳೇ ಇಲ್ಲ ವಾಗಿರುವುದು, ನಿಷ್ಕ್ರಿಯವಾಗಿರುವ ಸರ್ಕಾರಗಳ

ರಾಜ್ಯನೀತಿಯೆಂದೇ ಭಾವಿಸಬೇಕಿದೆ. ನಿಜ, ಸಾವಿರಾರು, ಲಕ್ಷಾಂತರ ಕೋಟಿ ರೂಪಾಯಿಗಳಷ್ಟು ಮೊತ್ತದ ಸಾಲ ಮನ್ನಾ ಎಂಬ ಐತಿಹಾಸಿಕ ನಿರ್ಧಾರವನ್ನು 'ಸಾಯಿನಾಥ್' ಸಮರ್ಥಿಸಿ ಕೊಂಡಿರುವುದು ಕೈಗಾರಿಕೋದ್ಯಮಿಗಳು ಬ್ಯಾಂಕುಗಳಲ್ಲಿ ಪಡೆದಿರುವ ಸಾಲ ಮನ್ನಾದೊಟ್ಟಿಗೆ ಹೋಲಿಸಿರುವುದನ್ನು ಬಿಟ್ಟರೆ ಈ 'ಮನ್ನಾ'ದಿಂದ ಕೃಷಿ ಕಸುಬಿನ ಮೇಲೆ ಉಂಟಾಗುವ ಗಂಭೀರ ಪರಿಣಾಮಗಳನ್ನು ಪರಿಗಣಿಸಿಲ್ಲದಿರುವುದು ವಿಷಾದನೀಯ ಸಂಗತಿ ಮತ್ತು ದುರಂತವೇ ಸರಿ !

ಓರ್ವ ಹುಟ್ಟು ಕೃಷಿಕನಾಗಿ, 'ಸಾಲ ಮನ್ನಾ ವಿರೋಧಿ' ಅಭಿಪ್ರಾಯ ನೀಡಿರುವುದರಿಂದ ಅಚ್ಚರಿ ಉಂಟಾಗಬಹುದೇನೋ! ಈ ಅಚ್ಚರಿಯ ಹಿಂದೆ ಸಾಧಕ – ಬಾಧಕಗಳನ್ನು ಅವಲೋಕಿಸಿದರೆ ತಿಳಿಯುತ್ತದೆ.... ಮುಂದಿನ ದಿನಗಳಲ್ಲಿ ಪ್ರಾಮಾಣಿಕ ದುಡಿಮೆಯಿಂದ, ಅಲ್ಪ ತೃಪ್ತಿಯ ಜೀವನವನ್ನು ಸಾಗಿಸುತ್ತಿರುವ ಕೃಷಿಕನ ಮನಸ್ಥಿತಿಯಲ್ಲಾಗುವ ಬದಲಾವಣೆ. ಬಹುಶಃ, ಶ್ರಮವಹಿಸಿ ದುಡಿಯುವ ಕೃಷಿಕರನ್ನು, ಮುಂದಿನ ದಿನಗಳಲ್ಲಿ ಕಡ್ಡಾಯವಾಗಿ ಅಪ್ರಾಮಾಣಿಕತೆ ಎಂಬ ಪ್ರಪಾತಕ್ಕೆ ದೂಡುವ ದುರಂತವೇ ಸಾಲ ಮನ್ನಾ ಎಂಬ ರಾಜಕೀಯ ಪ್ರೇರಿತ ಸರ್ಕಾರದ ನಿಲುವು ಆಗಿರಬಹುದೇನೋ ಎಂಬ ಸಂದೇಹ ಮೂಡುವುದು ಮಾತ್ರವಲ್ಲ, ಈ ನಿರ್ಧಾರದಿಂದ ದೇಶದ ಕೃಷಿ ಜಿ.ಡಿ.ಪಿ.ಯ ಮೇಲೆ ಉಂಟಾಗುವ ಅವ್ಯತ್ಯಸನೀಯ ಬದಲಾವಣೆಯ ಬಗ್ಗೆ ಚಿಂತಿಸಬೇಕಾದ ರಾಜ್ಯ ಸರ್ಕಾರ ಅವಿವೇಕದ ನಿರ್ಧಾರವನ್ನು ತೆಗೆದುಕೊಂಡಂತಿದೆ. ಈ ವಿಚಾರದಲ್ಲಿ ಹೆಚ್ಚಿನ ಪೇಚಾಟಕ್ಕೆ ಸಿಲುಕಿರುವುದು ಮುಂದಿನ ಪೀಳಿಗೆಯವರ, ವಾರಸುದಾರರ ಕೃಷಿ ಬದುಕಿನ ಸ್ಥಿತಿಗತಿಗಳ ಬಗ್ಗೆ ಪ್ರಾಮಾಣಿಕವಾಗಿ ಆಲೋಚಿಸುತ್ತಿರುವ ಕೃಷಿ ಬದುಕನ್ನೇ ನಂಬಿರುವ ಕುಟುಂಬಗಳು ಮಾತ್ರ ಎಂದರೆ ತಪ್ಪಾಗದು. ಇತ್ತೀಚೆಗೆ ಪ್ರತಿಷ್ಠಿತ ಬಜಾಜ್ ಎಲೆಕ್ಟ್ರಿಕಲ್ಸ್ ಸಂಸ್ಥೆಯ ಶ್ರೀ ಶೇಖರ್ ಬಜಾಜ್ ಅವರ ಏಕೈಕ ಪುತ್ರ ಹಾಗೂ ಸಂಸ್ಥೆಯ ಎಮ್. ಡಿ. ೪೧ ವರ್ಷ ವಯಸ್ಸಿನ ಶ್ರೀ ಅನಂತ್ ಬಜಾಜ್ ಅವರು ೪೧ನೇ ವಯಸ್ಸಿನಲ್ಲಿ ಹಠಾತ್ತನೆ ಹೃದಯಾಘಾತದಿಂದ ಸಾವನ್ನಪ್ಪಿದ್ದು ಅಷ್ಟು ದೊಡ್ಡ ಸಂಸ್ಥೆಗೆ ವಾರಸುದಾರ ರಿಲ್ಲದ ಸ್ಥಿತಿಗೆ ದಬ್ಬಿದ ಉದಾಹರಣೆಯನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಲು ಬಯಸುತ್ತೇನೆ. ಕೃಷಿ ಎಂಬುದು ಕೇವಲ ಹಣ ಸಂಪಾದನೆಯ ನೆಪಕ್ಕೆ ಒಂದು ಕಸುಬಲ್ಲ.... ಬದಲಾಗಿ ಅದು ಭಾರತೀಯ ಸಂಸ್ಕೃತಿಯಲ್ಲಿ ಹಿರಿಯರು ಪರಿಚಯಿಸಿದ್ದ ಜೀವನಶೈಲಿ ಎಂಬುದನ್ನು ಅರಿಯ ಬೇಕಿರುವುದು ದೇಶದ ಹಿತದ ದೃಷ್ಟಿಯಿಂದ ಹಾಗೂ ದಿನೇ ದಿನೇ ಆತಂಕಕ್ಕೆ ಗುರಿಯಾಗು ತ್ತಿರುವ ಸಮಾಜದ ಅನಾರೋಗ್ಯದ ಹಿನ್ನೆಲೆಯಲ್ಲಿ.

ಹಾಸನ **ನಾರಾಯಣ. ಜಿ. ಜಿ. ಶರ್ಮ**

✉ ಸೆಪ್ಟೆಂಬರ್ ೨೬ರ ಕೆಲವು ಪತ್ರಿಕೆಗಳಲ್ಲಿ ಮುದ್ರಿತವಾಗಿರುವ ಎರಡು ಸುದ್ದಿಗಳು ಇಂದಿನ ಜಾಗತಿಕ ಸಮಾಜಗಳ ವೈರುಧ್ಯಗಳಿಗೆ ಕನ್ನಡಿ ಹಿಡಿಯುತ್ತವೆ. 'ಇಂದು ೧೨೩ ಕೋಟಿ ರೂ. ಶೂ ಅನಾವರಣ' ಎಂಬ ಸುದ್ದಿಯ ಜೊತೆಗೆ 'ಯಮನ್: ಎಲೆಗಳನ್ನು ತಿಂದು ಬದುಕುತ್ತಿರುವ ಗ್ರಾಮಸ್ಥರು' ಎಂಬ ಸುದ್ದಿ ಪ್ರಕಟವಾಗಿರುವುದನ್ನು ಅನೇಕರು ಗಮನಿಸಿರಬಹುದು. ಇವೆರಡರ ಹಿಂದೆ ಇರುವ ವ್ಯಾಪಾರ ಮತ್ತು ಯುದ್ಧಗಳು ಬಂಡವಾಳವಾದದ ಒಂದೇ ನಾಣ್ಯದ ಎರಡು ಮುಖಗಳು. ವ್ಯಾಪಾರ ಎಲ್ಲೇ ನಡೆಯಲಿ ಅದರ ಘನೋದ್ದೇಶ ಲಾಭ, ಮತ್ತು ಕೆಲವೇ ವ್ಯಕ್ತಿಗಳ ಕೈಯಲ್ಲಿ ಸಂಪತ್ತಿನ ಕ್ರೋಡೀಕರಣ. ಯುದ್ಧ ಎಲ್ಲೇ ನಡೆಯಲಿ ಅದರ ಮೂಲೋದ್ದೇಶ ಸಂಪತ್ತಿನ ಉತ್ಪಾದನೆಯ ಸಾಧನಗಳಾದ ಶ್ರಮಶಕ್ತಿ ಮತ್ತು ನೈಸರ್ಗಿಕ ಕಚ್ಚಾವಸ್ತುಗಳ, ಭೂಮಿಯ ಮೇಲಿನ ಒಡೆತನ ಹಾಗೂ ನಿಯಂತ್ರಣ. ಬಂಡವಾಳವಾದಕ್ಕೆ ಏಕೈಕ ಪರ್ಯಾಯವಾದ ಸಮಾಜವಾದವನ್ನು ದೇಶ ದೇಶಗಳ ಜನರಿಂದ ದೂರವಿರಿಸಲೆಂದೇ ರೂಪುಗೊಂಡ ಜಾಗತಿಕ ಬಂಡವಾಳಗಳ ಒಕ್ಕೂಟ ವಿಶ್ವಸಂಸ್ಥೆ. ಬಂಡವಾಳವಾದೀ ಆರ್ಥಿಕತೆಯ ನೇರ ಫಲಿತಗಳಾದ ಬಡತನದ ದಾರುಣತೆಯ ವರದಿಗಳನ್ನು ಚಹಾದೊಂದಿಗೆ ಓದಿ ಮರೆತು ಬಿಡುವ ಮಧ್ಯಮವರ್ಗೀಯರಿಗೆ ಜಾಗತಿಕ ಸಂಕಷ್ಟಗಳು, ಬಿಕ್ಕಟ್ಟುಗಳು ಮತ್ತು ದೀನದಲಿತರ ನರಳಿಕೆಗಳ ಹಿಂದಿರುವ ಬಂಡವಾಳವಾದ ಗೋಚರಿಸುವುದೇ ಇಲ್ಲ. ಪೆಟ್ರೋಲ್ ಬೆಲೆ ಏರಿದಾಗ, ಜೀವನಾವಶ್ಯಕ ವಸ್ತುಗಳ ಬೆಲೆಗಳು ದುಬಾರಿಯಾದಾಗ ಆ ಮಟ್ಟಿಗೆ ಮಧ್ಯಮವರ್ಗವು ಕಣ್ಣು ತೆರೆಯುತ್ತದೆ. ತಾವು ಚುನಾಯಿಸುವ ಸರ್ಕಾರಗಳು ಬಂಡವಾಳವಾದಿಯೋ, ಕೋಮುವಾದಿಯೋ ಎಂಬ ಯೋಚನೆಗಳು ತತ್ಕಾಲಕ್ಕೆ ಬಂದುಹೋಗುತ್ತವೆ. ಸಾಮಾನ್ಯ ಜನರು ಎರಡು ಹೊತ್ತಿನ ಊಟಕ್ಕೆ ಪರದಾಡುತ್ತಿರುವಾಗ ಓಟಿನ ಪ್ರಜಾತಂತ್ರದ ಚೌಕಟ್ಟಿನಲ್ಲಿ ಒಂದು ಕಡೆ 'ಸ್ವಚ್ಛ ಭಾರತ್ ಅಭಿಯಾನ', ಮತ್ತೊಂದೆಡೆ 'ಭ್ರಷ್ಟಾಚಾರ'ದ ವಿರುದ್ಧದ ಪ್ರಚಾರಗಳು ಯಾಕೆ ಮಧ್ಯಮವರ್ಗದ ಗಮನವನ್ನು ಆಕ್ರಮಿಸುತ್ತವೆ ಎಂಬುದು ಬಂಡವಾಳವಾದದ ಎರಡು ಬಣಗಳ ಮೋಸದ ರಾಜಕೀಯವನ್ನು ಬಯಲುಮಾಡುತ್ತವೆ.

ಮೈಸೂರು **ವಿ. ಎನ್. ಲಕ್ಷ್ಮೀನಾರಾಯಣ**

### ಸುಂದರ ಊರಿನಲ್ಲೀಗ ...

✉ ನಿಮ್ಮ ಊರು ಅದೆಷ್ಟು ಚೆಂದ; ನೀವೆಲ್ಲಾ ಪುಣ್ಯವಂತರು ಕಣ್ರೀ, ಸ್ವರ್ಗ ಅಂದರೆ ಇದೇ ನೋಡಿ. ಅಲ್ಲಿಯ ಬೆಟ್ಟ, ಗುಡ್ಡ, ನದಿ, ಧುಮ್ಮಿಕ್ಕಿ ಹರಿಯುವ ಜಲಧಾರೆ, ತುಂತುರು ಜುಮುರು ಮಳೆ. ನೆಮ್ಮದಿಯಿಂದ ಬದುಕೋದಿಕ್ಕೆ ಇನ್ನೇನು ಬೇಕು ಹೇಳಿ? ನಾವೂ ನಿಮ್ಮೂರಿನಲ್ಲೇ ಬಂದು ಠಿಕಾಣಿ ಹೂಡ್ತೀವಿ, ಕೆಲಸಕ್ಕೆ ಜನ ಇಲ್ಲ ಅಂತೀರಿ ನಾವೇ ಬಂದು ಬಿಡ್ತೀವಿ, ನಮಗೆ ನಿಮ್ಮ ತೋಟಗಳಲ್ಲಿ ಕೆಲಸ ಕೊಟ್ರೆ ಅಷ್ಟೇ ಸಾಕು. ಈ ಬಯಲು ಸೀಮೆಯ ಒಣ ಹವೆ, ರಾಚುವ ಬಿಸಿಲು, ಇವೆಲ್ಲಾ ಅನುಭವಿಸಿ ಸಾಕಾಗಿ ಹೋಗಿದೆ ಅಂತ ಅಲವತ್ತುಕೊಳ್ಳುತ್ತಾ ನಮ್ಮೂರನ್ನು ಹೊಗಳುವಾಗ ನಿಜಕ್ಕೂ ಒಳಗೊಳಗೆ ಹೆಮ್ಮೆಯಿಂದ ಬೀಗಿದ್ದೆ. ಅದೆಷ್ಟೋ ಇಲ್ಲಗಳ ನಡುವೆಯೂ ತಾಜಾ ಹವೆ, ಶುದ್ಧ ನೀರು, ಹದವಾದ ಬಿಸಿಲು, ಸುತ್ತಮುತ್ತಲೆಲ್ಲಾ ಕಣ್ಣು ತಂಪಾಗಿಸುವ ಹಸಿರು, ಹೌದು! ಅದೃಷ್ಟವಂತರೇ ನಾವು ಅಂತ ಮನಸ್ಸು ನುಡಿಯುತ್ತಿತ್ತು. ದೂರದ ಊರಿಂದ ಆತ್ಮೀಯರು, ಸಂಬಂಧಿಕರು ಕೊಡಗು ನೋಡಲಿಕ್ಕಾಗಿಯೇ ಬರುತ್ತಿದ್ದರು; ತಂಗುತ್ತಿದ್ದರು. ನಮ್ಮಲ್ಲಿಗೂ ಬಂದು ಆತಿಥ್ಯವನ್ನು ಸ್ವೀಕರಿಸಿ ಹೋಗುತ್ತಿದ್ದರು. ಕೊಡಗು ಎಂಬ ಸುಂದರ ಊರೊಂದು ಅದೆಷ್ಟೋ ಸಹೃದಯ ಮನಸುಗಳನ್ನು ಬೆಸೆಯುವ ತಂತುವಾಯಿತು.

ಇಂತಹ ಅದ್ಭುತ ಸುಂದರ ಕವಿತೆಯಂಥ ಊರು ಪ್ರಕೃತಿಯ ವಿಕೋಪಕ್ಕೆ ಮಣಿದು ಮುನಿದು ತತ್ತರಿಸಿಹೋಗಿದೆ. ದುರಂತ ಕಥೆಯಾಗಿದೆ. ಪ್ರಕೃತಿಯದ್ದು ತಪ್ಪಲ್ಲ. ಅದು ತಾನೇ ಮತ್ತೇನು ಮಾಡೀತು? ಎಷ್ಟೊಂದು ಸಹಿಸಿಕೊಂಡೀತು? ಕೊಡಗಿನಲ್ಲಿ ಸ್ವಾಭಾವಿಕವಾಗಿ ಇದ್ದಂತಹ ಶೇಕಡ ೮೫ ಅರಣ್ಯ ನಾಶವಾಗಿ ಕೇವಲ ಶೇಕಡ ೧೬ಕ್ಕೆ ಬಂದಿಳಿದಿದೆಯೆಂದರೆ ಈ ದುರಂತಕ್ಕೆ ಹೊಣೆ ನಾವೇ ತಾನೇ? ಕೊಡಗು ಭೂಲೋಕದ ಸ್ವರ್ಗ ಅಂತ ಪ್ರವಾಸಿಗರು ಕೊಡಗಿಗೆ ಬಂದಿದ್ದೇ ತಡ, ಅಣಬೆಯಂತೆ ಹೋಂ ಸ್ಟೇಗಳು ಎದ್ದಿದ್ದೇ ಎದ್ದದ್ದು. ಆ ಮೂಲಕ ಅದೊಂದು ಲಾಭದಾಯಕ ಉದ್ಯಮವೇ ಆಗಿಹೋಯಿತು. ಹಣದ ಮುಂದೆ ಪೂರ್ವಾಪರ ಯೋಚನೆಯನ್ನು ಯಾರು ಮಾಡುತ್ತಾರೆ? ಆರಕ್ಕೂ ಏರದೆ ಮೂರಕ್ಕೆ ಇಳಿಯದ ಕೃಷಿಕರು, ಒಂದಷ್ಟು ಜಾಗ ಮಾತ್ರ ಇರುವವರು ಹೋಂ ಸ್ಟೇಗಳ ಮೂಲಕ ಬದುಕಬಹುದು ಎನ್ನುವ ಸತ್ಯ ಕಂಡುಕೊಂಡಂತೆಯೇ, ಅದು ಬದುಕಿಗೊಂದು ಆಧಾರವಾಗಿ ಇದೊಂದು ವರದಾನವೆಂದೇ ಪರಿಭಾವಿಸಿದರು. ಅಲ್ಲಿಗೆ ಕೊಡಗಿನ ಭವಿಷ್ಯಕ್ಕೆ ಕಪ್ಪು ಮಸಿಯೊಂದು ಅಂಟಿಕೊಂಡಿತು. ತದನಂತರ ಅಭಿವೃದ್ಧಿಯ ಹೆಸರಿನಲ್ಲಿ ಕೊಡಗಿನ ನೆಲದ ಎದೆಯ ಮೇಲೆ ದೈತ್ಯ ಯಂತ್ರಗಳು ಓಡಾಡಿ, ಅರಣ್ಯಗಳನ್ನು ಮನಬಂದಂತೆ ಕಡಿದು ಪರ್ಯಾಯವಾಗಿ ಕಾಂಕ್ರೀಟ್ ಕಾಡುಗಳ ನಿರ್ಮಾಣ ಕಾರ್ಯ ಭರದಲ್ಲಿ ಸಾಗಿತು. ಒಂದು ಬುಲ್‌ಡೋಜರ್ ಎಂಬ ಯಂತ್ರ ಮಾಡುವ ಸದ್ದು ಸಣ್ಣ ಭೂಕಂಪನಕ್ಕೆ ಸಮ ಅಂತ ವಿಜ್ಞಾನಿಗಳು ಅಂದಾಜಿಸಿದ್ದಾರೆ. ಇಂತಹುದರಲ್ಲಿ ಈ ನೆಲದ ಮೇಲೆ ಅದೆಷ್ಟು ಯಂತ್ರಗಳು ಸದ್ದು ಮಾಡುತ್ತ ಎದೆಯನ್ನು ಕೊರೆಯುತ್ತಾ ಸಾಗಿಲ್ಲ? ಅದೆಷ್ಟು ಕಂಪನಗಳು? ಯಾಕೆ ಒಂದು ಕಂಪನಕ್ಕೂ ನಮ್ಮ ಯಾರೊಬ್ಬರ

ಎದೆಯೂ ಕಂಪಿಸಿಲ್ಲ? ಯಾಕೆ ಇಷ್ಟು ದಿನ ನಮ್ಮ ಜನರು ಕಣ್ಣಿದ್ದೂ ಕುರುಡರಾದದ್ದು ತಿಳಿಯುತ್ತಿಲ್ಲ. ಕಣ್ಣು ತೆರೆದುಕೊಳ್ಳಲು ಇಂತಹ ಅವಘಡಗಳೇ ಸಂಭವಿಸಬೇಕೇ? ನಮ್ಮ ಕಾಲ ಬುಡಕ್ಕೆ ಕಲ್ಲು ಬಂದು ಬೀಳುವಲ್ಲಿಯವರೆಗೆ ನಾವು ಯಾಕೆ ಎಚ್ಚೆತ್ತುಕೊಳ್ಳುವುದಿಲ್ಲವೋ!

ಸರಿ ಸುಮಾರು ಮೂರು ದಶಕಗಳ ಹಿಂದೆ ಕೊಡಗೆಂದರೆ ಹಸಿರು. ಹಾದಿಯ ಇಕ್ಕೆಲಗಳಲ್ಲಿ ತೊನೆಯುವ ಭತ್ತದ ಪೈರು, ಬೆಟ್ಟ ಗುಡ್ಡಗಳಲ್ಲಿ ಕಾಫಿ, ಏಲಕ್ಕಿ ತೋಟಗಳು, ನಡುವೆ ಭೀಮಕಾಯದ ಮರವನ್ನಪ್ಪಿ ಹಬ್ಬಿರುವ ಕರಿ ಮೆಣಸು ಬಳ್ಳಿಗಳು, ಒಪ್ಪವಾಗಿ ಕತ್ತರಿಸಿಟ್ಟ ಬೇಲಿ, ಹಾದಿ ಬದಿಯ ತುಂಬೆಲ್ಲಾ ನಗುತ್ತಾ ಸ್ವಾಗತಿಸುವ ಹೆಸರೇ ಇಲ್ಲದ ಅದೆಷ್ಟೋ ಬಣ್ಣದ ಹೂಗಳು, ಇವುಗಳನ್ನು ನೋಡುವ ಸೊಬಗೇ ಬೇರೆ. ಇನ್ನು ಕೊಡಗೆಂದರೆ ಅದು ದಕ್ಷಿಣದ ಕಾಶ್ಮೀರ. ಕೊರೆಯುವ ಚಳಿಯ ಊರು. ಬಹುತೇಕ ವರ್ಷದ ಎಲ್ಲಾ ಕಾಲಮಾನಗಳಲ್ಲಿಯೂ ಶಾಲೆಗೆ ಹೋಗುವ ಮಕ್ಕಳಿಂದ ಹಿಡಿದು, ಆಫೀಸಿಗೆ ಹೋಗುವವರು, ಹೊಲ ಗದ್ದೆಗಳಲ್ಲಿ ದುಡಿಯುವವರ ಮೈಯಲ್ಲಿ ಸ್ವೆಟ್ಟರ್, ತಲೆಯಲ್ಲಿ ಟೋಪಿ ಅಥವಾ ಸ್ಕಾರ್ಫ್ ತಪ್ಪುತ್ತಿರಲಿಲ್ಲ.

ಈಗ ಕೊಡಗಿನ ಹವಾಮಾನ ಮೊದಲಿನಂತಿಲ್ಲ ಅನ್ನುವಂತದ್ದು ಎಲ್ಲರ ಗಮನಕ್ಕೂ ಬಂದ ವಿಚಾರ. ಸೆಖೆಯ ಊರಾದ ಕರಾವಳಿ ತೀರಗಳಿಗೂ ಮಲೆನಾಡಿಗೂ ಯಾವುದೇ ತೆರನಾದ ವ್ಯತ್ಯಾಸ ಇಲ್ಲದಂತಾಗಿದೆ. ಈಗ ಮಲೆನಾಡುಗಳಲ್ಲಿಯೂ ಸಣ್ಣ ಬಿಸಿಲಿಗೇ ದಾಹ ತಡೆಯಲಾರದೆ ಫ್ಯಾನುಗಳು ಸೆಖೆಯನ್ನು ನಿಯಂತ್ರಿಸಲು ವ್ಯರ್ಥ ಪ್ರಯತ್ನ ಮಾಡುತ್ತಿರುತ್ತವೆ. ಇದು ಇವತ್ತು ಒಂದೆರಡು ಊರುಗಳ, ಪ್ರದೇಶಗಳ, ಜಿಲ್ಲೆಗಳ ಚಿತ್ರಣ ಅಲ್ಲ, ದೇಶಕ್ಕೆ ದೇಶವೇ ಇವತ್ತು ಹವಾಮಾನದ ವೈಪರೀತ್ಯವನ್ನು ಅನುಭವಿಸುತ್ತಲಿದ್ದರೂ, ಪರಿಸರವಾದಿಗಳು ಈ ಬಗ್ಗೆ ಎಚ್ಚರಿಕೆಯನ್ನು ನೀಡುತ್ತಲಿದ್ದರೂ ಯಾರೂ ಎಚ್ಚೆತ್ತುಕೊಳ್ಳದಿರುವುದೇ ವಿಷಾದನೀಯ ಸಂಗತಿ.

ಇಡೀ ಲೋಕವೇ ಅಲ್ಲಾಡಿದರೂ ನಾವು ಮಾತ್ರ ಸ್ಥಿರ ಅಂತ ನಮ್ಮ ನೆಲವನ್ನು ಅಚಲವೆಂದೇ ಭ್ರಮಿಸಿದ್ದೆವು. ಈಗ ಆದದ್ದಾದರೂ ಏನು? ಊರಿಗೆ ಊರೇ ಜಲಾವೃತಗೊಳ್ಳುತ್ತಿದೆ. ಬೆಟ್ಟಗಳು ಸಡಿಲಗೊಂಡು ಪುತಪುತನೆ ಉದುರುತ್ತಿವೆ. ಊರೊಂದು ಇತ್ತು ಅನ್ನುವುದಕ್ಕೆ ಯಾವುದೇ ಕುರುಹು ಇಲ್ಲದಂತೆ ಕಣ್ಮರೆಯಾಗಿದೆ. ಹಿಂದೆಂದೂ ಕಂಡರಿಯದ ಘೋರ ದುರಂತವನ್ನು ನಾವಿಂದು ಅನುಭವಿಸುತ್ತಿದ್ದೇವೆ. ಇದು ಏಕಾಏಕಿ ಸಂಭವಿಸಿದ್ದಲ್ಲ. ಇದರ ಸುಳಿವಿನ ಕುರಿತು ಈ ಹಿಂದೆಯೆ ಮಾಹಿತಿ ದೊರಕಿತ್ತು. ಅದೂ ಅಲ್ಲದೇ ಈ ದುರ್ಘಟನೆಗೆ ಒಂದು ತಿಂಗಳ ಮೊದಲೇ ಪ್ರತಿನಿತ್ಯ ರಾತ್ರೆ ಹೊತ್ತಿನಲ್ಲಿ ಭೂಮಿಯಾಳದಿಂದ ಗುಡು ಗುಡು ಸದ್ದು ಹೊರಹೊಮ್ಮುತ್ತಿದ್ದ ಬಗ್ಗೆ ದುರಂತ ಅನುಭವಿಸಿದ ಅಲ್ಲಿನ ನಿವಾಸಿಗಳು ಹೇಳಿಕೊಳ್ಳುತ್ತಿದ್ದಾರೆ.

ಕೊಡಗಿಗೆ ಸೌಂದರ್ಯ ದಕ್ಕಿಸಿ ಕೊಟ್ಟದ್ದೇ ಇಲ್ಲಿಗೆ ಕಿರೀಟವಿಟ್ಟಂತಿರುವ ಬೆಟ್ಟಗುಡ್ಡಗಳು. ಈಗ ಬೆಟ್ಟ ಗುಡ್ಡಗಳೆಲ್ಲಾ ನೆಲ ಸಮವಾಗಿ ರೋದಿಸುತ್ತಿವೆ. ಕೊಡಗಿನ ಭೌಗೋಳಿಕ ಪರಿಸರವೇ ತೀರಾ ಬದಲಾಗಿ ಬೇರೆಯದೆ ರೂಪದಲ್ಲಿ ನಿಂತಿರುವುದನ್ನು ನೋಡುವುದು ತುಂಬ ದುಃಖದಾಯಕ ಸಂಗತಿ. ಪ್ರಕೃತಿಯ ಅಸಮತೋಲನದಿಂದ ಸಂಭವಿಸಿದ ಹಾನಿಯನ್ನು ಯಾತರಿಂದ ತುಂಬಲು ಸಾಧ್ಯ? ರಸ್ತೆಯ ಇಕ್ಕೆಲದ ಭತ್ತದ ಗದ್ದೆಗಳೆಲ್ಲಾ ಸೈಟುಗಳಾಗಿ ಪರಿವರ್ತನೆಯಾಗುತ್ತಿವೆ. ಭತ್ತವನ್ನು ಬದಿಗೊತ್ತಿ ವಾಣಿಜ್ಯ ಬೆಳೆ ಶುಂಠಿ ಬೆಳೆಯುತ್ತಿದ್ದಾರೆ. ಪ್ರತೀ ಮನೆಯಲ್ಲೂ ತಲೆಗೊಂದರಂತೆ ವಾಹನಗಳು ರಾರಾಜಿಸುತ್ತಿವೆ. ದೈತ್ಯ ಯಂತ್ರವೊಂದು ದೂರದಲ್ಲೆಲ್ಲೋ ಸದ್ದು ಮಾಡಿಕೊಂಡು ನೆಲ ಬಗೆಯುತ್ತಾ ದುರಂತಕ್ಕೆ ಮುನ್ನುಡಿ ಬರೆಯುತ್ತಲೇ ಇದೆ.

ಮೊನ್ನೆ ಅದೆಷ್ಟು ಊರುಗಳು ಕಣ್ಮರೆಯಾಗಿವೆ? ಬದುಕಿ ಉಳಿದವರಿಗೆ ಮುಂದಿನ ನೆಲೆಯೇನು? ಅಭಿವೃದ್ಧಿಯ ಹೆಸರಿನಲ್ಲಿ ಯಾರು ಯಾರೋ ಮಾಡಿದ ಅನ್ಯಾಯಕ್ಕೆ, ಅನ್ಯಾಯವಾಗಿ ಅದೆಷ್ಟು ಜನರ ಜೀವ ಬಲಿ? ಮನೆ ಮಠ ಕಳೆದುಕೊಂಡು ಬೀದಿ ಪಾಲಾಗುವ ಸ್ಥಿತಿ ಬಂದೊದಗಿದ್ದು ಯಾಕೆ?

ಕೊಡಗು ಕಲಿಗಳ ಊರು. ಖಂಡಿತಾ ನಾವು ಎದ್ದು ನಿಂತೇ ನಿಲ್ಲುತ್ತೇವೆ. ಅಂತಹ ಛಲ ನಮ್ಮ ಜನರ ರಕ್ತದಲ್ಲಿದೆ. ಕರ್ನಾಟಕದಲ್ಲಿ ಸರಿಸುಮಾರು ೬ ಕೋಟಿ ಕನ್ನಡಿಗರಿದ್ದಾರೆ. ಎಲ್ಲರೂ ಮಾನವೀಯ ದೃಷ್ಟಿಯಿಂದ ಮುಂದಾದರೆ ಕೊಡಗು ಮತ್ತೊಮ್ಮೆ ಸುಂದರವಾಗಿ ಅರಳಬಲ್ಲದು. ಅಣು ಬಾಂಬು ಹೊಡೆತ ತಿಂದ ನಾಗಸಾಕಿ, ಹಿರೋಶಿಮಾದಂತಹ ಪುಟ್ಟ ಜಪಾನಿನ ಊರುಗಳೇ ಅದೆಷ್ಟು ಅದ್ಭುತವಾಗಿ ಎದ್ದು ನಿಂತಿವೆ ಅಂದರೆ ನಮಗೂ ಸಾಧ್ಯ. ನಾವು ಮನುಷ್ಯರು, ಮಾನವೀಯತೆಯೇ ನಮ್ಮ ಧರ್ಮ. ಹೊಸ ಕೊಡಗನ್ನು ಕಟ್ಟುತ್ತಲೇ ಹೊಸ ಎಚ್ಚರಿಕೆಯ ಪಾಠವನ್ನು ಎಲ್ಲರೂ ಕಲಿಯೋಣ. ಸುಂದರವಾದ ಸ್ವಾಭಾವಿಕ ಪರಿಸರವನ್ನು ನಮ್ಮ ಮುಂದಿನ ಪೀಳಿಗೆಗೂ ಉಳಿಸುವ ಗುರುತರವಾದ ಜವಾಬ್ದಾರಿ ನಮ್ಮ ಮೇಲಿರಲಿ.

ಕೊಡಗು **ಸ್ಮಿತಾ ಅಮೃತರಾಜ್. ಸಂಪಾಜೆ**




ಕಳೆದ ಸಂಚಿಕೆಯಲ್ಲಿ ರಾಷ್ಟ್ರೀಯತೆಯನ್ನು ಕುರಿತ ಒಂದು ವ್ಯಾಖ್ಯಾನವನ್ನು ಓದುಗರಿಗೆ ಪರಿಚಯಿಸಲಾಗಿತ್ತು. ಜೊತೆಗೆ ನಮ್ಮ ದೇಶದ ಮಹಾನ್ ವಿಜ್ಞಾನಿ ಮತ್ತು ರಾಸಾಯನಿಕ ಉದ್ಯಮದ ಆವಿಷ್ಕರ್ತ ಆಚಾರ್ಯ ಪ್ರಫುಲ್ಲ ಚಂದ್ರ ರೇ ಅವರ ಒಂದು ಮೌಲಿಕ ಲೇಖನವನ್ನು ನೀಡಲಾಗಿತ್ತು. ಒಂದು ವಿಶ್ವವಿದ್ಯಾಲಯದ ಘಟಿಕೋತ್ಸವ ಸಂದರ್ಭದಲ್ಲಿ ಸುಮಾರು ೮೦ ವರ್ಷಗಳ ಹಿಂದೆ ಅವರು ನೀಡಿದ್ದ ಉಪನ್ಯಾಸದ ಪೂರ್ಣಪಾಠ ಅದು. ಇಂದಿನ ನಮ್ಮ ಸಂದರ್ಭಕ್ಕೆ ತೀರಾ ಪ್ರಸ್ತುತವಾದುದೆಂದು ಓದುಗರು ಅದನ್ನು ಗಮನಿಸಿದ್ದಾರೆ. ರಾಷ್ಟ್ರೀಯತೆಯನ್ನು ನಿಷ್ಕೃಷ್ಟವಾಗಿ ಅರ್ಥೈಸುವ ಬೇರೆ ಮೂರು ಧೀರೋದಾತ್ತ ನಾಯಕರ ಲೇಖನಗಳನ್ನು ಈ ಸಂಚಿಕೆಯಲ್ಲಿ ನೀಡಲಾಗುತ್ತಿದೆ. ಸುಭಾಷ್ ಚಂದ್ರ ಬೋಸ್, ಡಾ॥ ಬಿ. ಆರ್. ಅಂಬೇಡ್ಕರ್ ಮತ್ತು ಭಗತ್ ಸಿಂಗ್ ಅವರ ಚಿಂತನೆಗಳು ನಮಗೆ ಮಾರ್ಗದರ್ಶಕ ಸೂತ್ರಗಳಾಗಬೇಕು.

**ಜಿ. ರಾಮಕೃಷ್ಣ**

**ಸುಭಾಷ್ ಚಂದ್ರ ಬೋಸ್**

ಆರೋಗ್ಯಕರ ರಾಷ್ಟ್ರೀಯತೆಗಾಗಿ ದುರಭಿಮಾನವನ್ನು ಹಿಮ್ಮೆಟ್ಟಿಸೋಣ. ಈ ಹಂತದಲ್ಲಿ ನನ್ನ ದೇಶವಾಸಿಗಳಿಗೆ ಮತ್ತು ಯುವಮಿತ್ರರಿಗೆ ರಾಷ್ಟ್ರೀಯತೆಯ ಮೇಲೆ ನಡೆಯುತ್ತಿರುವ ಹಲ್ಲೆಯನ್ನು ಕುರಿತು ಎಚ್ಚರಿಸಬೇಕಾಗಿದೆ. ರಾಷ್ಟ್ರೀಯತೆಯನ್ನು ಸಂಕುಚಿತ, ಸ್ವಾರ್ಥಿ ಮತ್ತು ಆಕ್ರಮಣಕಾರಿ ಎಂದು ಬಿಂಬಿಸುವವರಿದ್ದಾರೆ. ಅಂತರರಾಷ್ಟ್ರೀಯ ಸಾಂಸ್ಕೃತಿಕ ನೆಲೆಗೆ ಸಾಗಲು ಇದು ಅಡ್ಡಿಯೊಡ್ಡಿದೆ ಎನ್ನುತ್ತಾರೆ ಅವರು. ಅದಕ್ಕೆ ನನ್ನ ಉತ್ತರ ಇಷ್ಟೆ: ಭಾರತೀಯ ರಾಷ್ಟ್ರೀಯತೆಗೆ ಅವರು ಹೇಳುವ ಲಕ್ಷಣಗಳಿಲ್ಲ. ಮಾನವ ಜನಾಂಗವು ಅಪೇಕ್ಷಿಸುವ ಉಚ್ಚ ಆದರ್ಶಗಳು ನಮ್ಮ ರಾಷ್ಟ್ರೀಯತೆಯಲ್ಲಿವೆ. ಸತ್ಯ, ಶಿವ (ಒಳ್ಳೆಯತನ) ಮತ್ತು ಸುಂದರ ಎಂಬುವು ಆ ನಿರ್ದೇಶಗಳು. ಸತ್ಯನಿಷ್ಠೆ, ಪ್ರಾಮಾಣಿಕತೆ ಮತ್ತು ದೃಢತೆಯನ್ನು ರಾಷ್ಟ್ರೀಯತೆ ನಮಗೆ ಕಲಿಸಿದೆ. ಸೇವಾ ಮನೋಭಾವ ಮತ್ತು ತ್ಯಾಗಬುದ್ಧಿ ಸಹ ಅದರ ಕಾಣಿಕೆಯೇ. ನಮ್ಮ ಸೃಜನಾತ್ಮಕ ಶಕ್ತಿಯನ್ನದು ಹಿಗ್ಗಿಸಿದೆ. ಶತಮಾನಗಳ ಕಾಲ ಆ ಶಕ್ತಿಯು ನಮ್ಮ ಜನರಲ್ಲಿ ಸುಪ್ತವಾಗಿತ್ತು. ಅದು ಜಾಗೃತವಾಗಿದ್ದು ಈಗ ನಮ್ಮ ಕಲೆಯಲ್ಲಿ ಅದು ಮರುಹುಟ್ಟು ಪಡೆದಿದೆ.

ರಾಷ್ಟ್ರೀಯತೆಯ ಮೇಲಿನ ಇನ್ನೊಂದು ಟೀಕೆಯು ಅಂತರರಾಷ್ಟ್ರೀಯ ಸಾಮ್ಯವಾದ ಅಥವಾ ಅಂತರರಾಷ್ಟ್ರೀಯ ದುಡಿಮೆಯ ನೆಲೆಯಿಂದ ಬಂದಿದೆ. ಅದು ಮತಿಹೀನವಾದ್ದು ಮತ್ತು ಇಂದಿನ ನಮ್ಮ ವಿದೇಶಿ ಆಳ್ವಿಕೆಗೆ ಅನುಕೂಲ ಕಲ್ಪಿಸಿದೆ. ಭಾರತೀಯ ಸಮಾಜವನ್ನು ಮರುನಿರ್ಮಾಣ ಮಾಡುವಾಗ ಮೊದಲಿಗೆ ನಮ್ಮ ಭವಿಷ್ಯದ ನಿರ್ಧಾರಕರು ನಾವಾಗಿರುವಂತೆ ನೋಡಿಕೊಳ್ಳಬೇಕು. ಅತಿ ಸಾಮಾನ್ಯರೂ ಅದನ್ನು ತಿಳಿದಿದ್ದಾರೆ. ಬ್ರಿಟಿಷರು ನಮ್ಮ ಯಜಮಾನರಾಗಿರುವವರೆಗೆ ಯಾವ ಪುನರ್ನಿರ್ಮಾಣದ ಹಕ್ಕೂ ನಮಗೆ ಲಭ್ಯವಿರುವುದಿಲ್ಲ. ರಾಷ್ಟ್ರೀಯವಾದಿಗಳು ಮತ್ತು ಕಮ್ಯುನಿಸ್ಟರು ಆದಷ್ಟು ಬೇಗನೆ ರಾಜಕೀಯ ವಿಮುಕ್ತಿಗಾಗಿ ಶ್ರಮಿಸಬೇಕು.

ದುಡಿಮೆಗಾರರು ಮತ್ತು ರಾಷ್ಟ್ರೀಯತೆಗಳ ನಡುವೆ ಐಕ್ಯತೆಯ ಸಾಧನೆಯು ಅವಶ್ಯಕ. ದುಡಿಮೆಗಾರರಲ್ಲಿ ಕೃಷಿಕಾರರೂ ಸೇರುತ್ತಾರೆ. ಕಾಂಗ್ರೆಸ್ ಅಧಿವೇಶನಗಳಲ್ಲಿ ಎಷ್ಟೋ ಬಾರಿ ದುಡಿಯುವ ಜನರನ್ನು ಸಂಘಟಿಸಬೇಕೆಂದು ನಿರ್ಣಯಗಳನ್ನು ಕೈಗೊಂಡಿದ್ದೇವೆ, ಆದರೆ ಕಾರ್ಯತಃ ಅದನ್ನು ಮಾಡಿಲ್ಲ.

ಮತೀಯ ವ್ರಣಗಳನ್ನು ವಾಸಿ ಮಾಡಲು ನಡೆಸಲಾಗುತ್ತಿರುವ ತೇಪೆದಾರಿ ಯತ್ನಗಳನ್ನು ನಾನು ವಿರೋಧಿಸುವುದಿಲ್ಲ. ಆದರೆ ಹೆಚ್ಚು ಪರಿಣಾಮಕಾರಿ ಪರಿಹಾರ ಮಾರ್ಗಗಳು ನಮಗೆ ಬೇಕಾಗಿವೆ. ಮತೀಯ ಸಮಸ್ಯೆಗಳನ್ನು ನಾವು ಬಗೆಹರಿಸಿ ಕೊಳ್ಳಲೇಬೇಕು. ಎಲ್ಲ ಮತಧರ್ಮೀಯ ಬಣಗಳೂ ನಮ್ಮ ಪರಂಪರೆ, ಆದರ್ಶ ಮತ್ತು ಇತಿಹಾಸವನ್ನು ತಿಳಿಯಬೇಕು, ಎಲ್ಲ ಧರ್ಮಗಳ ಇತಿಹಾಸವನ್ನೂ ಅರಿಯಬೇಕು. ಸಾಂಸ್ಕೃತಿಕ ಗಾಢ ಪರಿಚಯವು ಮತೀಯ ಶಾಂತಿ ಮತ್ತು ಸಾಮರಸ್ಯಗಳಿಗೆ ಪೂರಕ. ವಿವಿಧ ಧರ್ಮೀಯರ ರಾಜಕೀಯ ಐಕ್ಯತೆಗೆ ಸಾಂಸ್ಕೃತಿಕ ತಿಳಿವಳಿಕೆಯು ಹಾದಿ ಮಾಡಿಕೊಡುತ್ತದೆ. ಸದ್ಯದಲ್ಲಂತೂ ಭಾರತ ವಾಸಿಗಳಾದ ಬೇರೆ ಬೇರೆ ಸಮುದಾಯಗಳು ಪ್ರತ್ಯೇಕತೆಯಲ್ಲಿ ಮುಳುಗಿದ್ದಾರೆ.

ಸಾಂಸ್ಕೃತಿಕ ತಿಳಿವಳಿಕೆ ಪಡೆಯುವುದಕ್ಕೆ ಧರ್ಮನಿರಪೇಕ್ಷತೆಯ ಮದ್ದು ಸಹಕಾರಿ ಯಾಗುತ್ತದೆ. ವೈಚಾರಿಕತೆಯೂ ಒಂದು ಸಾಧನ. ಸಾಂಸ್ಕೃತಿಕ ಬಾಂಧವ್ಯಕ್ಕೆ ಉನ್ಮತ್ತ ಅಭಿಮಾನವು ಭಾರಿ ಮುಳ್ಳಾಗಿದೆ. ಅದಕ್ಕೆ ಸೆಕ್ಯುಲರ್ ಮತ್ತು ವೈಜ್ಞಾನಿಕ ದೃಷ್ಟಿಗಿಂತ

ಉತ್ತಮವಾದ ಮದ್ದು ಬೇರೊಂದಿಲ್ಲ. ಈ ದೃಷ್ಟಿಯು ಆರ್ಥಿಕತೆಯ ಪ್ರಶ್ನೆಗೂ ಸಹಕಾರಿ. ಅವೆರಡೂ ಪರಸ್ಪರ ಸಂಬಂಧ ಹೊಂದಿವೆ. ಆರ್ಥಿಕವಾಗಿ ನಮ್ಮ ಇಂದು ಮತ್ತು ಮುಂದು ಏನಿರಬೇಕೆಂಬ ಪ್ರಶ್ನೆಯು ಸಹಜವಾಗಿಯೇ ಧರ್ಮನಿರಪೇಕ್ಷತೆ ಮತ್ತು ವೈಜ್ಞಾನಿಕ ದೃಷ್ಟಿಗೆ ನಮ್ಮನ್ನು ಒಯ್ಯುತ್ತದೆ. ಒಬ್ಬ ಹಿಂದು ರೈತನ ಮತ್ತು ಮುಸಲ್ಮಾನ ರೈತನ ನಡುವಿನ ಸಾಮರಸ್ಯವು ಮುಸಲ್ಮಾನ ರೈತ ಮತ್ತು ಮುಸಲ್ಮಾನ ಜಮೀನ್ದಾರನ ನಡುವೆ ಇರಲಾರದು. ಜನತೆಗೆ ತಿಳಿಸಬೇಕಾದ್ದು ಅದರ ಆರ್ಥಿಕ ಹಿತ ಯಾವುದರಲ್ಲಿ ಅಡಗಿದೆ ಎಂಬುದನ್ನು. ಅದನ್ನು ತಿಳಿದವರು ಮತೀಯ ಘರ್ಷಣೆಗಳಿಗೆ ಸೊಪ್ಪು ಹಾಕುವುದಿಲ್ಲ.

ನಮ್ಮ ಯುವಜನತೆಯು ಜಾಗೃತಗೊಂಡಿರುವುದು ಆಶಾದಾಯಕ ಸನ್ನಿವೇಶವನ್ನು ಸೃಷ್ಟಿಸಿದೆ. ಚಳುವಳಿಯು ಇಡೀ ದೇಶವನ್ನು ವ್ಯಾಪಿಸಿದೆ. ಅದರಲ್ಲಿ ಯುವಕ–ಯುವತಿಯರೆಲ್ಲಾ ಭಾಗಿಗಳಾಗಿದ್ದಾರೆ. ಯುವಕರಲ್ಲಿ ಸ್ವಯಂ–ಪ್ರಜ್ಞೆ ಮೂಡಿದೆ; ಅವರಿಗೆ ಆದರ್ಶದ ಸ್ಫೂರ್ತಿಯಿದೆ. ಅಂತಃಕರಣದಲ್ಲಿ ಅವರಿಗೆ ಅಂತಿಮ ಗುರಿಯನ್ನು ಮುಟ್ಟುವ ತವಕವಿದೆ. ರಾಷ್ಟ್ರೀಯ ಆತ್ಮವು ಅವರಲ್ಲಿ ಜಾಗರಣಗೊಂಡಿದೆ. ನಮ್ಮ ದೇಶದ ಭವಿಷ್ಯವನ್ನು ನಿರ್ಧರಿಸುವವರು ಈ ಯುವಕರೇ. ಅವರ ಮನಸ್ಸನ್ನು ಕದಡಬಾರದು, ಬದಲಾಗಿ ಅದನ್ನು ಉತ್ತೇಜಿಸಬೇಕು.

ಸ್ನೇಹಿತರೆ, ಯುವಕರನ್ನು ಬೆಂಬಲಿಸಿ ಯುವಕರ ಚಳುವಳಿಗೆ ಜೀವತುಂಬಿ. ಸ್ವಯಂ–ಪ್ರಜ್ಞೆ ಇರುವ ಯುವಕರು ಕ್ರಿಯಾಶೀಲರಷ್ಟೇ ಅಲ್ಲ, ಕನಸುಗಾರರು ಕೂಡ. ಅವರು ಧ್ವಂಸ ಮಾಡಬಲ್ಲರು, ಆದರೆ ಕಟ್ಟಬಲ್ಲರು ಸಹ. ಹಿರಿಯರು ಸೋಲಬಹುದು, ಯುವಕರು ಸೋಲುವುದಿಲ್ಲ. ನೂತನ ಭಾರತದ ನಿರ್ಮಾಣ ಮಾಡುವವರು ಅವರು. ನನ್ನ ಮಾತನ್ನು ನಂಬಿ, ನಮ್ಮ ದೇಶದಲ್ಲಿ ಮತೀಯತೆ ಮತ್ತು ಉನ್ಮತ್ತ ಅಭಿಪ್ರಾಯಗಳನ್ನು ಚಿವುಟಿಹಾಕಲು, ಆ ಪೀಡೆಗಳನ್ನು ತೊಲಗಿಸಲು ನಾವು ಮೊದಲು ಯುವಕರ ನಡುವೆ ಕೆಲಸ ಮಾಡಬೇಕು.

**೩) ಭಗತ್ ಸಿಂಗ್**

ತಾರತಮ್ಯ ರಹಿತ ರಾಷ್ಟ್ರ ನಮ್ಮ ದೇಶವು ಅನುಭವಿಸಿರುವಷ್ಟು ಪೆಟ್ಟುಗಳನ್ನು ಬಹುಶಃ ಬೇರಾವ ದೇಶವೂ ಅನುಭವಿಸಿಲ್ಲ. ಪ್ರತಿದಿನ ನಮ್ಮೆದುರು ವಿಚಿತ್ರ ಪ್ರಶ್ನೆಗಳು ಉದ್ಭವಿಸುತ್ತವೆ. ಅವುಗಳಲ್ಲೆಲ್ಲಾ ಅತ್ಯಂತ ಗಂಭೀರವಾದ ಪ್ರಶ್ನೆಯೆಂದರೆ ಅಸ್ಪೃಶ್ಯತೆ. ನಮ್ಮ ಮೂವತ್ತು ಕೋಟಿ ಜನಗಳಲ್ಲಿ ಸುಮಾರು ಆರು ಕೋಟಿ ಜನರನ್ನು ಅಸ್ಪೃಶ್ಯರೆಂದು ಕರೆಯಲಾಗಿದೆ. ಅವರನ್ನು ಮುಟ್ಟಿದರೆ ಶ್ರದ್ಧೆ ಕಪ್ಪಾಗಿಬಿಡುತ್ತದಂತೆ !!

ನಮ್ಮ ದೇಶವು ಅಧ್ಯಾತ್ಮಕ್ಕೆ ಬದ್ಧವೆನ್ನುತ್ತಾರೆ. ಆದರೆ ನಮ್ಮಲ್ಲಿ ಮಾನವರನ್ನು ಮಾನವರನ್ನಾಗಿ ನಡೆಸಿಕೊಳ್ಳುವ ಪದ್ಧತಿ ಇಲ್ಲ. ಯೂರೋಪಿನ ಹಲವು ರಾಷ್ಟ್ರಗಳು ಸುಖಭೋಗಕ್ಕೆ ಈಡಾಗಿವೆಯೆನ್ನುತ್ತಾರೆ. ಆದರೆ ಅಲ್ಲಿ ಇಷ್ಟು ಕ್ರೂರ ತಾರತಮ್ಯಗಳಿಲ್ಲ. ಫ್ರಾನ್ಸ್ ಮತ್ತು ಅಮೆರಿಕಾಗಳಲ್ಲಿ ಕ್ರಾಂತಿ ಜರುಗಿದ ತರುವಾಯದಲ್ಲಿ ಮಾನವರೆಲ್ಲಾ ಸಮಾನರೆಂಬ ಘೋಷಣೆ ಬಂದಿತ್ತು. ಈಗ ರಷ್ಯಾ ಸಹ ಅದೇ ಆಶಯವನ್ನು ಪ್ರಕಟಪಡಿಸಿದೆ. ಅದಕ್ಕೆ ಭಿನ್ನವಾಗಿ ಆತ್ಮನ್ ಮತ್ತು ಪರಮಾತ್ಮ ಉಂಟೋ ಇಲ್ಲವೋ ಎಂಬ ಜಿಜ್ಞಾಸೆಯಲ್ಲಿ ನಾವು ಆಸಕ್ತ ರಾಗಿದ್ದೇವೆ. ಅಸ್ಪೃಶ್ಯರು ಜನಿವಾರ ಹಾಕಿಕೊಳ್ಳ ಬಹುದೋ ಇಲ್ಲವೋ ಎಂಬುದನ್ನು ಜೀವನ್ಮರಣದ ಪ್ರಶ್ನೆ ಎಂಬಂತೆ ಚರ್ಚಿಸುತ್ತೇವೆ. ಅವರು ವೇದ ಓದಬಹುದೋ ಇಲ್ಲವೋ ಎಂಬುದು ನಮಗೆ ದೊಡ್ಡ ವಿಚಾರ ! ವಿದೇಶದ ರಾಷ್ಟ್ರಗಳು ನಮ್ಮನ್ನು ಗೌರವಿಸು ವುದಿಲ್ಲ; ಬ್ರಿಟಿಷರು ನಮಗೆ ಸಮಾನತೆಯನ್ನು ನೀಡಿಲ್ಲ, ಎಂದೆಲ್ಲಾ ಅಳುತ್ತೇವೆ. ಇದಕ್ಕೆಲ್ಲಾ ಅಳುತ್ತಾ ಕೂರಬೇಕೆ? ಸಿಂಧ್ ಪ್ರಾಂತ್ಯದವನೂ ಮುಂಬೈ ಕೌನ್ಸಿಲ್ ಸದಸ್ಯನೂ ಆದ ನೂರ್ ಮುಹಮ್ಮದ್ ಚೆನ್ನಾಗಿ ಹೇಳಿದ್ದಾನೆ: **"ಹಿಂದೂ ಸಮಾಜವು ಬೇರೆ ಮಾನವರನ್ನು, ಸಹ–ಪ್ರಜೆಗಳನ್ನು ಸಾರ್ವಜನಿಕ ಶಾಲೆಗಳಿಗೆ ಸೇರಿಸಿಕೊಳ್ಳು ವುದಿಲ್ಲ... ಸ್ಥಳೀಯ ಬೋರ್ಡ್ ಅಧ್ಯಕ್ಷ ಲಕ್ಷಗಟ್ಟಲೆ ಜನರ ಪ್ರತಿನಿಧಿ, ಆದರೆ ಅವನ ಸೋದರರಿಗೆ ನೀರು ಕುಡಿಯುವ ಪ್ರಾಥಮಿಕ ಮಾನವ ಹಕ್ಕು ಸಹ ಅವನು ನೀಡುವುದಿಲ್ಲ. ಹಾಗಿರುವಾಗ ಅಧಿಕಾರಶಾಹಿಯಿಂದ ಆ ಸೋದರರು ಯಾವ ಹಕ್ಕುಗಳನ್ನು ಪಡೆದಾರು? ಬೇರೆ ದೇಶಗಳಿಂದ ಬಂದಿರುವವರನ್ನು ದೂಷಿಸುವ ಮುನ್ನ ನಮ್ಮ ಜನಗಳನ್ನು ನಾವು ಹೇಗೆ ನಡೆಸಿಕೊಳ್ಳು ತ್ತಿದ್ದೇವೆ ಎಂಬುದನ್ನು ಸ್ವಲ್ಪ ವಿಶ್ಲೇಷಿಸಿಕೊಳ್ಳೋಣ. ನಮ್ಮ ಜನಗಳಿಗೆ ಪ್ರಾಥಮಿಕ ಹಕ್ಕುಗಳನ್ನು ನಿರಾಕರಿಸಿ ದೇಶಕ್ಕೆ ಹೆಚ್ಚಿನ ರಾಜಕೀಯ ಹಕ್ಕುಗಳನ್ನು ನಿರೀಕ್ಷಿಸುವುದು ಎಷ್ಟು ಸಮಂಜಸ?"**

ಇದು ಮುಕ್ತ ಮತ್ತು ಹರಿತವಾದ ಹೇಳಿಕೆ. ಅದನ್ನು ಹೇಳಿದ್ದು ಒಬ್ಬ ಮುಸಲ್ಮಾನನೆಂಬ ಕಾರಣಕ್ಕೆ ಆತ ಅಸ್ಪೃಶ್ಯರನ್ನು ತನ್ನ ಮತಕ್ಕೆ ಸೆಳೆಯಲು ಯತ್ನಿಸುತ್ತಿದ್ದಾನೆ ಎಂದು ಅವನನ್ನು ಜರಿಯುತ್ತಾರೆ. ಪ್ರಾಣಿಗಳಿಗಿಂತಲೂ ಕಡೆ ಎಂಬಂತೆ ಅಸ್ಪೃಶ್ಯರನ್ನು ನಡೆಸಿಕೊಂಡರೆ ಅವರು ಯಾವುದೇ ಮತಕ್ಕಾದರೂ ಹೋಗಲು ತಯಾರಾಗಿಯಾರು.




ಇತ್ತೀಚೆಗೆ ಹಿಂದು ಮಹಾಸಭೆಯು ಪಾಟ್ನಾದಲ್ಲಿ ಸಮ್ಮೇಳನ ನಡೆಸಿತು, ಲಾಲಾ ಲಜಪತ ರಾಯ್ ಅಧ್ಯಕ್ಷ ರಾಗಿದ್ದರು. ಲಾಲಾಜಿ ಅಸ್ಪೃಶ್ಯರ ಬಗ್ಗೆ ಸಹಾನುಭೂತಿ ಉಳ್ಳವರು. ದೀರ್ಘವಾದ ಚರ್ಚೆ ನಡೆಯಿತು... ಅಸ್ಪೃಶ್ಯರು ಜನಿವಾರ ಹಾಕಿಕೊಳ್ಳಬಹುದೇ ಎಂಬುದು ವಿಷಯ. ಅವರು ವೇದ ಮತ್ತು ಶಾಸ್ತ್ರಗಳನ್ನು ಓದಬಹುದೇ ಎಂದು. ನಮ್ಮ ಪ್ರಸಿದ್ಧ ಸಮಾಜ ಸುಧಾರಕರು ಸಹನೆ ಕಳೆದುಕೊಂಡರು. ಆದರೆ ಎರಡೂ ವಿಷಯಗಳನ್ನು ಒಪ್ಪಲು ಆಗ್ರಹಿಸಿ ಹಿಂದು ಮತಕ್ಕೆ ದಡ ಕಾಣಿಸಿದರು. ಅವರಿಲ್ಲದಿದ್ದರೆ ಎಂತಹ ನಾಚಿಕೆಗೇಡಿನ ಪ್ರಸಂಗವಾಗಿಬಿಡುತ್ತಿತ್ತು! ನಾಯಿ ನಮ್ಮ ತೊಡೆಯ ಮೇಲೆ ಕೂರಬಹುದು, ಬೆಕ್ಕು ಅಡುಗೆ ಮನೆಯಲ್ಲೆಲ್ಲಾ ಓಡಾಡಬಹುದು, ಆದರೆ ಮನುಷ್ಯ ಹಾಗೆ ಮಾಡಿದರೆ ಅಥವಾ ನಮ್ಮನ್ನು ಮುಟ್ಟಿದ್ದರೆ ನಿಮ್ಮ ಧರ್ಮಕ್ಕೆ ಮುಕ್ಕಾಯಿತೆಂದು ಅಬ್ಬರಿಸುತ್ತಾರೆ. ಮಹಾನ್ ಸಮಾಜ ಸುಧಾರಕರೆಂದು ಹೇಳಲಾದ ಮಾನ್ಯ ಮಾಳವೀಯ ಅಂಥವರು ಅಸ್ಪೃಶ್ಯರ ರಕ್ಷಕರಂತೆ ಹಾರ ಹಾಕಿಸಿಕೊಳ್ಳುತ್ತಾರೆ. ಅದೂ ಝಾಡಮಾಲಿಯೇ ಆಗಬೇಕು. ಆದರೆ ಅವರು ಮೈಲಿಗೆಯಾಗಿ ಬಿಡುತ್ತಾರೊ? ಮನೆಗೆ ಹೋಗಿ ಬಟ್ಟೆ ಸಮೇತ ತಲೆಮೇಲೆ ನೀರು ಸುರಿದುಕೊಳ್ಳುತ್ತಾರೆ, ಎಂತಹ ಮೋಸ! ...

ನಮ್ಮ ಸೇವೆ ಮಾಡುವವರನ್ನು ನಾವು ತುಚ್ಛವಾಗಿ ಕಾಣುತ್ತೇವೆ. ಪ್ರಾಣಿಗಳನ್ನು ಪೂಜಿಸುತ್ತೇವೆ, ಆದರೆ ಮನುಷ್ಯರನ್ನು ನಮ್ಮೊಡನೆ ಕೂಡಿಸಿಕೊಳ್ಳುವುದಿಲ್ಲ.

ಇಂದಿನ ಜ್ವಲಂತ ಪ್ರಶ್ನೆ ಇದು. ನಮ್ಮ ರಾಷ್ಟ್ರೀಯ ಹೋರಾಟವು ಮುಂದುವರಿದಂತೆ ಮತೀಯ ಪ್ರಶ್ನೆಯು ಒಂದು ಸೂಚನೆ ನೀಡಿದೆ : ಹೆಚ್ಚಿನ ಹಕ್ಕುಗಳನ್ನು ಪಡೆಯಲು ಜನ ಅವರವರ ಮತದವರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬಯಸುತ್ತಾರೆ. ಮುಸಲ್ಮಾನರು ಬೇರೆಯ ವರಿಗಿಂತ ಹೆಚ್ಚಾಗಿ ಅದನ್ನು ಮಾಡುತ್ತಿದ್ದಾರೆ. ಇಸ್ಲಾಂಗೆ ಮತಾಂತರಗೊಂಡ ಅಸ್ಪೃಶ್ಯರಿಗೆ ಸಮಾನ ಹಕ್ಕುಗಳನ್ನು ಅವರು ನೀಡುತ್ತಾರೆ; ಅದರಿಂದ ಹಿಂದುಗಳು ಕುಪಿತರಾಗುತ್ತಾರೆ. ಆಮೇಲೆ ಸ್ಪರ್ಧೆ ಪ್ರಾರಂಭವಾಗಿ ಹಲವಾರು ಕಡೆ ಪರಸ್ಪರ ಬಡಿದಾಡುತ್ತಾರೆ. ಕ್ರೈಸ್ತರು ಮುಗುಮ್ಮಾಗಿ ಅವರ ಸ್ಥಾನ ಉತ್ತಮಗೊಳಿಸಿಕೊಳ್ಳು ತ್ತಿದ್ದಾರೆ. ಏನೇ ಇರಲಿ, ನಮ್ಮ ದೇಶದ ಮೇಲಿನ ಶಾಪವು ಈ ಬೆಳವಣಿಗೆಗಳಿಂದಾಗಿ ತಗ್ಗುತ್ತಿದೆ...

ಇದರಿಂದ ಒಂದು ಪ್ರಶ್ನೆ ಏಳುತ್ತದೆ; ಈ ಸಮಸ್ಯೆಗೆ ಪರಿಹಾರವೇನು?... ಎಲ್ಲ ಮಾನವರೂ ಸಮಾನರೆಂದು ಒಪ್ಪಿ ನಾವು ಪರಿಹಾರ ಪಡೆಯಬೇಕು. ಹುಟ್ಟು, ಉದ್ಯೋಗ, ಯಾವುದೂ ಅವರನ್ನು ಭಿನ್ನೈಸುವಂತಿರ ಬಾರದು... ನಮ್ಮ ಪೂರ್ವಜರಾದ ಆರ್ಯರು ಅವರನ್ನು ಕೆಟ್ಟದ್ದಾಗಿ ನಡೆಸಿಕೊಂಡರು ಮತ್ತು ಸೇವಾ ಕಾರ್ಯಗಳಿಗೆ ಅವರನ್ನು ದೂಡಿದರು. ಅವರಿನ್ನೆಲ್ಲಿ ಮುಗಿಬೀಳುತ್ತಾರೋ ಎಂದು ಪುನರ್ಜನ್ಮದ ತತ್ತ್ವವನ್ನು ಮುಂದಿಟ್ಟರು. ಹಿಂದಿನ ಜನ್ಮದ ಕರ್ಮದಿಂದಾಗಿ ನೀನೇನಾಗಿದ್ದೀಯೋ ಅದಾಗಿದ್ದೀಯೆ ಎಂಬ ಸಮಾಧಾನ ನೀಡಿದರು.

ನಾವೀಗ ಏನು ಮಾಡಬಹುದು? ಏನೂ

ಮಾಡದೆ ಸುಮ್ಮನಿರಬಹುದೆ? ಹಲವು ಶತಮಾನಗಳ ಕಾಲ ಅವರಿಗೆ ದನಿ ಇಲ್ಲದಂತೆ ಮಾಡಿ ಕೂರಿಸಿದ್ದೇವೆ. ಅದೊಂದು ಮಹಾಪಾಪ. ಇದೀಗ ಅದಕ್ಕೆ ನಾವು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿದೆ.

**ರಾಷ್ಟ್ರವೆಂದರೆ ಯಾರು?**

**ಡಾ॥ ಬಿ. ಆರ್. ಅಂಬೇಡ್ಕರ್**

**(೧೯೪೦ರಲ್ಲಿ ಬರೆದಿದ್ದು)**

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿತವಾದ ನಂತರ ಹಿಂದು ರಾಜಕಾರಣಿಗಳು ಮತ್ತು ಆಂಗ್ಲೋ-ಇಂಡಿಯನ್ನರು ಒಂದು ವಿಷಯದ ಬಗ್ಗೆ ಚರ್ಚೆ ನಡೆಸುತ್ತಾ ಬಂದಿದ್ದಾರೆ : ಭಾರತವು ಒಂದು ರಾಷ್ಟ್ರವೇ, ಎಂದು. ಭಾರತೀಯರೆಂದರೆ ಭಾರತವೆಂಬ ಭೌಗೋಳಿಕ ಪ್ರದೇಶದ ಜನ, ಅದು ರಾಷ್ಟ್ರವಲ್ಲ ಎಂಬುದು ಆಂಗ್ಲೋ-ಇಂಡಿಯನ್ನರ ವಾದ. ಹಿಂದುಗಳು ಅದನ್ನು ನಿರಾಕರಿಸುತ್ತಾ ರಾಷ್ಟ್ರೀಯತೆಯನ್ನು ಘೋಷಿಸಿ ಕೊಳ್ಳುತ್ತಾರೆ. ಟಾಗೋರರು ರಾಷ್ಟ್ರೀಯತೆಯ ವ್ಯಾಖ್ಯಾನದಲ್ಲೂ ಹಿಂದುಗಳ ಬೆಂಬಲಿಗರಾಗಲಿಲ್ಲ.

ರಾಷ್ಟ್ರೀಯತೆಯು ದೇಶದ ಜನರ ವಿಶಿಷ್ಟ ಗುಣಗಳ ಸೂಚಕವೆಂದು ಹೇಳಲಾಗುವುದರಿಂದ ಇಂತಹ ತಕರಾರು ಬಂದಿದೆ. ಮಾನವನು ಲಕ್ಷಣವಾಗಿ ಬಟ್ಟೆ ತೊಡುವಂತೆ ರಾಷ್ಟ್ರೀಯತೆಯನ್ನೂ ಧರಿಸುತ್ತಾನೆಂದು ಎಚ್. ಜಿ. ವೆಲ್ಸ್ ಹೇಳುತ್ತಿದ್ದ. ಸ್ವಯಮಾಡಳಿತದ ಹಿನ್ನೆಲೆಯಲ್ಲಿ ನಡೆದ ಚರ್ಚೆ ಇದು. ರಾಷ್ಟ್ರೀಯತೆಯಿಲ್ಲ ದಿದ್ದರೆ ಸ್ವಯಮಾಡಳಿತಕ್ಕೆ ಅರ್ಥವಿರುವುದಿಲ್ಲವೆಂಬ ಗ್ರಹಿಕೆಯು ವೆಲ್ಸ್‌ನ ಹೇಳಿಕೆಗೆ ಕಾರಣ. ಅವನು ವಸಾಹತುಶಾಹಿಯ ವಿರೋಧಿ. 'ರಾಷ್ಟ್ರವೆಂದು ಹೇಳ ಲಾಗುವುದು' ಬೇರೆ, 'ರಾಷ್ಟ್ರವಾಗಿರುವುದು ಬೇರೆ' ಎಂದು ವೆಲ್ಸ್ ಭಾವಿಸಿದ್ದ. ಸ್ವಯಮಾಡಳಿತಕ್ಕಾಗಿ ಹಕ್ಕೊತ್ತಾಯವು 'ರಾಷ್ಟ್ರವಾಗಿದ್ದಾಗ' ಅರ್ಥವತ್ತಾಗಿ ರುತ್ತದೆ. ವೆಲ್ಸ್‌ನ ಈ ಅಭಿಪ್ರಾಯವನ್ನು ಭಾರತೀಯರು ಸ್ವಾಗತಿಸಿದ್ದರು. ಅದನ್ನು ಪ್ರಶ್ನಿಸಿದವರನ್ನು 'ಬ್ರಿಟಿಷ್ ಆಡಳಿತದ ಹತಾರಗಳು' ಎಂದು ಮೂದಲಿಸ ಲಾಗುತ್ತಿತ್ತು. ಸಹಜವಾಗಿಯೇ ಅಂಥವರನ್ನು 'ದೇಶದ ಶತ್ರುಗಳು' ಎನ್ನಲಾಗುತ್ತಿತ್ತು. ಮುಸ್ಲಿಂ ಲೀಗ್ ಸ್ಥಾಪಿತವಾದ ನಂತರ ಈ ಚರ್ಚೆಯು ಬಿರುಸಿನಿಂದ ನಡೆಯಿತು. ಮುಸಲ್ಮಾನರು ಬೇರೆ ರಾಷ್ಟ್ರೀಯತೆಯನ್ನು ಹೊಂದಿದ್ದರೆ, ಭಾರತವು 'ಒಂದು' ರಾಷ್ಟ್ರವಲ್ಲ ಎಂಬುದು ಅದಕ್ಕೆ ಕಾರಣ. ಇದು ಬೆನ್ನಿಗೆ ಚೂರಿ ಹಾಕಿದಂತೆ ಎಂದು ಅನೇಕ ಹಿಂದು ರಾಜಕಾರಣಿಗಳು ಸಿಟ್ಟಾಗಿದ್ದರು.

ಹಾಗಿದ್ದರೆ ರಾಷ್ಟ್ರವೆಂದರೇನು? ರಾಷ್ಟ್ರೀಯತೆಯು ಒಂದು ಸಾಮಾಜಿಕ ಭಾವನೆ. ಅದು 'ನಾವೆಲ್ಲಾ ಒಂದು' ಎಂಬ ಭಾವವನ್ನು ಆಧಾರವಾಗಿ ಹೊಂದಿರುತ್ತದೆ. ಈ ಭಾವನೆಗೆ ಎರಡು ಅಲುಗುಗಳು ಇರುತ್ತವೆ; ಯಾರೆಲ್ಲಾ ಒಂದೋ, ಅವರಲ್ಲೂ ಸೇರದವರು 'ಇತರರು' ಎನಿಸಿ ಕೊಳ್ಳುತ್ತಾರೆ. ಇದನ್ನು ಒಂದು ಪ್ರಜ್ಞೆ ಎನ್ನಬಹುದು. ಕೆಲವರನ್ನು ಒಗ್ಗಟ್ಟಾಗಿಸುತ್ತದೆ ಮತ್ತು ಆ ಪರಿಧಿಗೆ ಸೇರದವರನ್ನು ಪ್ರತ್ಯೇಕ ಮಾಡಲಾಗುತ್ತದೆ. ಇದರಲ್ಲಿ ಆರ್ಥಿಕ ಸಂಘರ್ಷಗಳು ಗೌಣವಾಗಿಬಿಡುತ್ತವೆ. ಈ ಸೂತ್ರವನ್ನು ಮುಸಲ್ಮಾನರಿಗೆ ಅನ್ವಯಿಸಿದಾಗ ಅವರದು ವಿಶೇಷ ಬಣವೋ ಅಲ್ಲವೋ ಎಂಬುದನ್ನು ತಿಳಿಯಬಹುದು. ಅವರದು ಸಾಮೂಹಿಕ ಪ್ರಜ್ಞೆಯೇ ಎಂಬುದೂ ಪ್ರಸ್ತುತ. ಹಿಂದುಗಳು ಸಾಧಿಸಿ ತೋರಿಸ ಬೇಕಾದ್ದು ಏನು? ಕೆಲವು ವ್ಯತ್ಯಾಸಗಳಿದ್ದಾಗ್ಯೂ ಹಿಂದುಗಳು ಮತ್ತು ಮುಸಲ್ಮಾನರು ಒಂದು ರಾಷ್ಟ್ರೀಯತೆ ಹೊಂದಿದ್ದಾರೆ, ಎಂಬುದು. ಅವರಿಬ್ಬರೂ ಒಟ್ಟಾಗಿ ಉಳಿಯಲು ಆಶಿಸುತ್ತಾರೆಂಬುದನ್ನು ಮತ್ತು ಭಾರತದ ಸಾಮಾಜಿಕ ಜೀವನದಲ್ಲಿ ಇಬ್ಬರಿಗೂ ಸಾಮ್ಯವಿದೆ ಎಂಬುದನ್ನು ತೋರಿಸಬೇಕು.

ಜನಾಂಗೀಯವಾಗಿ ಅವರಲ್ಲಿ ವ್ಯತ್ಯಾಸಗಳಿಲ್ಲ ಎನ್ನಲಾಗುತ್ತದೆ. ಪಂಜಾಬ್, ಬಿಹಾರ, ಬಂಗಾಳ ಹೀಗೆ ನೋಡಿದಾಗ ಆ ರಾಜ್ಯಗಳ ಹಿಂದು ಮತ್ತು ಮುಸಲ್ಮಾನರ ನಡುವೆ ಭಿನ್ನತೆ ಇಲ್ಲವೆನ್ನುತ್ತಾರೆ. ಮದ್ರಾಸಿನ ಬ್ರಾಹ್ಮಣರ ನಡುವಿನ ವ್ಯತ್ಯಾಸದಷ್ಟಿದ್ದಿಲ್ಲ ಎಂಬುದನ್ನು ನಿದರ್ಶನವಾಗಿ ನೀಡುತ್ತಾರೆ. ಎರಡನೆಯದಾಗಿ, ಎಲ್ಲ ಮುಸಲ್ಮಾನರಿಗೂ ಒಂದೇ ಭಾಷೆ ಇಲ್ಲ; ಆ ದೃಷ್ಟಿಯಿಂದ ಅವರು ಹಿಂದುಗಳಿಗಿಂತ ಭಿನ್ನರಲ್ಲ. ನಗರಗಳಲ್ಲಿ ಮುಸಲ್ಮಾನರೆಲ್ಲಾ ಉರ್ದು ಮಾತನಾಡಬಹುದು, ಆದರೆ ಹಳ್ಳಿಗಳಲ್ಲಿ ಪ್ರಾಂತೀಯ ಭಾಷೆಯನ್ನಾಡುತ್ತಾರೆ. ಮೂರನೆಯದಾಗಿ, ಹಲವು ಶತಮಾನಗಳಿಂದ ಇಬ್ಬರೂ ಒಂದೇ ದೇಶದಲ್ಲಿ ವಾಸಿಸುತ್ತಾ ಬಂದಿದ್ದಾರೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಇಬ್ಬರ ನಡುವೆ ಸಾಂಗತ್ಯವಿದೆ. ಅನೇಕ ಮುಸಲ್ಮಾನರ ಹೆಸರುಗಳಲ್ಲಿ ಹಿಂದು ಹೆಸರುಗಳಿರುತ್ತವೆ; ಚೌಧರಿ ಎಂಬುದು ಎರಡೂ ಪಂಗಡಗಳಲ್ಲೂ ಇರುವಂತೆ. ಅನೇಕ

# ಕೆರೆ ಮತ್ತು...

ನಮ್ಮೂರ ಕೆರೆ ನೀರಿಗಾಗಿ ಮೊರೆ
ಇಟ್ಟು ಮನವಿ ಸಲ್ಲಿಸಿದೆ;
ಕಡತವಿನ್ನೂ ವಿಲೇವಾರಿ ಆಗಿಲ್ಲ!
ಕೆರೆ ತುಂಬಿಸುವ ಮಾತಿಗೆ ಗೆದ್ದಲು,
ಹೂಳೆತ್ತುವವರ ದಂಧೆಗೆ ಹೊಸ ಖದರು!

ಮೋಡಗಳು ಮಂಡಕ್ಕಿ ತಿಂದು
ಗ್ಯಾಸ್ ಟ್ರಬಲ್‌ಗೆ ಈಡಾಗಿವೆ;
ಕಾಫಿ ಸೀಮೆಗೆ ಗುಳೇ ಹೋಗಿದ್ದ ಮೇಘರಾಜನಿಗೆ
ಕಂಗೆಟ್ಟ ಅಲ್ಲಿಯ ಜನ ಜಾನುವಾರುಗಳು
ಒದೆ ಕೊಟ್ಟ ಬಗ್ಗೆಯೂ ಸುದ್ದಿ ಬಿತ್ತರವಾಗುತ್ತಲಿದೆ!

ನಾನೂ ಬೆವರಜೀವಗಳಿಗೆ
ಗಂಟು ಬಿದ್ದಿದ್ದೆ;
ಬೆವರಿಂದಲಾದರೂ ತುಂಬೀತೇ ಒಡಲು?
ಪಾಪ, ಅವರು ಹರಿಸಿದ ಬೆವರು
ಆವಿಯಾಗಿ ತೇಲಾಡಿ ಮುಗಿಲ ಮುಖದಲ್ಲಿ
ಗೇಲಿಯ ಸಂಗತಿಯಾಗಿದೆ
ನನ್ನ ಹರಿದ ಕೆರ ನನಗೇ ಬಾರಿಸುತ್ತಿವೆ..!
ಬಾರಿಸು ಬಾರಿಸು ಡಿಂಡಿಮವ–
ಹಲಗಿ ಸದ್ದು ಉಳುವಾಯೋಗಿಯ
ಕುಂಡಿಗೆ ಬಡಿದು ಊಹೂಂಕಾರ
ಮೊಳಗುತ್ತಿದೆ ಎಲ್ಲೆಲ್ಲೂ..!

ಯಥಾಪ್ರಕಾರ,
ನರಪೇತಲ ಮೋಡಗಳು ಅತ್ತಿಂದಿತ್ತ
ಓಲಾಡಲೂ ಆಗದೇ ತಲೆಸುತ್ತು ಬಂದವರಂತೆ
ಆಕಾಶದ ಅರುಗಿನಲ್ಲೆಲ್ಲೋ ಚೆಲ್ಲಾಪಿಲ್ಲಿಯಾಗಿ
ಬಿದ್ದುಕೊಂಡಿವೆ..!



**ವಿಜಯಕಾಂತ ಪಾಟೀಲ**
ಚಿಕ್ಕಾಂಶಿ ಹೊಸೂರು–೫೮೧೧೧೦೪, ಹಾನಗಲ್ / ಹಾವೇರಿ

ಆಚರಣೆಗಳಲ್ಲೂ ಸಾಮ್ಯವಿದೆ. ಮುಸ್ಲಮಾನರಲ್ಲಿಯೂ ಜಾತಿಯ ವಿಗಂಡಣೆ ಇದೆಯೆಂಬುದು ಗಮನಾರ್ಹ ಎಂಬ ಮಾತಿದೆ. ಅಲ್ಲದೆ, ಮುಸಲ್ಮಾನ 'ಪೀರ್'ಗಳಿಗೆ ಹಿಂದು ಶಿಷ್ಯರಿದ್ದಾರೆ, ಹಿಂದು ಯೋಗಿಗಳಿಗೆ ಮುಸಲ್ಮಾನ ಶಿಷ್ಯರಿದ್ದಾರೆ. ಪಂಜಾಬಿನ ಸಿರೋಟ್ ಎಂಬಲ್ಲಿ ಜಮಾಲ್ ಸುಲ್ತಾನ್ ಮತ್ತು ದಿಯಾಲ್ ಭವನ್‌ರ ಗೋರಿಗಳು ಪಕ್ಕ ಪಕ್ಕದಲ್ಲಿವೆ ಮತ್ತು ಹಿಂದುಗಳು ಹಾಗೂ ಮುಸಲ್ಮಾನರು ಎರಡಕ್ಕೂ ಸಮಾನವಾಗಿ ನಡೆದುಕೊಳ್ಳುತ್ತಾರೆ. (ಅಂಬೇಡ್ಕರರು ಇಂತಹ ಹಲವು ಉದಾಹರಣೆಗಳನ್ನು ನೀಡಿದ್ದಾರೆ–ಅನು.) ಪ್ರಶ್ನೆ ಏನೆಂದರೆ, ಇವೆಲ್ಲಾ ಅವರಿಬ್ಬರ ರಾಷ್ಟ್ರೀಯತೆ ಒಂದೇ ಎಂಬುದನ್ನು ಸ್ಥಿರಗೊಳಿಸುತ್ತವೆಯೇ? 'ನಾವೆಲ್ಲಾ ಒಂದೇ' ಎಂಬ ಭಾವನೆಯು ಅಂಕುರಿಸುವಂತಾಗಿದೆಯೆ?

ಹಿಂದುಗಳ ವಾದದಲ್ಲಿ ಒಂದು ಲೋಪ ಎದ್ದು ಕಾಣುತ್ತದೆ. ಅದೇನೆಂದರೆ, ಸಮಾನ ಲಕ್ಷಣಗಳನ್ನು ಪ್ರಜ್ಞಾಪೂರ್ವಕವಾಗಿ ರೂಢಿಸಿಕೊಳ್ಳಲಾಗಿದೆಯೇ ಎಂಬುದು. ಅವು ತಾಂತ್ರಿಕ ಕಾರಣಗಳಿಂದ ಉಂಟಾಗಿದ್ದರೆ ಸಾಲದು; ಅಸಂಪೂರ್ಣ ಮತಾಂತರದ ಕಾರಣದಿಂದ ಆಗಿರಬಾರದು. ಇಂಡಿಯಾದ ಮುಸಲ್ಮಾನರು ಸವರ್ಣೀಯ ಮತ್ತು ಅವರ್ಣೀಯ ಎಂಬ ಎರಡು ಬಣಗಳಿಂದಲೂ ಮತಾಂತರ ಹೊಂದಿದ್ದಾರೆ. ಯಾವ ಕಾರಣಗಳಿಂದ ಮತಾಂತರ ಗೊಂಡರೆಂಬುದು ಬೇರೆ ವಿಷಯ, ಆದರೆ ಎರಡು ಬಣಗಳಿಗೂ ಮತಾಂತರಕ್ಕೆ ಮುನ್ನ ಒಂದೇ ವಿಧದ ಮತಧರ್ಮೀಯ ಮತ್ತು ಸಾಮಾಜಿಕ ಸನ್ನಿವೇಶ ಗಳಿದ್ದವು. ಅದರಿಂದಾಗಿ ಈಗಲೂ ಸಮಾನವೆಂದು ತೋರುವ ಆಚರಣೆಗಳಿವೆ. ಸಮಾನ ಪರಿಸರವು ಸಮಾನ ಪ್ರತಿಕ್ರಿಯೆಗಳಿಗೆ ಅನುವು ನೀಡುತ್ತದೆ. ಆದ್ದರಿಂದ ಸಮಾನ ಮಾದರಿಗಳು ಉಂಟಾಗುತ್ತವೆ. ಅಕ್ಬರನ ಕಾಲದ ಮತಧರ್ಮೀಯ ಸಮ್ಮಿಶ್ರಣವೂ ಒಂದು ಕಾರಣವಾಗಿದ್ದಿರಬಹುದು.

ಜನಾಂಗ, ಭಾಷೆ, ವಾಸಿಸುವ ಪ್ರದೇಶ, ಇತ್ಯಾದಿ ಗಳಿಂದ ಉಂಟಾದ ಸಮಾನತೆಯು ಬೇರೆತೆರನಾದ್ದು. ಇದೇ ರಾಷ್ಟ್ರೀಯತೆಗೆ ಆಧಾರವೆಂದಾದರೆ ಹಿಂದುಗಳು ಮತ್ತು ಮುಸಲ್ಮಾನರು ಒಂದೇ ರಾಷ್ಟ್ರೀಯತೆ ಹೊಂದಿದ್ದಾರೆಂಬುದು ಸರಿ. ಆದರೆ ರಾಷ್ಟ್ರೀಯತೆಗೆ ಇವು ಎಲ್ಲೂ ಸಂಪೂರ್ಣವಾಗಿ ಆಧಾರಗಳಾಗಿಲ್ಲ ವೆಂಬುದೂ ಅಷ್ಟೇ ನಿಜ. ಜನಾಂಗ ಮತ್ತು ರಾಷ್ಟ್ರೀಯತೆ ಎಂಬುವು ಎಲ್ಲೆಲ್ಲೂ ಒಂದೇ ಆಗಿಲ್ಲ. ರೆನನ್ ಹೇಳುವಂತೆ, ಅಮೆರಿಕಾ ಸಂಯುಕ್ತ ರಾಜ್ಯಗಳು ಮತ್ತು ಬ್ರಿಟನ್ ಬೇರೆ ಬೇರೆ ರಾಷ್ಟ್ರೀಯತೆ ಹೊಂದಿವೆ, ಸ್ಪೇನ್ ಮತ್ತು ದಕ್ಷಿಣ ಅಮೆರಿಕಾ ದೇಶಗಳೂ ಹಾಗೆಯೇ. ಮಾನವರಲ್ಲಿ ಭಾಷೆ ಮತ್ತು ಮತಧರ್ಮಗಳಿಗಿಂತಲೂ ಹೆಚ್ಚಿನದಾದ ಒಂದಂಗವಿದೆ, ಅದೇ ಇಚ್ಛಾಶಕ್ತಿ. ರೆನನ್ ಪ್ರತಿಪಾದನೆಯನ್ನು ಆಳವಾಗಿ ಅವಲೋಕಿಸೋಣ: ರಾಷ್ಟ್ರವೆಂಬುದು ಜೀವಂತ ಆತ್ಮ. ಅದು ಭೂತ ಮತ್ತು ವರ್ತಮಾನಗಳೆರಡಕ್ಕೂ ಸೇರಿದ್ದು. ಒಂದು, ಸ್ಮೃತಿಗಳ ಸಮೃದ್ಧ ಪರಂಪರೆ, ಇನ್ನೊಂದು ಅದಕ್ಕೆ ನೈಜವಾದ ಒಪ್ಪಿಗೆ. ಜೊತೆಯಾಗಿ ವಾಸಿಸಬೇಕೆಂಬ ತೀವ್ರ ವಾಂಛೆ, ಪೂರ್ವಾರ್ಜಿತವಾದುದನ್ನು ಭಿನ್ನೈಸದೆ ಉಳಿಸಿಕೊಳ್ಳಬೇಕೆಂಬ ಇಚ್ಛೆ. ಎರಡೂ ಅಗತ್ಯ. ಭೂತಕಾಲದಲ್ಲಿ ಸಮಾನ ವೈಭವ ಮತ್ತು ವರ್ತಮಾನದಲ್ಲಿ ಸಮಾನ ಇಚ್ಛಾಶಕ್ತಿ: ಒಟ್ಟಾಗಿ ಹಿಂದೇನೋ ಸಾಧಿಸಿದ್ದೆವು ಎಂಬ ಅಭಿಮಾನ ಮತ್ತು ಈಗ ಒಟ್ಟಾಗಿ ಮತ್ತೇನನ್ನೋ ಸಾಧಿಸುತ್ತೇವೆ ಎಂಬ ಭರವಸೆ, ಇವು ರಾಷ್ಟ್ರೀಯ ಲಕ್ಷಣವನ್ನು ಪ್ರಭಾವಿಸುತ್ತವೆ. ಪ್ರಾಚೀನ ಗ್ರೀಸ್‌ನಲ್ಲಿ ಸ್ಪಾರ್ಟಾ ನಗರ ಪ್ರಭುತ್ವವು ಒಂದು ನುಡಿಯನ್ನು ಹಾಡುತ್ತಿತ್ತು: 'ನೀವೇನಾಗಿದ್ದಿರೋ ನಾವಿಂದು ಅದಾಗಿದ್ದೇವೆ ಮತ್ತು ಇಂದು ನೀವೇನಾಗಿದ್ದೀರೋ ಮುಂದೆ ನಾವು ಅದಾಗುತ್ತೇವೆ'.

ಹಿಂದು ಮತ್ತು ಮುಸಲ್ಮಾನರ ನಡುವೆ ಇಂತಹ ಸಮಾನ ಚಾರಿತ್ರಿಕ ಅಂಶಗಳು, ಹೆಮ್ಮೆ, ಖೇದ ಇತ್ಯಾದಿ ಗಳಿವೆಯೇ? ಇದನ್ನು ಪರಿಶೀಲಿಸಿದರೆ ನಿರಂತರ ಸಂಘರ್ಷವು ಎದ್ದುಕಾಣುತ್ತದೆ. ಭಾಯಿ ಪರಮಾನಂದ ಬರೆದಿದ್ದ 'ಹಿಂದು ರಾಷ್ಟ್ರೀಯ ಚಳುವಳಿ' ಎಂಬ ಹೊತ್ತಿಗೆಯಲ್ಲಿ ಅದನ್ನು ವಿಸ್ತಾರವಾಗಿ ಚರ್ಚಿಸಲಾಗಿತ್ತು. ರಾಮಾಯಣ, ಮಹಾಭಾರತ, ಗೀತೆ ಒಂದು ಕಡೆ ಯಾದರೆ ಕುರ್ ಆನ್ ಮತ್ತು ಹದೀಸ್ ಇನ್ನೊಂದು ಕಡೆ ಎನ್ನುವಂತಾಗಿದೆ. ಅಕಸ್ಮಾತ್ತಾಗಿ ಮತ್ತು ಮೇಲ್ಮೈಯಲ್ಲಿ ಇರುವುದನ್ನು ಅಗತ್ಯವಾಗಿ ಮತ್ತು ಮೂಲಭೂತವಾಗಿ ಇವೆಯೆಂಬಂತೆ ಕಲ್ಪಿಸಿಕೊಳ್ಳಬಾರದು. ರಾಜಕೀಯ ಮತ್ತು ಮತಧರ್ಮೀಯ ವಿರೋಧಗಳು ಹಿಂದು ಮತ್ತು ಮುಸಲ್ಮಾನರನ್ನು ಪ್ರತ್ಯೇಕಿಸಿ ಸಮಾನ ಅಂಶಗಳನ್ನು ಗೌಣವನ್ನಾಗಿಸಿ ಬಿಟ್ಟಿವೆ. ಭೂತಕಾಲದ ಸಂಗತಿಗಳನ್ನು ಎರಡು ಬಣಗಳೂ ಮರೆಯು ವಂತಿದ್ದರೆ ಭವಿಷ್ಯವು ಬೇರೆಯೇ ಅಗಲು ಸಾಧ್ಯವಿದೆ. ಆದರೆ ಭೂತಕಾಲವನ್ನು ಮರೆಯಲು ಮತ್ತು ಅಳಿಸಿ ಹಾಕಲು ಎರಡು ಬಣಗಳಿಗೂ ಸಾಧ್ಯವಿಲ್ಲ; ಅದು ಮುಂದೆಯೂ ಸಾಧ್ಯವಾಗದೇನೋ! ಇಬ್ಬರಿಗೂ ಭೂತಕಾಲವು ಮತಧರ್ಮದಲ್ಲಿ ಕೇಂದ್ರೀಕೃತವಾಗಿದೆ; ಆದ್ದರಿಂದ, ಭೂತಕಾಲದಿಂದ ಹೊರಗೆ ಬರುವುದೆಂದರೆ ಮತಧರ್ಮಗಳನ್ನು ತ್ಯಜಿಸಬೇಕು. ಅದು ಆಗದ ಮಾತು. ಸಮಾನ ಚಾರಿತ್ರಿಕ ಹಿನ್ನೆಲೆ ಇಲ್ಲದಿರುವಾಗ ಇಬ್ಬರಿಗೂ ಒಂದೇ ರಾಷ್ಟ್ರೀಯತೆ ಆಗುವುದು ಕಠಿಣ.

ಮುಸಲ್ಮಾನರು ತಮ್ಮದೇ ರಾಷ್ಟ್ರದ ಮಾತನ್ನಾಡು ತ್ತಿರುವುದು ಸಮಯಸಾಧಕತನ ಎನಿಸಬಹುದು, ಅದು ಅವರ ನಾಯಕರ ಕುತಂತ್ರ ಎಂದು ಆಪಾದಿಸ ಬಹುದು. ಆಪಾದನೆಯೆಂಬ ನಿಟ್ಟಿನಲ್ಲಿ ಅದು ನಿಜ ಹೌದು. ಈಚೆಗಷ್ಟೆ ಅವರು ಅಂತಹ ಮಾತನ್ನಾಡು ತ್ತಿದ್ದಾರೆ... ಆಪಾದನೆಯು ವ್ಯಕ್ತಿಯ ಹುನ್ನಾರವನ್ನು ಬಯಲು ಮಾಡುತ್ತದೆ, ಆದರೆ ಅದು ವಾಸ್ತವವನ್ನು ನಿರಾಕರಿಸುವುದಿಲ್ಲ. ಕೇವಲ 'ಮತಸ್ಥ ಸಮುದಾಯ' ವಾಗಿದ್ದವರು ಈಗ ರಾಷ್ಟ್ರದ ಸಿದ್ಧಾಂತ ಮಂಡಿಸು ತ್ತಿದ್ದಾರೆ, ನಿಜ. ಈವರೆಗೆ ರಾಷ್ಟ್ರೀಯತೆಯ ಮಾತು ಬಂದಿಲ್ಲದಿದ್ದುದು ಇನ್ನು ಮುಂದೆ ಬರಬಾರದೆಂದೇನೂ ಇಲ್ಲ. ಟಾಯ್ನ್‌ಬಿ ಹೇಳುವಂತೆ ಸುಪ್ತವಾಗಿದ್ದ ಭಾವನೆಗಳು ಎಂದು ಬೇಕಾದರೂ ಹೊರಗೆ ಬರಲು ಸಾಧ್ಯ. ಶತಮಾನಗಳ ಕಾಲ ಅದರ ಪ್ರತಿಫಲನವಾಗ ದಿದ್ದುದು ಬೇರೊಂದು ಸನ್ನಿವೇಶದಲ್ಲಿ ಹೊರ ಹೊಮ್ಮಿದರೆ ಅಚ್ಚರಿಯೇನಿಲ್ಲ.

ರಾಷ್ಟ್ರೀಯತೆಯ ಭಾವನೆ ಇದ್ದಾಗಲೂ ಅದು ಪ್ರತ್ಯೇಕ ರಾಷ್ಟ್ರದ ಅಸ್ತಿತ್ವಕ್ಕೆ ಕಾರಣವಾಗಲೇ ಬೇಕೆಂದೇನೂ ಇಲ್ಲ. ಕೆನಡಾದ ಫ್ರೆಂಚರು ಮತ್ತು ದಕ್ಷಿಣ ಆಫ್ರಿಕಾದ ಇಂಗ್ಲಿಷರು ಇದಕ್ಕೆ ಉದಾಹರಣೆ. ಅಲ್ಲಿ ರಾಷ್ಟ್ರೀಯತೆಯ ಪ್ರಜ್ಞೆ ಇದೆ. ಆದರೆ ಪ್ರತ್ಯೇಕ ರಾಷ್ಟ್ರದ ಮಾತು ಬಂದಿಲ್ಲ. ಅಷ್ಟರ ಮಟ್ಟಿಗೆ ಅದು ಗಾಢ ರಾಷ್ಟ್ರೀಯತೆಯಾಗಿ ಪ್ರಕಟಗೊಂಡಿಲ್ಲ ಎನ್ನಬಹುದು. ಇದನ್ನು ಆಧರಿಸಿ ಹೇಳುವುದಾದರೆ, ಮುಸಲ್ಮಾನರಲ್ಲಿ ರಾಷ್ಟ್ರಪ್ರಜ್ಞೆಯೊಂದು ಮೂಡಿದ್ದರೂ ಪ್ರತ್ಯೇಕ ರಾಷ್ಟ್ರೀಯ ಅಸ್ತಿತ್ವವನ್ನು ಹೊಂದಬೇಕೆನ್ನುವ ಇಚ್ಛೆ ಅಸಂಗತವಾಗುತ್ತದೆ. ಕೆನಡಾ ಮತ್ತು ದಕ್ಷಿಣ ಆಫ್ರಿಕಾದಲ್ಲಿ ಫ್ರೆಂಚರು ಮತ್ತು ಇಂಗ್ಲಿಷರು ಒಪ್ಪಿಗೆಯಿಂದ ಇರುವಂತೆ ಮುಸಲ್ಮಾನರು ಇಂಡಿಯಾದಲ್ಲಿ ಇರಲು ಸಾಧ್ಯ. ಅದು ಒಳ್ಳೆಯ ತೀರ್ಮಾನವಾಗಿರುತ್ತದೆ. ದೇಶದ ವಿಭಜನೆ ಬೇಡವೆಂದು ಮುಸಲ್ಮಾನರ ಮನಸ್ಸನ್ನು ಒಲಿಸಬೇಕು, ಅಷ್ಟೆ. ವಿಭಜನೆಯು ಅನಿವಾರ್ಯವಲ್ಲವೆಂದು ಅವರಿಗೆ ಮನಗಾಣಿಸಬೇಕು.

ಮನವೊಲಿಸುವುದು ಎಂಬುದನ್ನು ರಾಷ್ಟ್ರೀಯ ಸಿದ್ಧಾಂತವನ್ನು ತಿರಸ್ಕರಿಸುವುದು ಎಂಬರ್ಥದಲ್ಲಿ ತೆಗೆದುಕೊಳ್ಳಬಾರದು. ರಾಷ್ಟ್ರಪ್ರಜ್ಞೆ ಮತ್ತು ರಾಷ್ಟ್ರೀಯತೆ ಎರಡೂ ಬೇರೆ ಬೇರೆ. ಮನೋವೃತ್ತಿಯ ದೃಷ್ಟಿಯಿಂದ ಅವು ಪ್ರತ್ಯೇಕ. ರಾಷ್ಟ್ರಪ್ರಜ್ಞೆಯೆಂದರೆ ಒಂದು ನಿರ್ದಿಷ್ಟ ಪ್ರಜ್ಞೆ, ಬಾಂಧವ್ಯದ ಅಸ್ತಿತ್ವದ ಸ್ವೀಕಾರ; ರಾಷ್ಟ್ರೀಯತೆ ಯೆಂದರೆ ಬಾಂಧವ್ಯವಿರುವವರ ಪ್ರತ್ಯೇಕ ರಾಷ್ಟ್ರೀಯ ಅಸ್ತಿತ್ವ. ರಾಷ್ಟ್ರಪ್ರಜ್ಞೆ ಇಲ್ಲದೆ ರಾಷ್ಟ್ರೀಯತೆಯು ಇರಲಾರದು ಎಂಬುದು ಭಾಗಶಃ ಮಾತ್ರ ನಿಜ; ರಾಷ್ಟ್ರಪ್ರಜ್ಞೆ ಇರುವಲ್ಲೆಲ್ಲಾ ರಾಷ್ಟ್ರೀಯತೆ ಇರಲೇ ಬೇಕೆಂಬುದು ಸಹ ಸಾರ್ವತ್ರಿಕ ನಿಯಮವಲ್ಲ. 'ನಾವೊಂದು ರಾಷ್ಟ್ರವಾಗಿ ಹೊಮ್ಮಬೇಕು' ಎಂಬ ಉತ್ಕಟೇಚ್ಛೆಯು ರಾಷ್ಟ್ರೀಯತೆಗೆ ಕುಮ್ಮಕ್ಕು ನೀಡುತ್ತದೆ. ಎರಡನೆಯದಾಗಿ, ರಾಷ್ಟ್ರೀಯತೆಯು ಒಂದು ಪ್ರದೇಶದ ಹಿನ್ನೆಲೆಯಲ್ಲಿ ಪ್ರಾಯೋಗಿಕ ಅಸ್ತಿತ್ವವನ್ನು ಪಡೆಯುತ್ತದೆ. ಅದು ಸಾಂಸ್ಕೃತಿಕ ಪ್ರದೇಶವೂ ಹೌದು. ಅಂತಹ ಭೌಗೋಳಿಕ ಪ್ರದೇಶವಿಲ್ಲದೆ ರಾಷ್ಟ್ರೀಯತೆಯು ವ್ಯಕ್ತವಾಗುವುದಿಲ್ಲ. ಲಾರ್ಡ್ ಆಕ್ಟನ್ ಹೇಳುವಂತೆ, ರಾಷ್ಟ್ರೀಯತೆಯ ಅನುಭವ ಮತ್ತು ಅಭಿವ್ಯಕ್ತಿಗೆ ನಿರ್ದಿಷ್ಟ ಭೌಗೋಳಿಕ ಪ್ರದೇಶವೊಂದು ಇಲ್ಲದಿದ್ದರೆ "ಆತ್ಮದ ಇರುವಿಕೆಗೆ ಶರೀರವೊಂದನ್ನು ಅರಸುತ್ತಾ ಹೋದಂತಾಗುತ್ತದೆ; ಶರೀರವು ದೊರೆತಾಗ ಮತ್ತೊಮ್ಮೆ ಜೀವನ ಆರಂಭವಾಗುತ್ತದೆ, ದೊರೆಯ ದಿದ್ದರೆ ಅಂತಿಮವಾಗಿ ಗತಿಸಿಹೋಗುತ್ತದೆ."

ಅನುವಾದ : **ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್,
೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಆಧುನಿಕ ಕನ್ನಡ ಕಾವ್ಯದಲ್ಲಿ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಯ ಸ್ವರೂಪ – ಕೆಲವು ಗ್ರಹಿಕೆಗಳು

**ಹೊಸತು-೨೦**

**ವಿಶೇಷ ಲೇಖನ**

**ಡಾ|| ಎಂ. ಡಿ. ಒಕ್ಕುಂದ**

ತತ್ವಪದಕಾರರೇ ಆಧುನಿಕ ಕನ್ನಡ ಕಾವ್ಯದ ಆರಂಭಕಾರರಾಗಿದ್ದು ಭಾರತದ ಅನುಭಾವ ಪರಂಪರೆ ಹಾಗೂ ಸೂಫಿ ಪರಂಪರೆಗಳ ಸಂಕರಿತ ಧರ್ಮನಿರಪೇಕ್ಷ ಸಿದ್ಧಾಂತವನ್ನು ತತ್ವಪದಗಳಲ್ಲಿ ಪ್ರತಿಪಾದಿಸಿದ್ದಾರೆ. ಮತ, ಭಾಷೆ, ಜಾತಿ, ಪಂಥ, ಲಿಂಗಗಳ ನಿರಾಕರಣೆಯ ತತ್ವಪದಗಳು ಶಿಷ್ಟ ಧರ್ಮಗಳನ್ನು ತಿರಸ್ಕರಿಸುತ್ತದೆ. ಹೀಗಾಗಿ ಆಧುನಿಕ ಕನ್ನಡ ಸಾಹಿತ್ಯ ಉದಯವಾಗಿರುವುದು ಅನುಭಾವಿಕ ನೆಲೆಯಿಂದ, ಜಾತ್ಯತೀತ ತತ್ವವನ್ನು ಪ್ರತಿಪಾದಿಸುವ ಒತ್ತಾಸೆಯಲ್ಲಿ. ಇವರು ತೋರಿದ ಈ ಜಾತ್ಯತೀತ ಪ್ರತಿಕ್ರಿಯೆ ಕನ್ನಡ ಕಾವ್ಯದುದ್ದಕ್ಕೂ ಮರಳಿ ಮರಳಿ ಸ್ಮೃತಿಕೋಶವಾಗಿ ನೆನಪಾಗುತ್ತದೆ. ಕೋಮುಗಲಭೆಗಳು ಸಂಭವಿಸಿದಾಗ, ಮತೀಯ ಹಿಂಸೆ ವಿಜೃಂಭಿಸುವಾಗ, ಹಿಂದೂ–ಮುಸ್ಲಿಂ ಸಂಬಂಧದಲ್ಲಿ ಸಂಶಯಗಳು ಹೆಚ್ಚಾಗುವಂಥ ರಾಜಕೀಯ ಸಂದರ್ಭಗಳು ಎದುರಾದಾಗ, ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಯುದ್ಧಗಳು ನಡೆಯುವಾಗ.... ಕನ್ನಡ ಕವಿಗಳು ತತ್ವಪದಕಾರರನ್ನು, ಅನುಭಾವಿಗಳನ್ನು, ಸೂಫಿಗಳನ್ನೂ ನೆನೆಸಿ ಕವಿತೆಗಳನ್ನು ಬರೆದಿದ್ದಾರೆ. ಸಮಕಾಲೀನ ಜಗತ್ತಿನಲ್ಲಿಯ ಧಾರ್ಮಿಕ ಹಿಂಸೆಗೆ ಪರಿಹಾರವನ್ನು ಅನುಭಾವ ಪರಂಪರೆಯಲ್ಲಿ ಹುಡುಕುವ ಜಿಜ್ಞಾಸೆಯನ್ನು ಕನ್ನಡ ಕಾವ್ಯವು ಪ್ರದರ್ಶಿಸುತ್ತ ಬಂದಿದೆ. ಧರ್ಮ ಧರ್ಮಗಳ ನಡುವೆ ಸಾಮರಸ್ಯವನ್ನು ಪ್ರತಿಪಾದಿಸುವ ತತ್ವಕ್ಕಿಂತ ಧರ್ಮಗಳ ಇರುವಿಕೆಯನ್ನೂ ಅವುಗಳ ಜಡ ಆಚಾರ ನಂಬಿಕೆಗಳ ಲೋಕವನ್ನೂ ತಿರಸ್ಕರಿಸುವ ಅನುಭಾವ ಪರಂಪರೆ ಮತ್ತೆ ಮತ್ತೆ ಪುನರುಕ್ತಗೊಳ್ಳುತ್ತದೆ. ಈ ಅನುಭಾವ ಪರಂಪರೆಯನ್ನು ಸ್ಮರಿಸುವ ಆಧುನಿಕ ಕವಿಗಳು ಆಧ್ಯಾತ್ಮಿಕ ಹಂಬಲವುಳ್ಳವರು, ಎಡಪಂಥೀಯರು, ಉದಾರವಾದಿಗಳು, ಸಾಂಸ್ಕೃತಿಕ ಅನುಸಂಧಾನವಾದಿಗಳು, ಮಹಿಳೆಯರು ಹೀಗೆ ಬಹುಮುಖಿಯಾಗಿದ್ದು ತಂತಮ್ಮ ನಿಲುವುಗಳ ಪ್ರತಿಪಾದನೆಗೆ ಅನುಭಾವ ಪರಂಪರೆಯಿಂದ ಸಮರ್ಥನೆ ಪಡೆಯುತ್ತಾರೆ. ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳನ್ನು ಕುರಿತಾಗಿ ಒಂದು ಕಾಲಘಟ್ಟದ ಕವಿಗಳಲ್ಲಿ ಕೆಲವೊಮ್ಮೆ ಒಬ್ಬ ಕವಿಯ ಕವಿತೆಗಳಲ್ಲಿ ವೈರುಧ್ಯಗಳು ಪ್ರಕಟಗೊಂಡಿವೆ. ಇದಕ್ಕೆ ಗ್ರಹಿಕೆಯಲ್ಲಿಯ ತಾತ್ವಿಕ ಅಸ್ಪಷ್ಟತೆ, ಕಾಲಘಟ್ಟದ ಒತ್ತಡ, ತಪ್ಪು ಮಾಹಿತಿಗಳ ಸ್ವೀಕಾರ, ತನ್ನ ಜಾತಿ, ವರ್ಗ ಹಾಗೂ ಲಿಂಗೀಯ ಒತ್ತಾಸೆಗಳಿಗೆ ಮಾತ್ರ ಸ್ಪಂದಿಸಬೇಕಾದ ಅನಿವಾರ್ಯತೆಗಳು ಕಾರಣವಾದಂತಿವೆ. ಮಾನವತಾವಾದಿ ಕವಿಗಳು ಧಾರ್ಮಿಕ ಹಿಂಸೆಗೆ ತೀವ್ರವಾಗಿ ಸ್ಪಂದಿಸಿದ್ದರೂ ಅದನ್ನು ಹುಟ್ಟುಹಾಕುವ ಶಕ್ತಿಗಳ ಬಗ್ಗೆ ಅಭಿಮಾನದ ಕವಿತೆಗಳನ್ನು ಬರೆಯಬಲ್ಲರು. ಶೂದ್ರಪ್ರಜ್ಞೆಯ ಕವಿಗಳು ಮತೀಯ ರಾಷ್ಟ್ರೀಯವಾದಿ ಚಿಂತನೆಗಳನ್ನು ಪ್ರತಿಪಾದಿಸಬಲ್ಲರು. ಮಹಿಳೆಯರು, ಪುರುಷ ಚಿಂತನೆಗಳನ್ನು ಅಭಿವ್ಯಕ್ತಿಸುತ್ತಾರೆ.

ಆಧುನಿಕ ಕನ್ನಡ ಕಾವ್ಯ ಬಹುಪಾಲು ಕೋಮುವಾದ ಹಾಗೂ ಧಾರ್ಮಿಕ ಹಿಂಸೆಯನ್ನು ವಿರೋಧಿಸುತ್ತದೆ. ಸೌಹಾರ್ದತೆ, ಧಾರ್ಮಿಕತೆ ಹಾಗೂ ಧರ್ಮ ನಿರಪೇಕ್ಷತೆಗಳನ್ನು ಪ್ರತಿಪಾದಿಸುತ್ತದೆ. ಆರಂಭದಿಂದಲೇ ತತ್ವಪದಕಾರರಿಂದ ಧರ್ಮನಿರಪೇಕ್ಷತೆ ಪ್ರತಿಪಾದನೆಗೊಂಡಿತು. ನವೋದಯ ಕವಿಗಳಲ್ಲಿ ಬಹುಪಾಲು ಕವಿಗಳು ಉದಾರವಾದಿ ಮಾನವತಾವಾದಿ ನೆಲೆ, ದೈನಂದಿನ ಬದುಕಿನ ಅನುಸಂಧಾನದ ನೆಲೆ ಹಾಗೂ ನಿರ್ಮತೀಯ ರಾಷ್ಟ್ರೀಯವಾದಿ ನೆಲೆಗಳಿಂದ, ನವ್ಯ ಕವಿಗಳು ಸರ್ವಾಧಿಕಾರ ವಿರೋಧಿ ನೆಲೆ ಹಾಗೂ ವ್ಯಕ್ತಿ ಸ್ವಾತಂತ್ರ್ಯದ ನೆಲೆಗಳಿಂದ ಧಾರ್ಮಿಕ ಸೌಹಾರ್ದತೆಯನ್ನು ಪ್ರತಿಪಾದಿಸಿದರು. ದಲಿತ ಬಂಡಾಯ ಕಾವ್ಯದಲ್ಲಿ ಎಡಪಂಥೀಯ ಹಾಗೂ ಸಮಾಜವಾದಿ ನೆಲೆಯಿಂದ ಧಾರ್ಮಿಕ ಹಿಂಸೆಯ ವಿರೋಧ ಹಾಗೂ ಸೌಹಾರ್ದತೆಯ ಪ್ರತಿಪಾದನೆಗೊಂಡಿದೆ. ಶೂದ್ರ, ದಲಿತ ಹಾಗೂ ಸ್ತ್ರೀ ಸಮುದಾಯದ ಪ್ರಾತಿನಿಧ್ಯದ ಪ್ರಶ್ನೆ ದಲಿತ ಬಂಡಾಯ ಕಾವ್ಯದ ಮುಖ್ಯ ಸಂವೇದನೆಯಾಗಿ ಕೋಮುವಾದ ವಿರೋಧಿ ಹೋರಾಟದಲ್ಲಿ ಅಲ್ಪಸಂಖ್ಯಾತ ಸಮುದಾಯದ ಸಂಗಾತಿಯಾಯಿತು. ನವವಸಾಹತುಶಾಹಿ ಕಾಲದಲ್ಲಿ ಎಲ್ಲ ನೆಲೆಗಳಿಂದಲೂ ಕವಿಗಳು ಧಾರ್ಮಿಕ ಹಿಂಸೆಯನ್ನು ವಿರೋಧಿಸುವ ಕಾವ್ಯವನ್ನು ಸೃಷ್ಟಿಸಿದರು.

---

ಮನುಷ್ಯ ಸಮುದಾಯಗಳ ಚರಿತ್ರೆ ಎಂದರೆ ಹಿಂಸೆ-ಅಹಿಂಸೆ ಅಥವಾ ಹಿಂಸೆ-ಸೌಹಾರ್ದತೆಗಳ ನಡುವಿನ ಸಂಘರ್ಷದ ಕಥನವಾಗಿದೆ. ತನ್ನ ಅಗತ್ಯಕ್ಕಿಂತ ಹೆಚ್ಚಿನದನ್ನು ಮನುಷ್ಯರು ಬಯಸತೊಡಗಿದ ದಿನ ಮಾನವಲೋಕಗಳಲ್ಲಿ ಹಿಂಸೆ ಹುಟ್ಟಿತು. ಜಗತ್ತಿನ ದುಃಖದ ಮೂಲ ಇಂಥ ದುರಾಸೆಯಲ್ಲಿದೆ ಎಂದು ಹೇಳಿದ್ದ ಬುದ್ಧ ಅದರ ವಿರುದ್ಧ ಸಮರ ಸಾರಿದ್ದ. ವರ್ಗಸಮಾಜದ ಹುಟ್ಟಿನಿಂದ ಸಾಮ್ರಾಜ್ಯಶಾಹಿ ಸಮಾಜದ ಬೆಳವಣಿಗೆಯವರೆಗೆ ಹಿಂಸೆಯು ನಾನಾರೂಪಗಳಲ್ಲಿ ವಿಜೃಂಭಿಸಿದೆ. ಅದರ ರೌದ್ರಾವತಾರಗಳಿಗೆ ಪ್ರತಿ ಹಿಂಸೆ, ಅಹಿಂಸೆ ಮತ್ತು ಸೌಹಾರ್ದತೆಗಳು ಎದುರಾಗಿ, ದಕ್ಕಿಸಿಕೊಂಡು, ಅರಗಿಸಿಕೊಂಡು ನಿರಂತರವಾಗಿ ನೋವಿನ ಗರ್ಭದಲ್ಲಿಯೇ ಜೀವನ ಪ್ರೀತಿಯ ಕೂಸನ್ನು ಜೋಪಾನವಾಗಿ ಕಾಪಿಟ್ಟುಕೊಂಡು ಬಂದಿವೆ. ಧರ್ಮ, ವರ್ಣಾಶ್ರಮ ಧರ್ಮ, ಜನಾಂಗವಾದ, ವರ್ಣಭೇದ ನೀತಿ, ಕೋಮುವಾದಗಳೆಲ್ಲ ಮನುಷ್ಯ ವರ್ಗಗಳ ದುರಾಸೆಯ ಉತ್ಪನ್ನಗಳು. ಹಿಂಸೆ ಎನ್ನುವದು ಒಂದು ದೊಡ್ಡ ರಾಜಕಾರಣ, ಪ್ರತಿಹಿಂಸೆ, ಅಹಿಂಸೆ ಎನ್ನುವದೂ ಒಂದು ದೊಡ್ಡ ರಾಜಕಾರಣ.

ಬಾಬರಿ ಮಸೀದಿ ನಾಶ ಹಾಗೂ ಗುಜರಾತ್ ನರಮೇಧದ ಸಂದರ್ಭದಲ್ಲಿ ಕನ್ನಡದ ಉದಾರವಾದಿ ಮಾನವತಾವಾದಿ ಕವಿಗಳಿಂದ ಹಿಡಿದು, ಎಡಪಂಥೀಯ, ದಲಿತ, ಮಹಿಳಾ ನೆಲೆಗಳಿಂದಲೂ ಹಿಂಸೆಯನ್ನು ವಿರೋಧಿಸಿ ದೊಡ್ಡಪ್ರಮಾಣದ ಕಾವ್ಯ ಸೃಷ್ಟಿಯಾಯಿತು.

ಕನ್ನಡ ಕಾವ್ಯದ ಬಹುಪಾಲು ಮತೀಯ ಸಾಮರಸ್ಯದ ಪರವಾಗಿದ್ದರೂ ಕೋಮುವಾದ ಹಾಗೂ ಧಾರ್ಮಿಕ ಹಿಂಸೆಯ ಪರವಾದ ಸಣ್ಣದನಿಯೊಂದು ನವೋದಯ ದಿಂದಲೇ ಜಾಗೃತವಾಗಿದೆ ಎನ್ನುವುದು ಕೂಡ ಸತ್ಯ. ಅದರಲ್ಲಿ ಎರಡು ಮಾದರಿಗಳಿವೆ. ಮೊದಲನೆಯದು, ರಾಷ್ಟ್ರೀಯ ಚಳುವಳಿಯ ಉನ್ಮಾದ, ಹಾಗೂ ಪೂರ್ವಗ್ರಹಿಕೆಗಳ ಕಾರಣ ದಿಂದ ಕನ್ನಡ ಕವಿಗಳಲ್ಲಿ ಮತೀಯ ರಾಷ್ಟ್ರೀಯವಾದದ ಪ್ರತಿಪಾದನೆಯ ರೂಪದಲ್ಲಿ ವ್ಯಕ್ತವಾಗಿರುವದು. ಇದರಲ್ಲಿ ಕವಿಯ ಪಾಲಿಗಿಂತ ಕಾಲದ ಪಾಲೇ ಹೆಚ್ಚಾಗಿದ್ದು ಇದು ಕೋಮುವಾದದ ವ್ಯವಸ್ಥಿತ ಕಾರ್ಯಾಚರಣೆಯನ್ನು ಬೆಂಬಲಿಸು ವುದಿಲ್ಲ. ಆದರೆ ಹಿಂದೂ ಮುಸ್ಲಿಂ ಸಂಬಂಧದ ಮತೀಯ ವಿರಸ ಮತ್ತು ದ್ವೇಷವನ್ನು ಪ್ರಕಟಿಸುತ್ತದೆ. ಆದರೆ ಎರಡನೆಯದು ಅತ್ಯಂತ ಸ್ಪಷ್ಟವಾಗಿ ಭಾರತದ ಕೋಮುವಾದಿ ಸಾಂಸ್ಕೃತಿಕ ಸಂಘಟನೆ ಹಾಗೂ ರಾಜಕೀಯ ಪಕ್ಷಗಳ ಎಲ್ಲ ಹಿಂಸಾತ್ಮಕ ಪ್ರಣಾಳಿಕೆಯನ್ನು ಒಪ್ಪಿಕೊಂಡು ಅದನ್ನು ಪ್ರತಿಪಾದಿಸುತ್ತದೆ. ಮೊದಲನೆಯದು ನವೋದಯ ಕಾವ್ಯದಲ್ಲಿ ಕಂಡುಬಂದರೆ ಎರಡನೆಯ ಮಾದರಿ ನವ್ಯಕವಿಯೊಬ್ಬರ 80ರ ದಶಕದ ಬರಹಗಳಲ್ಲಿ ಪ್ರತಿಪಾದನೆಗೊಂಡಿದೆ.



ಕನ್ನಡ ಕಾವ್ಯದಲ್ಲಿ ಪ್ರಗತಿಪರತೆ ಹಾಗೂ ಪ್ರತಿಗಾಮಿತನಗಳನ್ನು ವರ್ಗ, ಜಾತಿ, ಲಿಂಗ ಅಸಮಾನತೆ ಮತ್ತು ಸಮಾನತೆಗಳನ್ನು ತಮ್ಮ ಕಾವ್ಯದ ಮುಖ್ಯ ಸಂವೇದನೆಯಾಗಿ ಸ್ವೀಕರಿಸುವ ಇಲ್ಲವೇ ಸ್ವೀಕರಿಸದೇ ಇರುವ ವಿಧಾನವನ್ನು ಆಧರಿಸಿ ಗುರುತಿಸಲಾಗುತ್ತಿದೆ. ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಯ ಪ್ರತಿಪಾದನೆಯ ಆಧಾರದ ಮೇಲೆ ನಿಕಷಕ್ಕೆ ಒಡ್ಡಿದರೆ ಕೆಲವು ಕವಿಗಳ ಸ್ಥಾನಗಳು ಪಲ್ಲಟಗೊಳ್ಳುತ್ತವೆ. ಅಂಥ ಕವಿಗಳ ಕಾವ್ಯವನ್ನು ಮತ್ತೊಮ್ಮೆ ಪುನರ್ ಮೌಲ್ಯೀಕರಣಕ್ಕೆ ಒಳಪಡಿಸಬೇಕಿದೆ. 80ರ ದಶಕದಲ್ಲಿ ಕೋಮುವಾದದ ಪ್ರಣಾಳಿಕೆಯನ್ನು ಪ್ರತಿಪಾದಿಸುವ ಕವಿಗಳ ಸಮಗ್ರ ಕಾವ್ಯವನ್ನು ಪುನರವಲೋಕನ ಮಾಡಿದರೆ ಅವರ ಕಾವ್ಯವನ್ನು ಕುರಿತಾಗಿ ಕನ್ನಡದಲ್ಲಿ ರೂಪಿತವಾದ ವಿಮರ್ಶೆಗಳನ್ನು ಮರುಪರಿಶೀಲಿಸಬೇಕಾಗುತ್ತದೆ.

ಆಧುನಿಕ ಕನ್ನಡ ಕಾವ್ಯದುದ್ದಕ್ಕೂ ಧಾರ್ಮಿಕ ಹಿಂಸೆಗೆ ಪರ್ಯಾಯವಾಗಿ ಧಾರ್ಮಿಕತೆಯನ್ನು ಪ್ರತಿಪಾದಿಸಲಾಗಿದೆ. ಧಾರ್ಮಿಕತೆ ಎನ್ನುವುದು ತನ್ನ ನಂಬಿಕೆಗಳ ಬಗೆಗಿನ ಅಚಲವಾದ ಶ್ರದ್ಧೆ, ಆರಾಧನೆಗಳನ್ನು ಒಳಗೊಂಡಿದ್ದು, ಅದು ಇನ್ನೊಂದು ಸಮುದಾಯದ ನಂಬಿಕೆ, ಶ್ರದ್ಧೆಗಳನ್ನು ತನ್ನಂತೆಯೇ ಎಂದು ಬಗೆಯುತ್ತದೆ. ಹಲವು ಮತಗಳ ಅನುಯಾಯಿಗಳು ಕೂಡಿ ಬಾಳುವ ಸಮಾಜದಲ್ಲಿ ಧಾರ್ಮಿಕ ಆಚರಣೆ, ಅನನ್ಯತೆಗಳನ್ನು ಗೌರವದಿಂದ ಕಾಣುವ ವಿವೇಕವನ್ನು ಈ ಧಾರ್ಮಿಕತೆ ಒಳಗೊಂಡಿದೆ. ಎಲ್ಲ ಮತ, ಧರ್ಮ, ಆಚರಣೆ ಹಾಗೂ ವೈಚಾರಿಕತೆಗಳಿಗಿಂತಲೂ ಬದುಕು ದೊಡ್ಡದು. ದೈನಂದಿನ ಬದುಕಿನಲ್ಲಿ ಜನ ಅನುಕೂಲಗಳಿಗೆ ತಕ್ಕಂತೆ ಪರಸ್ಪರಾವಲಂಬಿಗಳಾಗಿ ಬದುಕುತ್ತಾರೆ. ಅದು ಅವರ ಬದುಕಿನ ನಡಿಗೆಯ ಸಹಜ ಲಯ. ಇದರ ಮುಂದೆ ಎಲ್ಲ ಮತ ಪಂಥಗಳೂ ಕ್ಷುದ್ರವಾಗಿ ಕಾಣಿಸುತ್ತವೆ. ಕನ್ನಡ ಕಾವ್ಯವು ಜನಸಾಮಾನ್ಯರ ಸಾಮಾನ್ಯ ಬದುಕಿನಲ್ಲಿ ಸಹಜವಾಗಿ ತುಂಬಿ ತುಳುಕುತ್ತಿರುವ ಸೌಹಾರ್ದತೆಯ ಮಾದರಿಗಳನ್ನು ಎತ್ತಿ ಹಿಡಿಯಲು ಯತ್ನಿಸಿದೆ.

ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳಿಗೆ ಕನ್ನಡ ಕಾವ್ಯದ ಪ್ರತಿಕ್ರಿಯೆಗಳು ಅಭಿವ್ಯಕ್ತಿಯ ನೆಲೆಯಲ್ಲಿ ಘೋಷಣಾತ್ಮಕ ಹಾಗೂ ಸಂಕೀರ್ಣವೆಂಬ ಎರಡು ಮಾದರಿಗಳಲ್ಲಿವೆ. ಮೊದಲ ಮಾದರಿಯಲ್ಲಿ ಭಾವಾವೇಶ ಹಾಗೂ ಆದರ್ಶಗಳಿವೆ ಉತ್ತಮವಾದ ಕಾವ್ಯವಿಲ್ಲ. ಘೋಷಣೆಗಳು ಬಹಿರಂಗದ ಚೀರಾಟವಾದಾಗ ಕಸುವನ್ನು ಕಳೆದುಕೊಂಡಿವೆ. ಅಂತರಂಗದ ನೆಗೆತವಾದಾಗ ಕಾವ್ಯಾತ್ಮಕತೆಯನ್ನು ದಕ್ಕಿಸಿಕೊಂಡಿವೆ. ಎರಡನೆಯದು ಹಿಂಸೆ ಮತ್ತು ಸಾಮರಸ್ಯಗಳಿಗೆ ತೀವ್ರವಾಗಿ ತುಡಿಯುವ, ತನಗೆ ತಾನೇ ಒದ್ದಾಡುವ, ಕಂಗೆಟ್ಟು ತಾನೂ ಭಾಗಿ ಎಂದು ಭಾವಿಸುವ ಮಾದರಿ. ಇಲ್ಲಿ ಧ್ಯಾನಸ್ಥ ಚಿಂತನೆಗಳಿಂದ ಹಿಂಸೆಯನ್ನು ಮಾಡಿರುವವನಲ್ಲಿಯೂ ಆತ್ಮಶೋಧ ಹುಟ್ಟುವಂತೆ ಅಭಿವ್ಯಕ್ತಿ ಇರುತ್ತದೆ. ಈ ಎರಡೂ ಬಗೆಯ ಅಭಿವ್ಯಕ್ತಿ ಕ್ರಮಗಳಲ್ಲಿ ಸಾಮಾಜಿಕ ಜನಜಾಗೃತಿಯ ದೃಷ್ಟಿಯಿಂದ ಘೋಷಣಾತ್ಮಕ ಕಾವ್ಯವೂ, ಕಾವ್ಯ ಪರಂಪರೆಯ ಮುಂದುವರಿಕೆ ಹಾಗೂ ಕಾವ್ಯ ಸಂವೇದನೆಗಳನ್ನು ವಿಸ್ತರಿಸುವ ದೃಷ್ಟಿಯಿಂದ ಸಂಕೀರ್ಣ ಮಾದರಿಗಳು ಉಪಯುಕ್ತವಾಗಿವೆ. ಸಾಮಾಜಿಕ ಆಶಯಗಳನ್ನೊಳಗೊಂಡೂ ಸಾಮಾಜಿಕ ಸಂದರ್ಭದಲ್ಲಿ ಉಪಯುಕ್ತವಾಗದ ಕಾವ್ಯಕ್ಕೆ ಇರುವ ಘನತೆ, ಗೌರವಗಳು ಶ್ರೇಷ್ಠತೆಯ ತುಡಿತವನ್ನು ಒಳಗೊಂಡಿರುತ್ತವೆ. ಕಾವ್ಯರೂಪದ ಘನತೆ ಕಡಿಮೆ ಯಾದರೂ ಜನಮಾನಸದಲ್ಲಿ ಜಾಗೃತಿ ಉಂಟುಮಾಡುವ ಕಾವ್ಯಕ್ಕೆ ರಾಜಕೀಯ ಮಹತ್ವವಿದೆ. ಘೋಷಣಾತ್ಮಕ ಮಾದರಿಗಳೆಲ್ಲ ಕಾವ್ಯಾತ್ಮಕವಾಗಿ ಯಾವಾಗಲೂ ಸೊರಗಿರುತ್ತವೆ ಎಂದು ಹೇಳಲಾಗದು. ಹಾಗೆಯೇ ಸಂಕೀರ್ಣ ಮಾದರಿಗಳು ಯಾವಾಗಲೂ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳುತ್ತವೆ ಎಂದೂ ಹೇಳಲಾಗದು. ಈ ಎರಡೂ ಮಾದರಿಗಳನ್ನೂ ಮೇಳವಿಸಿದ ಮಾದರಿಯ ಕಾವ್ಯ ಕೂಡ ಸಾಕಷ್ಟು ಬಂದಿದೆ.

ಆಶಯಗಳಲ್ಲಿಯೇ ರಾಜಕೀಯ ಚಿಂತನೆಗಳನ್ನು ಪ್ರತಿಪಾದಿಸುವ ಕಾವ್ಯ ಒಂದು ಮಾದರಿಯಾದರೆ ಅಭಿವ್ಯಕ್ತಿ ಕ್ರಮದಲ್ಲಿಯೇ ರಾಜಕೀಯ ಚಿಂತನೆಗಳನ್ನು ಒಳಗೊಳ್ಳುವ ಕಾವ್ಯ ಮತ್ತೊಂದು ಬಗೆಯದು. ವಿಷಯಗಳ ಆಯ್ಕೆ, ರಾಜಕೀಯ ಪರಿಭಾಷೆಗಳನ್ನು ಕಾವ್ಯಸಂವೇದನೆಯಾಗಿ ಪರಿವರ್ತಿಸುವದು, ರಚನಾವಿನ್ಯಾಸ ಸಾಲುಗಳ ಸಂಯೋಜನೆ ಮೊದಲಾದ ಅಭಿವ್ಯಕ್ತಿಯ ವಿವಿಧ ನೆಲೆಗಳಲ್ಲಿ ಕವಿ ತನ್ನ ರಾಜಕೀಯ ನಿಲುವುಗಳನ್ನು ಪ್ರತಿಪಾದಿಸಲು ಸಾಧ್ಯವಿದೆ. ಕನ್ನಡದಲ್ಲಿ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳಿಗೆ ಸಂಬಂಧಿಸಿದಂತೆ ಅಭಿವ್ಯಕ್ತಿಯನ್ನೇ ರಾಜಕೀಯ ಚಿಂತನೆಯ ಅಸ್ತ್ರವನ್ನಾಗಿ ರೂಪಿಸುವ ಸೃಜನಶೀಲ ಪ್ರಕ್ರಿಯೆ ನಡೆದಿದೆ. ಇಲ್ಲಿ ಸಾಮಾನ್ಯವಾಗಿ ರಾಜಕೀಯ ಚಿಂತನೆಯೊಂದರ ಮೂಲಕ ಢಾಳಾಗಿ ವಿಷಯ ಪ್ರವೇಶವಿರುವುದಿಲ್ಲ. ರಾಜಕೀಯ ಚಿಂತನೆ ಎಲ್ಲೋ ಕಂಡೂ ಕಾಣದಂತೆ ಅಭಿವ್ಯಕ್ತಿಯ ತಳಾತಳದಲ್ಲಿ ಸುಪ್ತವಾಗಿರುತ್ತದೆ. ಬದುಕನ್ನು ನೇರವಾಗಿ ಪ್ರವೇಶಿಸಿ ಅದರೊಂದಿಗಿನ ಗುದ್ದಾಟದಲ್ಲಿ ರೂಪತಾಳುವ ಸಂವೇದನೆಗಳು ರೂಪಿಸುವ ರಾಜಕೀಯ ವಿನ್ಯಾಸಗಳು ಶಕ್ತಿಶಾಲಿಯಾಗಿರುತ್ತವೆ.

ಯಾವುದೇ ಒಂದು ಚಿಂತನೆ ಸಾಹಿತ್ಯದಲ್ಲಿ ಮುನ್ನೆಲೆಗೆ ಬರುವ ಮೂಲಕ ಒಂದು ಭಾಷೆ ಹಾಗೂ ಅದರ ಕಾವ್ಯಭಾಷೆ ಹೊಸ ಅವತಾರವನ್ನು ತಾಳುತ್ತದೆ. ಉದಾರವಾದ, ಅಸ್ತಿತ್ವವಾದ, ಮಾರ್ಕ್ಸ್‌ವಾದ, ಅಂಬೇಡ್ಕರ್‌ವಾದ, ಸ್ತ್ರೀವಾದ, ಗಾಂಧಿವಾದಗಳು ಕನ್ನಡ ಕವಿಗಳನ್ನು ಪ್ರಭಾವಿಸಿದ ಮೇಲೆ ಕನ್ನಡ ಕಾವ್ಯದ ಭಾಷಿಕ, ಪಾರಿಭಾಷಿಕ, ಆಲಂಕಾರಿಕ ಸ್ವರೂಪದಲ್ಲಿ ಸಾಕಷ್ಟು ಹೊಸ ಸೇರ್ಪಡೆಗಳಾದವು. ಕೆಲವನ್ನು ಬಿಟ್ಟು ಕೊಡಲಾಯಿತು. ಧಾರ್ಮಿಕ ಹಿಂಸೆ ಮತ್ತು ಸೌಹಾರ್ದತೆಗಳು ಕಾವ್ಯದ ಕೇಂದ್ರಕ್ಕೆ ಬಂದ ಪರಿಣಾಮ ಕನ್ನಡದ ಕಾವ್ಯ ಭಾಷೆಗೆ ಹೊಸ ಪರಿಭಾಷೆಗಳು, ಶಬ್ದಕೋಶ, ಆಲಂಕಾರಿಕ ಆಯಾಮಗಳು ಲಭಿಸಿವೆ. ಕಮಲ, ತ್ರಿಶೂಲ, ಇಟ್ಟಿಗೆ, ಹಸಿರು, ಚಂದ್ರ, ಕೇಸರಿ ಮೊದಲಾದ ಪದಗಳು ಬೇರೆಯದೇ ಅರ್ಥವನ್ನು ಹೊಂದಿ 'ಡಿಸೆಂಬರ್ ಆರು', 'ಕೌಸರಬಾನುವಿನ ಗರ್ಭ' ಮುಂತಾದವು ಪುರಾಣ ಕಲ್ಪನೆಗಳಾಗಿ ರೂಪಗೊಂಡು ಕನ್ನಡ ಕಾವ್ಯ ಭಾಷೆಗೆ ಹೊಸತನದ ರಕ್ತದಾನ ಸಾಧ್ಯವಾಗಿದೆ.

ಅಲ್ಪಸಂಖ್ಯಾತ ಕವಿಗಳ ಕಾವ್ಯವು ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳ ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯನ್ನು ಸಾಧಿಸಿದೆ. ಉದಾರವಾದ, ಎಡವಾದ, ವ್ಯಕ್ತಿವಾದ, ನಿರೀಶ್ವರವಾದ, ಅಲ್ಪಸಂಖ್ಯಾತವಾದ, ಮಹಿಳಾವಾದ – ಹೀಗೆ ಅನೇಕ ಮಗ್ಗುಲಿನಿಂದ ಹರಿದು ಬರುವ ಅಲ್ಪಸಂಖ್ಯಾತ ಕಾವ್ಯ ಅಗ್ರೆಸ್ಸಿವ್ ಆಗುವುದಿಲ್ಲ. ಅಪಮಾನಿತಭಾವ, ತಳಮಳ, ಸಂಶಯಿತ ಸಂಕಟ, ಹಿಂಸೆಗೆ ತುತ್ತಾದ ತಬ್ಬಲಿತನ ಗಳಿಂದ ನರಳುತ್ತದೆ. ಕೋಮುವಾದದ ವಿರುದ್ಧ ಬಹುಸಂಖ್ಯಾತ ಸಂವೇದನೆ ಆಕ್ರೋಶಭರಿತವಾಗಿದ್ದರೆ, ಅಲ್ಪಸಂಖ್ಯಾತ ಸಂವೇದನೆಯು ಸಹನಶೀಲತೆಯನ್ನು ಪ್ರಕಟಿಸುತ್ತದೆ. ಆಕ್ರೋಶಕ್ಕೆ ಅವಕಾಶವೇ ಇಲ್ಲದ ಅಸಹಾಯಕ ಪರಿಸ್ಥಿತಿಯು ಇದಕ್ಕೆ ಕಾರಣವಾಗಿ ಹೆಚ್ಚು ರೂಪಕಾತ್ಮಕವಾಗಿದೆ. ಸ್ವಧರ್ಮದ ಮೂಲಭೂತವಾದಿಗಳ ವಿಷಯದಲ್ಲಿ ಅಲ್ಲಲ್ಲಿ ಆಕ್ರೋಶ ವ್ಯಕ್ತವಾಗುತ್ತದೆ. ಅಲ್ಪಸಂಖ್ಯಾತ ಕವಿಗಳಲ್ಲಿ ಕೂಡ

ಮತೀಯ ರಾಷ್ಟ್ರೀಯವಾದವನ್ನು ಪ್ರತಿಪಾದಿಸುವ ವೈರುಧ್ಯವನ್ನು ಗಮನಿಸಬಹುದು. ದೇಶನಿಷ್ಠೆಯನ್ನು ಪ್ರದರ್ಶಿಸಬೇಕಾದ ಒತ್ತಡದಲ್ಲಿ ಯುದ್ಧಕೋರ ರಾಷ್ಟ್ರೀಯತೆಯ ಪ್ರತಿಪಾದನೆಯನ್ನು ಕಾಣಬಹುದಾಗಿದೆ. ದಲಿತ ಬಂಡಾಯ ಕಾಲಘಟ್ಟದಲ್ಲಿ ಮುಸ್ಲಿಂ ಮೂಲಭೂತವಾದವನ್ನು ವಿರೋಧಿಸಿ ಸಮೃದ್ಧ ಬರವಣಿಗೆ ಬಂದಿತ್ತು. ಆದರೆ 90ರ ದಶಕದ ನಂತರ ಕೋಮುವಾದಿಗಳಿಗೆ ಅನುಕೂಲವಾಗಬಹುದೆಂದು ಆತಂಕದಲ್ಲಿ ಮುಸ್ಲಿಂ ಸಂವೇದನೆ ಆ ಕುರಿತು ಮೌನ ವಹಿಸಿದಂತಿದೆ.

ಕೋಮುಹಿಂಸೆಗೆ ದಲಿತ ಮತ್ತು ಮಹಿಳಾ ನೆಲೆಯಿಂದ ಪ್ರತಿರೋಧ ತುಸು ಕಡಿಮೆ. ಊಳಿಗಮಾನ್ಯ ಕಾಲದ ಉತ್ಪನ್ನಗಳಾದ ಪುರುಷವಾದ ಮತ್ತು ಜಾತೀವಾದಗಳು ನಿರಂತರವಾಗಿ ಆಧುನಿಕ ಭಾರತದ ಎಲ್ಲ ಚಾರಿತ್ರಿಕ ಪಲ್ಲಟಗಳ ಕಾಲದಲ್ಲಿಯೂ ಹೊಸ ಅವತಾರಗಳೊಂದಿಗೆ ದಲಿತ ಮತ್ತು ಮಹಿಳಾ ಸಮುದಾಯಗಳನ್ನು ಅಮಾನವೀಯ ವಾಗಿ ಹಿಂಸಿಸುತ್ತ ಬಂದಿವೆ. ನಿತ್ಯ ಬದುಕಿನ ಭಾಗವಾಗಿರುವ ಅಸ್ಪೃಶ್ಯತೆ ಹಾಗೂ ಸ್ತ್ರೀ ದೌರ್ಜನ್ಯಗಳ ಸ್ವ-ಹಿಂಸೆಯ ಅಭಿವ್ಯಕ್ತಿಯಲ್ಲಿಯೇ ಕ್ರಿಯಾಶೀಲವಾಗುವದು ಅನಿವಾರ್ಯ ವಾದಂತಿದೆ. ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ಘಟಿಸುವ ಕೋಮುಹಿಂಸೆಗಿಂತ ಅನುಕ್ಷಣದ ಹಿಂಸೆಗೆ ಪ್ರತಿಕ್ರಿಯಿಸಲೇಬೇಕಾದ ಅನಿವಾರ್ಯ ಒತ್ತಡವದು. ಹಿಂದೂ ಮುಸ್ಲಿಂ ಸೌಹಾರ್ದತೆಯ ಸಂಬಂಧದಲ್ಲಿ ವರ್ಗಾಧಾರಿತ ಅನುಸಂಧಾನಗಳಿಗಿಂತ, ವರ್ತಮಾನದ ತಲ್ಲಣದ ಕಾರಣದಿಂದ ಧರ್ಮಾಧಾರಿತವಾದ ಹೊಂದಾಣಿಕೆಯ ಸರಳೀಕೃತ ಮಾದರಿಗಳೇ ಚಲಾವಣೆಯಲ್ಲಿರುವದರಿಂದ ಅವು ಆತ್ಯಂತಿಕವಾಗಿ ಎರಡೂ ಧರ್ಮಗಳ ಮೇಲ್ವರ್ಗಗಳ ಹಿತಾಸಕ್ತಿಗಳನ್ನು ಕಾಪಾಡುವುದರಿಂದ ಈ ಎರಡೂ ಸಂವೇದನಾ ನೆಲೆಗಳು ಅಂತರ್ಧರ್ಮೀಯ ಹಿಂಸೆಗಿಂತ ಸ್ವಧರ್ಮೀಯ ಹಿಂಸೆಯ ವಿರುದ್ಧ ದನಿ ಎತ್ತುವಲ್ಲಿ ಕ್ರಿಯಾಶೀಲವಾಗಿವೆ. ಆದರೆ ಆರ್ಥಿಕ ಅಸಮಾನತೆಯನ್ನು ಪ್ರತಿಪಾದಿಸುವ ಕೋಮುವಾದದ ವೈಚಾರಿಕ ಚೌಕಟ್ಟುಗಳನ್ನು ಭಗ್ನಗೊಳಿಸುತ್ತ ಸಮಾನತೆಯ ಆಶಯಗಳನ್ನು ರೂಪಿಸುವಲ್ಲಿ ಮುಸ್ಲಿಂ, ದಲಿತ ಹಾಗೂ ಸ್ತ್ರೀ ಸಂವೇದನೆಗಳು ಒಂದುಗೂಡುತ್ತವೆ. ಮುಸ್ಲಿಮರನ್ನು ಕುರಿತಾದ ಶಂಕಿತತೆ, ದಲಿತರನ್ನು ಕುರಿತಾದ ಅಸ್ಪೃಶ್ಯತೆ ಹಾಗೂ ಸ್ತ್ರೀಯರನ್ನು ಕುರಿತಾದ ಲಿಂಗಭೇದ ನೀತಿಗಳನ್ನು ಕೋಮುವಾದದ ಸಾಮಾಜಿಕ ಆಯಾಮವು ಮುಂದುವರೆಸುವದರಿಂದ ಅವುಗಳನ್ನು ಕುರಿತಾದ ಪ್ರತಿರೋಧದಲ್ಲಿಯೂ ಏಕತೆ ಇದೆ. ಕೋಮು ಹಿಂಸೆಯ ಸಂದರ್ಭದಲ್ಲಿ ಹೆಣ್ಣಾಗಿರುವ ಕಾರಣಕ್ಕಾಗಿಯೇ ಅನುಭವಿಸಬೇಕಾದ ಹಿಂಸೆಯನ್ನು ಮಹಿಳಾ ಕಾವ್ಯ ತೆರೆದಿಟ್ಟಿದೆ.

ಭಾರತದ ಚರಿತ್ರೆಯುದ್ದಕ್ಕೂ ಧರ್ಮಗಳು ನಿರಂತರವಾಗಿ ಪುನರ್ ವ್ಯಾಖ್ಯಾನಕ್ಕೆ ಒಳಗಾಗುತ್ತಲೇ ಬಂದಿವೆ. ಧಾರ್ಮಿಕ ಪುನರುತ್ಥಾನವಾದ ಕೂಡ ಹೊಸ ಪಲ್ಲಟವನ್ನು ದಾಟುವ ಮೇಲ್‌ಜಾತಿಗಳ ಪುನರ್ ವ್ಯಾಖ್ಯಾನವೇ ಆಗಿದೆ. ದಲಿತ ಬಂಡಾಯ ಸಾಹಿತ್ಯದಲ್ಲಿ ಅಸಮಾನತೆಗಳ ಹಿನ್ನೆಲೆಯಲ್ಲಿ ಧರ್ಮದ ಪುನರ್ ವ್ಯಾಖ್ಯಾನ ನಡೆದಿತ್ತು. ಆದರೆ ಸದ್ಯ ಬರ್ಬರವಾದ ಕೋಮುಹಿಂಸೆಯ ಕಾರಣಕ್ಕೆ ಹಲವು ಬಗೆಯ ಪ್ರತಿಕ್ರಿಯೆಗಳು ಕಂಡುಬರುತ್ತವೆ. ಧರ್ಮವನ್ನೇ ನಿರಾಕರಿಸುವುದು, ಕೋಮುವಾದಿಗಳು ಪ್ರತಿಪಾದಿಸುವ ಧರ್ಮದ ಪರಿಕಲ್ಪನೆಯನ್ನು ತಿರಸ್ಕರಿಸುವುದು ಹಾಗೂ ಪರ್ಯಾಯ ಧರ್ಮದ ಪರಿಕಲ್ಪನೆಗಳನ್ನು ಮಂಡಿಸುವುದನ್ನು ಕಾಣಬಹುದು. ನವೋದಯ ಕಾಲಘಟ್ಟದಲ್ಲಿ ಪುನರುತ್ಥಾನವಾದಿ ಹಾಗೂ ಪರ್ಯಾಯದ ಹುಡುಕಾಟದ ಮಾದರಿಗಳ ಮಿಲನವಿದ್ದರೆ, ದಲಿತ ಬಂಡಾಯ ಕಾವ್ಯದಲ್ಲಿ ನಾಸ್ತಿಕವಾದಿ ಹಾಗೂ ಕೋಮುವಾದಿಗಳ ಧರ್ಮದ ಪರಿಕಲ್ಪನೆಗಳನ್ನು ನಿರಾಕರಿಸುವ ಮಾದರಿಗಳು ಹೆಚ್ಚು ಪ್ರಚಲಿತಗೊಂಡಿವೆ. ಆದರೆ ಬಂಡಾಯೋತ್ತರ ಕಾಲಘಟ್ಟದಲ್ಲಿ ಕೋಮು ಹಿಂಸೆ ವ್ಯಾಪಕವಾದ್ದರಿಂದ ಧರ್ಮವನ್ನು ಕುರಿತಾದ ಕೋಮುವಾದಿ ಪರಿಕಲ್ಪನೆಗಳನ್ನು ಧಿಕ್ಕರಿಸುವ ಆಕ್ರೋಶದ ಹಾಗೂ ಪರ್ಯಾಯ ಹುಡುಕಾಟಗಳ ಸಾಂಸ್ಕೃತಿಕ ಕೊಡು ಕೊಳೆಯ ಪರಂಪರೆಯ ಪುನರ್ ನಿರ್ಮಾಣದ ಮಾದರಿಗಳು ಸೃಷ್ಟಿಯಾದವು. ಈ ಪ್ರಕ್ರಿಯೆಯಲ್ಲಿ ಕನ್ನಡ ಕಾವ್ಯ ಕೇವಲ ಭಾರತಕ್ಕೆ ಸೀಮಿತಗೊಳ್ಳದೇ ಜಾಗತಿಕ ಮಟ್ಟದ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳ ಪರಂಪರೆಯೊಂದಿಗೆ ಸಂಬಂಧವನ್ನು ಸ್ಥಾಪಿಸುತ್ತ ವಿಶ್ವಾತ್ಮಕತೆ ಹಾಗೂ ದೇಶೀಯತೆಗಳನ್ನು ಮುಖಾಮುಖಿಯಾಗಿಸಿದೆ. ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳ ಸಂಬಂಧದಲ್ಲಿ ಎಡಪಂಥ, ಸಮಾಜವಾದ, ಶೂದ್ರವಾದ, ದಲಿತವಾದ ಹಾಗೂ ಮಹಿಳಾವಾದಗಳ ದೃಷ್ಟಿಯಲ್ಲಿಯೂ ಧರ್ಮದ ಪುನರ್ ವ್ಯಾಖ್ಯಾನ ನಡೆದಿದೆ.

ಬಂಡಾಯೋತ್ತರ ಕಾಲಘಟ್ಟದಲ್ಲಿ ಕೋಮುವಾದಿ ಪರಿಕಲ್ಪನೆಗಳನ್ನೂ, ಹಿಂಸೆಯ ಮಾದರಿಗಳನ್ನೂ ಬಚ್ಚಿಟ್ಟು ವಿರೋಧಿಸುವ ಕ್ರಮವನ್ನು ಹೆಚ್ಚು ಬಳಸಲಾಗುತ್ತಿದೆ. ನೇರ ಚಿತ್ರಗಳನ್ನು ಬಿಟ್ಟು ನಿಗೂಢವೂ ಸಾಂಕೇತಿಕವೂ ಆದ ಪ್ರತಿಮೆಗಳಲ್ಲಿ ಉಸಿರಾಡು ತ್ತಿದ್ದಾರೆ. ಬಂಡಾಯ ಕಾಲದ ಮುಕ್ತ ಪ್ರತಿಭಟನೆ ಹಿಂಜರಿದು ಆಳದಲ್ಲಿ ಹೆಪ್ಪುಗಟ್ಟುವ ವಿಧಾನ ಕಂಡುಬರುತ್ತದೆ. ಅಭಿವ್ಯಕ್ತಿ ಕ್ರಮ ಹಾಗೂ ಭಾಷಾ ಬಳಕೆಯಲ್ಲಿ ಗಮನಾರ್ಹ ಬದಲಾವಣೆಗಳಾಗಿವೆ. ಜಾಗತೀಕರಣದ ಕಾಲಘಟ್ಟದಲ್ಲಿ ಕೋಮುಹಿಂಸೆ ಸಾಮಾಜಿಕವಾಗಿ ತನ್ನ ಆಕ್ರಮಣಶೀಲತೆ ಹಾಗೂ ಬರ್ಬರತೆಗಳಿಂದ ಒಂದು ಭಯಗ್ರಸ್ತ ಸ್ಥಿತಿಯನ್ನು ಹುಟ್ಟುಹಾಕಿರುವ ಹಾಗೂ ಸಮುದಾಯದ ಕೋಮುವಾದೀ ಕರಣದಿಂದ ಸೌಹಾರ್ದತೆಯ ಸಾಮಾಜಿಕ ವಿವೇಕ ಕಡಿಮೆಯಾಗುತ್ತ ಸಮುದಾಯಗಳೇ ಆತಂಕಕ್ಕೀಡಾಗಿರುವ ಹಾಗೂ ಬಲಪಂಥೀಯ ಪ್ರಭುತ್ವ ಕರ್ನಾಟಕದಲ್ಲಿ ಅಧಿಕಾರ ಹಿಡಿದಿರುವ ಸನ್ನಿವೇಶದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಆತಂಕಕ್ಕೀಡಾಗಿ ಕಾವ್ಯದ ರಾಚನಿಕ ಸ್ವರೂಪದಲ್ಲಿ ಬದಲಾವಣೆ ಸಂಭವಿಸಿದಂತಿದೆ.

ಜಾಗತೀಕರಣದ ಕಾಲಘಟ್ಟದಲ್ಲಿ ರಾಮಾಯಣದ ಕೋಮುವಾದಿ ಆವೃತ್ತಿ ಕೋಮು ಹಿಂಸೆಯ ಪ್ರೇರಣೆಗೆ ಮಾಧ್ಯಮವಾಯಿತು. 80ರ ದಶಕದಲ್ಲಿಯೇ ಮಿಲಿಟೆಂಟ್ ರಾಮನನ್ನು ದೃಶ್ಯಮಾಧ್ಯಮಗಳ ಮೂಲಕ ಪ್ರತಿಷ್ಠಾಪಿಸುವ ಸಾಂಸ್ಕೃತಿಕ ರಾಜಕಾರಣ ಆರಂಭವಾಗಿತ್ತು. ಕೋಮುವಾದ ಯಾವ ಪುರಾಣಗಳನ್ನು ರೂಪಕವಾಗಿ ಬಳಸಿ ಕೋಮುಹಿಂಸೆಗೆ ಪ್ರಚೋದನೆ ನೀಡುತ್ತಿದೆಯೋ ಅದೇ ಪುರಾಣ ರೂಪಕಗಳನ್ನು ಕನ್ನಡ ಕಾವ್ಯ ಪ್ರತಿರೋಧಕ್ಕೂ ಬಳಸಿಕೊಂಡಿದೆ. ಕನಕ, ಕುವೆಂಪು, ಎಚ್. ವಿ. ಸಾವಿತ್ರಮ್ಮ ಮೊದಲಾದವರು ಭಿನ್ನ ನೆಲೆಯಿಂದ ರಾಮಾಯಣದ ರೂಪಕ ಗಳನ್ನು ಮುರಿದುಕಟ್ಟಿದ್ದರು. ಕೋಮುಹಿಂಸೆಯ ಸಂದರ್ಭದಲ್ಲಿ ಬಳಕೆಯಾದ ರಾಮಾಯಣದ ಹಾಗೂ ಇತರ ಪುರಾಣ ರೂಪಕಗಳನ್ನು ಬಳಸಿಯೇ ಅವುಗಳನ್ನು ಪ್ರತಿರೋಧಿಸುವ ಮತ್ತು ನಿರಾಕರಿಸುವ ವಿಧಾನವು ಕಂಡುಬರುತ್ತಿದೆ. ದಲಿತ ಮತ್ತು ಜಾನಪದ ರಾಮಾಯಣಗಳ ಸಂಪಾದನೆ ಕೂಡ ಇದರ ಭಾಗವಾಗಿಯೇ ನಡೆದಿದೆ. ಕೋಮುವಾದ ಒಂದು ಸಾರಲಾದ ಯುದ್ಧವಾಗಿರುವದರಿಂದ ಅದು ಯುದ್ಧದ ಪರಿಭಾಷೆಗಳನ್ನೇ ರೂಪಕಗಳಾಗಿ, ಸಂಕೇತಗಳಾಗಿ ಬಳಸಿಕೊಳ್ಳುತ್ತದೆ. ಆಯುಧ, ರಕ್ತಪಾತ, ಕ್ರೌರ್ಯ, ದಹನ, ಚಿತ್ರಹಿಂಸೆ, ಹಿಂಸಾರತಿಗಳು ವಿಜೃಂಭಿಸುತ್ತವೆ. ಕೋಮು ವಾದದ ಯುದ್ಧ ಪರಿಭಾಷೆ ಹಾಗೂ ಸಂಕೇತ ಪ್ರತಿಮೆಗಳನ್ನು ಅಪಮೌಲ್ಯೀಕರಿಸುವ ಕ್ರಮ ಆಧುನಿಕ ಕನ್ನಡ ಕಾವ್ಯದಲ್ಲಿ ಕಂಡುಬರುತ್ತದೆ. ವಿಡಂಬನೆ, ವಿಷಾದ, ಆಕ್ರೋಶ ಮುಂತಾದ ನೆಲೆಗಳಿಂದ ಈ ಪರಿಭಾಷೆಗಳನ್ನು ಅಪಮೌಲ್ಯೀಕರಿಸಲಾಗಿದೆ.

ಓರಿಯಂಟಲ್ ಚರಿತ್ರೆಯು ಭಾರತದಲ್ಲಿ ಸೃಷ್ಟಿಸಿದ ಕೋಮುವಾದಿ ಸಂಕಥನಗಳು ಪ್ರಾದೇಶಿಕ ಭಾಷೆಯಲ್ಲಿ ಅನುವಾದಗೊಂಡು ಭಾರತದ ಪ್ರಾದೇಶಿಕ ಸಾಹಿತ್ಯದಲ್ಲಿ ವಿಜೃಂಭಿಸಿದವು. ಮಾರ್ಕ್ಸ್‌ವಾದಿ ಚರಿತ್ರೆ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಈ ಸಂಕಥನಗಳನ್ನು ಚಾರಿತ್ರಿಕ ಆಕರಗಳೊಂದಿಗೆ ಚರಿತ್ರೆಯ ವೈಭವೀಕರಣ ಹಾಗೂ ವಿಕೃತೀಕರಣಗಳನ್ನು ಭಗ್ನಗೊಳಿಸಿ ವಾಸ್ತವದ ಚರಿತ್ರೆಯನ್ನು ಸೃಷ್ಟಿಸಿತು. ಈ ಹೊಸ ಚರಿತ್ರೆಯು ಭಾರತದ ಪ್ರಾದೇಶಿಕ ಭಾಷಾ ಸೃಜನಶೀಲತೆಯ ಮೇಲೆ ಪ್ರಭಾವ ಮಾಡಿತು. ಆದರೆ ಎಡಪಂಥೀಯ ಚರಿತ್ರೆಯ ಸ್ಪರ್ಶವಿರದ ಕಾಲದಲ್ಲಿ ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿಯೇ ಕನ್ನಡ ಸೃಜನಶೀಲತೆಯು ಕಾವ್ಯ ಸಂವೇದನೆಯ ಭಾಗವಾಗಿಯೇ ಚರಿತ್ರೆಯ ವೈಭವೀಕರಣ ಹಾಗೂ ವಿಕೃತೀಕರಣಗಳನ್ನು ನಿರಾಕರಿಸಿ ಸೌಹಾರ್ದತೆಯನ್ನು ಪ್ರತಿಪಾದಿಸಿರುವದು ಅತ್ಯಂತ ಮಹತ್ವದ ಸಂಗತಿಯಾಗಿದೆ.

90ರ ದಶಕದ ನಂತರದ ಕಾಲವನ್ನು ಚಳುವಳಿಗಳಿಲ್ಲದ ಕಾಲವೆಂದು ಗುರುತಿಸ ಲಾಗುತ್ತಿದೆ. 70-80ರ ದಶಕದ ಎಲ್ಲ ಚಳುವಳಿಗಳೂ ತಮ್ಮ ವೈಭವದ ದಿನಗಳನ್ನು ಮುಗಿಸಿ ಸ್ತಬ್ಧತೆಯನ್ನೂ, ಛಿದ್ರೀಕರಣವನ್ನೂ ಅನುಭವಿಸಿದವು. ಜಾಗತೀಕರಣ ಮತ್ತು ಕೋಮುವಾದಗಳೆಂಬ ಸಯಾಮಿ ಅವಳಿ 90ರ ದಶಕದ ನಂತರ ಭಾರತೀಯ ಸಮಾಜವನ್ನು ಹಲವಾರು ಸ್ಥಿತ್ಯಂತರ ಹಾಗೂ ಸಮಸ್ಯೆಗಳಿಗೀಡುಮಾಡಿದೆ. ಕಳೆದ ಎರಡೂ ಎರಡೂವರೆ ದಶಕಗಳಲ್ಲಿ ಕರ್ನಾಟಕದ ಎಡಪಂಥೀಯರು, ಸಮಾಜವಾದಿ ಗಳು, ದಲಿತರು, ರೈತರು, ಮಹಿಳೆಯರು ಮತ್ತೊಮ್ಮೆ ಒಂದಾಗಿದ್ದು ಕೋಮುವಾದ ವಿರೋಧಿ ಸಾಂಸ್ಕೃತಿಕ ಹೋರಾಟದ ವೇದಿಕೆಗಳಲ್ಲಿ. ಸೂಕ್ಷ್ಮ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳ ನಡುವೆಯೂ ಈ ಐಕ್ಯತೆ ಸಾಧ್ಯವಾಯಿತು. ಜಾಗತೀಕರಣದ ಪರಿಣಾಮದಿಂದ ಈ ಬೇರೆ ಬೇರೆ ವಲಯದ ಸ್ತಬ್ಧ ಚಳುವಳಿಗಳು ಮರು ಸಂಘಟನೆ ಗೊಳ್ಳುತ್ತ ಕೋಮುವಾದ ವಿರೋಧಿ ವಿಶಾಲ ವೇದಿಕೆಯಲ್ಲಿ ಐಕ್ಯತೆಯನ್ನು ಪ್ರಕಟಿಸಿದವು. ಇದೇ ಸಂದರ್ಭದಲ್ಲಿ ಈ ಎಲ್ಲ ಮನೋಧರ್ಮಗಳಿಂದಲೂ ಕೋಮುವಾದವನ್ನು

ವಿರೋಧಿಸಿ ಸೌಹಾರ್ದತೆಯನ್ನು ಪ್ರತಿಪಾದಿಸಿ ಕನ್ನಡದಲ್ಲಿ ದೊಡ್ಡ ಪ್ರಮಾಣದ ಕಾವ್ಯ ಸೃಷ್ಟಿಯಾಗುತ್ತಿದೆ. ಸಮಕಾಲೀನ ಸಂದರ್ಭದ ಕನ್ನಡ ಕಾವ್ಯದ ಕೇಂದ್ರ ಕಾಳಜಿ ಕೋಮುವಾದದ ವಿರೋಧ. ಹೀಗಾಗಿ ಕಳೆದ ಕಾಲು ಶತಮಾನದ ಕಾಲವನ್ನು ಸ್ಥೂಲವಾಗಿ "ಕೋಮುವಾದ ಹಾಗೂ ಜಾಗತೀಕರಣ ವಿರೋಧಿ ಚಳುವಳಿಯ ಕಾಲ"ವೆಂದು ಗುರುತಿಸಬಹುದಾಗಿದೆ.

ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳನ್ನು ಅಭಿವ್ಯಕ್ತಿಸುವಾಗ ಆಧುನಿಕ ಕನ್ನಡ ಕಾವ್ಯವು ವಾಗಾಡಂಬರದ ಹಾಗೂ ಪಿಸುಮಾತಿನ ಅಭಿವ್ಯಕ್ತಿ ವಿಧಾನ ಗಳೆರಡನ್ನೂ ಅನುಸರಿಸಿದೆ. ಪ್ರಕ್ಷುಬ್ಧ ಪರಿಸ್ಥಿತಿ, ಬರೆಯಲು ಆಯ್ಕೆ ಮಾಡಿಕೊಂಡ ವಿಷಯ, ಕವಿಯ ಪ್ರವೃತ್ತಿಗಳ ಕಾರಣದಿಂದ ವಾಗಾಡಂಬರದ ಅಭಿವ್ಯಕ್ತಿಗಳು ಹುಟ್ಟಿವೆ. ರಾಜಕೀಯ ತಾತ್ವಿಕತೆಯ ಪ್ರತಿಪಾದನೆಯಲ್ಲಿ ಶತ್ರು ವಿಡಂಬನೆಯಲ್ಲಿ ಅವುಗಳನ್ನು ಕಾಣಬಹುದು. ಆದರೆ ಕೋಮುವಾದದ ಪರಿಣಾಮ ಕೇಂದ್ರಿತ ನಿರೂಪಣೆಯಲ್ಲಿ, ದುರಂತಗಳ ಅಸಹಾಯಕ ಚಿತ್ರಣಗಳಲ್ಲಿ, ಬಹಿರಂಗವಾಗಿ ವಿರೋಧಿಸಲಾಗದ ಫಾಸಿಗೊಂಡ ದುರ್ಬಲ ಮನಸ್ಥಿತಿಗಳಲ್ಲಿ ಅಭಿವ್ಯಕ್ತಿಯು ಪಿಸುಮಾತಿನ ಹಾದಿಯನ್ನು ತುಳಿದಿದೆ. ಒಬ್ಬ ಕವಿ ಎರಡೂ ವಿಧಾನಗಳನ್ನು ಅನುಸರಿಸಿರುವುದೂ ಉಂಟು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ತೌಲನಿಕವಾಗಿ ಗಮನಿಸಿದರೆ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳ ಅಭಿವ್ಯಕ್ತಿಗೆ ಸೃಜನಶೀಲ ಪ್ರಕಾರಗಳಲ್ಲಿ ಕತೆ, ಕಾದಂಬರಿ, ನಾಟಕ ಇತ್ಯಾದಿಗಳಿಗಿಂತ ಕಾವ್ಯವು ಹೆಚ್ಚು ಸ್ಪೇಸ್ ನೀಡಿದೆ. ವೈಚಾರಿಕ ಬರಹಗಳ ನಂತರದ ಸ್ಥಾನದಲ್ಲಿ ಕಾವ್ಯವಿದೆ. ಕಾವ್ಯದ ರೂಪಕ್ಕೂ ಈ ವಸ್ತುವಿಗೂ ಇರುವ ಆಂತರಿಕ ಸಂಬಂಧವೇ ಇದಕ್ಕೆ ಕಾರಣವಾಗಿದೆ. ದುಗುಡ, ಶೋಕ, ಸಂಕೀರ್ಣತೆ, ತವಕ ತಲ್ಲಣಗಳನ್ನು ಸರಳವಾಗಿ ನಿರ್ಣಯಕ್ಕೆ ಬಾರದ ಮಗ್ಗಲುಗಳನ್ನು, ಸೂಕ್ಷ್ಮಾತಿಸೂಕ್ಷ್ಮ ಭಾವಲೋಕವನ್ನು ಅಭಿವ್ಯಕ್ತಿಸಲು ಕಾವ್ಯವು ಸಮರ್ಥ ಮಾಧ್ಯಮವಾಗಿರುವುದು ಇದಕ್ಕೆ ಕಾರಣವಾದಂತಿದೆ.

ಬದ್ಧತೆಯು ತನ್ನಷ್ಟಕ್ಕೆ ತಾನೇ ಕಾವ್ಯದ ಕಲಾತ್ಮಕ ಅಭಿವ್ಯಕ್ತಿಗೆ ಗುಣವಾಗಲೀ ದೋಷವಾಗಲೀ ಅಲ್ಲ. ಬದ್ಧತೆಯನ್ನು ಗುಣವೆಂದೂ, ದೋಷವೆಂದೂ ಪರಿಗಣಿಸುವ ವಿಧಾನದಲ್ಲಿಯೇ ದೋಷಗಳಿವೆ. ಕವಿಯು ಅದನ್ನು ನಿರ್ವಹಿಸುವ ಕ್ರಮವನ್ನಾಧರಿಸಿ ಬದ್ಧತೆ ಗುಣವೋ ದೋಷವೋ ಆಗುತ್ತದೆ. ಬದ್ಧತೆಯನ್ನು ಕಾವ್ಯವಾಗಿಸುವುದು ಕವಿಯ ಪಾಲಿಗೆ ದೊಡ್ಡ ಆಹ್ವಾನ. ರಾಜಕೀಯ ದೃಷ್ಟಿಕೋನ ಇಲ್ಲವೇ ತಾತ್ವಿಕತೆಯನ್ನು ಅಂತರಂಗೀಕರಿಸಿಕೊಂಡು ಕಾವ್ಯ ಸಂವೇದನೆಯಾಗಿ ಮಾರ್ಪಡಿಸದ ಕಾರಣದಿಂದ ಬದ್ಧತೆಯ ಕಾವ್ಯ ಸೋಲುವ ಸಾಧ್ಯತೆ ಹೆಚ್ಚಿರುತ್ತದೆ. ಆದರೆ ಆಧುನಿಕ ಕನ್ನಡ ಕಾವ್ಯವು ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಗಳನ್ನು ನಿರ್ವಹಿಸುವಾಗ ದಲಿತ ಬಂಡಾಯ ಸಂದರ್ಭಕ್ಕೆ ಹೋಲಿಸಿದರೆ ಬದ್ಧತೆಯನ್ನು ಕಾವ್ಯವಾಗಿಸುವಲ್ಲಿ ದೊಡ್ಡ ಪ್ರಮಾಣದಲ್ಲಿ ಗೆಲುವನ್ನು ಸಾಧಿಸಿದೆ. ಕಳೆದ ಕಾಲು ಶತಮಾನದ ಕನ್ನಡ ಕಾವ್ಯದ ಕೇಂದ್ರ ಕೋಮುವಾದವೇ ಆಗಿದೆ. ಬಂಡಾಯ ದಲಿತ ಚಳುವಳಿಯ ಸಂದರ್ಭದಲ್ಲಿ ವರ್ಗ, ಜಾತಿ, ಲಿಂಗ, ಅಸಮಾನತೆಗಳು ಮುಖ್ಯವಾಗಿದ್ದಂತೆ ನಂತರದಲ್ಲಿ ಕೋಮುವಾದದ ಪ್ರತಿರೋಧ ಮುಖ್ಯವಾಗಿದೆ. ಚಳುವಳಿಗಳ ತೀವ್ರತೆ ಕಡಿಮೆಯಾಗಿ ಸ್ವವಿಮರ್ಶೆ, ತಾತ್ವಿಕ ಸ್ಪಷ್ಟತೆಗಳಲ್ಲಿ ತೊಡಗಿಕೊಂಡ ಈ ಕಾಲದಲ್ಲಿ ಕಾವ್ಯವೇ ಚಳುವಳಿಯಾಗುವ ಲಕ್ಷಣಗಳನ್ನು ಪ್ರಕಟಿಸಿದೆ. ಹೊಸ ಆರ್ಥಿಕ ವ್ಯವಸ್ಥೆಯಲ್ಲಿ ಹಿಂದಿನ ಅಸಮಾನತೆ ಗಳನ್ನು ಮುಂದುವರೆಸಿಕೊಂಡು ಹೋಗಲು ಕೋಮುವಾದ ಒಂದು ಸಾಧನವಾಗಿರುವ ಎಚ್ಚರವನ್ನು ಕನ್ನಡದ ಕಾವ್ಯ ಸಂವೇದನೆ ಪ್ರಕಟಿಸಿದೆ. ಉದಾರವಾದಿಗಳು, ಎಡವಾದಿಗಳು, ಸ್ತ್ರೀವಾದಿಗಳು, ದಲಿತರು, ಹಿರಿಯರು, ಹೊಸ ತಲೆಮಾರು ಹೀಗೆ ಕೋಮುವಾದವನ್ನು ಕುರಿತು ಪ್ರತಿಕ್ರಿಯಿಸುವವರು ಕಾಲಮಾನದ ಒತ್ತಡವೆಂಬಂತೆ ಕವಿತೆಗಳಲ್ಲಿ ಅಭಿವ್ಯಕ್ತಿ ನೀಡಿದ್ದಾರೆ. ಇದೇ ವೇಳೆಯಲ್ಲಿ ಸಮಕಾಲೀನ ಹಿಂಸಾಕಾಂಡಕ್ಕೆ ಬೆನ್ನು ತಿರುಗಿಸಿ ನಿಂತ ಕಾವ್ಯ ಮಾದರಿಯೂ ಇದೆ. ಬದ್ಧತೆಯನ್ನು ಅಪಮೌಲ್ಯವಾಗಿ ನೋಡುವ ಈ ನಿಲುವು ಬಂಡವಾಳವಾದದ ಅವಕಾಶವಾದಿತನದಿಂದ ಪ್ರಭಾವಿತ ವಾದಂತೆ ತೋರುತ್ತದೆ. ಇದು ಕೋಮಲ ಸೂಕ್ಷ್ಮ ಆದ ಕಾವ್ಯ ರಾಜಕೀಯ ವಿಷಯಗಳ ಪ್ರತಿಪಾದನೆ ತಕ್ಕುದಲ್ಲವೆಂದು ಪ್ರತಿಪಾದಿಸುತ್ತದೆ. ಇಂಥ ಮೌನ ಮನಸ್ಥಿತಿಗಳು ನಿರ್ಣಾಯಕ ಗಳಿಗೆಯಲ್ಲಿ ಪ್ರಭುತ್ವದ ಪರವಾಗಿರುತ್ತವೆ. ಒಂದು ಫ್ಯಾಸಿಸ್ಟ್ ಸಮಾಜವು ಸೃಷ್ಟಿಯಾಗುತ್ತಿರುವ ಸಂದರ್ಭದಲ್ಲಿ, ಮಹಾತಲ್ಲಣವನ್ನೆದುರಿಸುತ್ತಿರುವ ಹೊಸ ತಲೆಮಾರಿನ ಕವಿಗಳಲ್ಲಿ ಈ ಮೌನ ಗೊಂದಲವನ್ನು ಹುಟ್ಟಿಸುತ್ತದೆ. ಚರಿತ್ರೆಯು ಒಂದು ಅನುಭವವನ್ನು ಘಟನೀಕರಿಸಿದರೆ ಕಾವ್ಯವು ಅದನ್ನು ಅದರೆಲ್ಲ ತವಕ ತಲ್ಲಣ ತೀವ್ರತೆಗಳೊಂದಿಗೆ ಕಟ್ಟಿಕೊಡುತ್ತದೆ. ಕಾವ್ಯವು ಮನುಷ್ಯರ ಬದುಕಿನ ನೋವು ನಲಿವಿನ ಅನುಭವ ಹಾಗೂ ಸಂವೇದನೆಯ ನಿಜವಾದ ಚರಿತ್ರೆಯಾಗಿದೆ. ಉದಾಹರಣೆಗೆ ಭಾರತದಲ್ಲಿ ನಡೆದ ಕೋಮುಗಲಭೆಗಳ ಚರಿತ್ರೆಗಿಂತಲೂ ಅವುಗಳನ್ನು ಕುರಿತಾದ ಕಾವ್ಯ ಅವುಗಳ ಕಾರಣ ಮತ್ತು ಪರಿಣಾಮಗಳನ್ನು ಹೆಚ್ಚು ಸಮರ್ಥವಾಗಿ ಕಟ್ಟಿಕೊಡುತ್ತದೆ. ಆಧುನಿಕ ಕನ್ನಡ ಕವಿಗಳು ಧಾರ್ಮಿಕ – ಹಿಂಸೆ ಹಾಗೂ ಸೌಹಾರ್ದತೆಯನ್ನು ಅಭಿವ್ಯಕ್ತಿಸುವಾಗ ಸಿದ್ಧ ಭಾಷೆಯಲ್ಲಿ ವ್ಯವಹರಿಸಬೇಕಾದ ಒತ್ತಡದಲ್ಲಿ ಭಾಷಿಕ ತೊಡಕುಗಳನ್ನು ಎದುರಿಸಿದ್ದಾರೆ. ವ್ಯವಸ್ಥೆಯು ಕೆಳಜಾತಿ, ಕೆಳವರ್ಗಗಳನ್ನು ಕುರಿತಾಗಿ ರೂಪಿಸಿದ ಅವಮಾನದ ಭಾಷಿಕ ರೂಪ ನುಡಿಗಟ್ಟುಗಳನ್ನು ಅಲ್ಲಲ್ಲಿ ಬಳಸಲಾಗಿದೆ. ದಲಿತ ವಿರೋಧಿ ಸ್ತ್ರೀ ವಿರೋಧಿ ಪರಿಭಾಷೆಗಳು ಅಪ್ರಜ್ಞಾಪೂರ್ವಕವಾಗಿ ಕಾವ್ಯದಲ್ಲಿ ಮೈದಾಳಿವೆ.

ಮನುಷ್ಯ ಸಮುದಾಯಗಳ ಚರಿತ್ರೆ ಎಂದರೆ ಹಿಂಸೆ–ಅಹಿಂಸೆ ಅಥವಾ ಹಿಂಸೆ–ಸೌಹಾರ್ದತೆಗಳ ನಡುವಿನ ಸಂಘರ್ಷದ ಕಥನವಾಗಿದೆ. ತನ್ನ ಅಗತ್ಯಕ್ಕಿಂತ ಹೆಚ್ಚಿನದನ್ನು ಬಯಸತೊಡಗಿದ ದಿನ ಮಾನವಲೋಕಗಳಲ್ಲಿ ಹಿಂಸೆ ಹುಟ್ಟಿತು. ಜಗತ್ತಿನ ದುಃಖದ ಮೂಲ ಇಂಥ ದುರಾಸೆಯಲ್ಲಿದೆ ಎಂದು ಹೇಳಿದ್ದ ಬುದ್ಧ ಅದರ ವಿರುದ್ಧ ಸಮರ ಸಾರಿದ್ದ. ವರ್ಗಸಮಾಜದ ಹುಟ್ಟಿನಿಂದ ಸಾಮ್ರಾಜ್ಯಶಾಹಿ ಸಮಾಜದ ಬೆಳವಣಿಗೆಯವರೆಗೆ ಹಿಂಸೆಯು ನಾನಾರೂಪಗಳಲ್ಲಿ ವಿಜೃಂಭಿಸಿದೆ. ಅದರ ರೌದ್ರಾವತಾರಗಳಿಗೆ ಪ್ರತಿ ಹಿಂಸೆ, ಅಹಿಂಸೆ ಮತ್ತು ಸೌಹಾರ್ದತೆಗಳು ಎದುರಾಗಿ, ದಕ್ಕಿಸಿಕೊಂಡು, ಅರಗಿಸಿಕೊಂಡು ನಿರಂತರವಾಗಿ ನೋವಿನ ಗರ್ಭದಲ್ಲಿಯೇ ಜೀವನ ಪ್ರೀತಿಯ ಕೂಸನ್ನು ಜೋಪಾನವಾಗಿ ಕಾಪಿಟ್ಟುಕೊಂಡು ಬಂದಿವೆ. ಧರ್ಮ, ವರ್ಣಾಶ್ರಮ ಧರ್ಮ, ಜನಾಂಗವಾದ, ವರ್ಣಭೇದ ನೀತಿ, ಕೋಮುವಾದಗಳೆಲ್ಲ ಮನುಷ್ಯ ವರ್ಗಗಳ ದುರಾಸೆಯ ಉತ್ಪನ್ನಗಳು. ಹಿಂಸೆ ಎನ್ನುವದು ಒಂದು ದೊಡ್ಡ ರಾಜಕಾರಣ, ಪ್ರತಿಹಿಂಸೆ, ಅಹಿಂಸೆ ಎನ್ನುವದೂ ಒಂದು ದೊಡ್ಡ ರಾಜಕಾರಣ.

*ಒಂದು ನದಿಯ ದಿಕ್ಕು ಬದಲಿಸೋದು*
*ಒಂದು ಹಣ್ಣಿನ ಗಿಡ ಕಸಿ ಮಾಡೋದು*
*ಮನುಷ್ಯನ್ನ ವಿದ್ಯಾವಂತ ಮಾಡೋದು*
*ರಾಜ್ಯ ವ್ಯವಸ್ಥೆಯನ್ನು ಬದಲಾಯಿಸೋದು*
*ಇವೆಲ್ಲ ಅರ್ಥಪೂರ್ಣ ಕ್ರಿಟಿಕಲ್ ಧೋರಣೆಯ*
*ಉದಾಹರಣೆಗಳಷ್ಟೇ ಅಲ್ಲ*
*ಕಲಾತ್ಮಕ ಕ್ರಿಯೆ ಕೂಡ*

ಎನ್ನುತ್ತಾನೆ ಬ್ರೆಕ್ಟ್, ಬದುಕಿನ ಹಿಂಸಾತ್ಮಕ ಚಲನೆಯ ದಿಕ್ಕನ್ನು ಬದಲಿಸುವ, ಹಿಂಸೆಯ ಚಾಲಕ ಶಕ್ತಿಯಾಗಿರುವ ರಾಜ್ಯ ವ್ಯವಸ್ಥೆಯನ್ನು ಪರಿವರ್ತಿಸುವ, ಪ್ರಳಯದ ಭೂಮಿಯಲ್ಲಿ ಹಣ್ಣಿನ ಗಿಡವನ್ನು ಕಸಿ ಮಾಡುವ ಜ್ಞಾನಮುಖಿ ಚಟುವಟಿಕೆಗಳೆಲ್ಲ ಕಲಾತ್ಮಕ ಕ್ರಿಯೆಗಳೇ. ಮಾನವೀಯತೆಗಾಗಿ ಬದುಕನ್ನು ಮುರಿದು ಕಟ್ಟುವ ಶಕ್ತಿಯೇ ಕಲೆ. ಸಾವಿರಾರು ವರುಷಗಳಿಂದ ಸಮಾಜದ ವಾಹಿನಿಯಲ್ಲಿ ಸ್ಮೃತಿಸಂಚಯವಾಗಿ ಹರಿಯುತ್ತ ವಿಕಾಸಗೊಳ್ಳುತ್ತ ಬಂದ ಸಾಮಾಜಿಕ ವಿವೇಕವನ್ನು ವರ್ತಮಾನದ ಬಿಕ್ಕಟ್ಟುಗಳಿಗೆ ಪರಿಹಾರವಾಗಿ ರೂಪಿಸಿಕೊಳ್ಳುವ ಹಾಗೂ ಹೊಸ ದಾರ್ಶನಿಕತೆಯನ್ನು ಶೋಧಿಸುವ ಸೃಜನಶೀಲ ಪ್ರಕ್ರಿಯೆಯೇ ಕಲೆ. ಜಗತ್ತಿನ ಎಲ್ಲ ಸೃಜನಶೀಲ ಚಟುವಟಿಕೆಗಳು ಕಲೆಯ ರಾಜಕಾರಣವೋ ರಾಜಕಾರಣದ ಕಲೆಯೋ ಆಗಿರುತ್ತವೆ. ಕನ್ನಡ ಕಾವ್ಯ ಕೂಡ ಇದಕ್ಕೆ ಹೊರತಲ್ಲ. 'ಅಮೇರಿಕಾದ ಸಾಮ್ರಾಜ್ಯಶಾಹಿ ಇಂದಿಲ್ಲ ನಾಳೆ ನಾಶವಾಗುತ್ತದೆ', ಎಂಬ ನೋಮ್ ಚೋಮ್‌ಸ್ಕಿಯವರ ಕನಸೇ ಒಂದು ಕವಿತೆ. ಹಿಂಸೆಯ ಭೀಕರ ವಾಸ್ತವದ ಮಧ್ಯದಲ್ಲಿ ಕಲೆಯು ರಾಜಕೀಯ ದಾರ್ಶನಿಕತೆಯ ಮೂಲಕ ಬದುಕುವ ಚೈತನ್ಯವನ್ನು ನೀಡುತ್ತದೆ. ಆ ನಿಟ್ಟಿನಲ್ಲಿ ಕನ್ನಡ ಜನಾಂಗದ ಸಾಮಾಜಿಕ ವಿವೇಕವಾಗಿರುವ 'ಪರಧರ್ಮಮುಂ ಪರವಿಚಾರಮುಂ' ಸೈರಿಸುವ ಸೈರಣಾವಾದ ವನ್ನು ಆಧುನಿಕ ಕನ್ನಡ ಕಾವ್ಯ ಒಂದು ದಾರ್ಶನಿಕತೆಯನ್ನಾಗಿ ಪ್ರತಿಪಾದಿಸಿದೆ. ಜಗತ್ತಿನ ಎಲ್ಲ ಹಿಂಸೆಗಳು ಒಂದಿಲ್ಲ ಒಂದು ದಿನ ನಾಶವಾಗಬೇಕು ಎಂಬ ಆಶಯವನ್ನು ವ್ಯಕ್ತಪಡಿಸಿದೆ. ನಾಶವಾಗುತ್ತದೆ ಎಂಬ ಕಾರಣಿಕವನ್ನೂ ನುಡಿದಿದೆ.

**ಡಾ|| ಎಂ. ಡಿ. ಒಕ್ಕುಂದ**
'ನೆಮ್ಮದಿ', ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩.

ನ. ಸುಂದರಮೂರ್ತಿ

ದೇಶದಲ್ಲಿ ಮೋಸ, ವಂಚನೆ ಪ್ರಕರಣಗಳು ಹೆಚ್ಚುತ್ತಿವೆ. ರೂಪಾಯಿಯ ಮೌಲ್ಯ ಶರವೇಗದಲ್ಲಿ ಕುಸಿಯುತ್ತಿದೆ. ಇದರಿಂದಾಗಿ ನಮ್ಮ ದೇಶದಲ್ಲಿ ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಗಳು ಗಗನಕ್ಕೇರುತ್ತಿವೆ. ಸಾಲಿಗೆ ದರಗಳು ಹೆಚ್ಚಿ ಆಹಾರ ಧಾನ್ಯಗಳ, ಅಗತ್ಯ ವಸ್ತುಗಳ ಬೆಲೆಗಳು ವಿಪರೀತವಾಗಿ ಹೆಚ್ಚಿವೆ. ಇದಾವುದರ ಬಗ್ಗೆಯೂ ಸರ್ಕಾರದಿಂದ ಯಾವ ಪ್ರತಿಕ್ರಿಯೆಯೂ ಬಂದಿಲ್ಲ. ರಾಮನ ಗುಡಿಯನ್ನು ಅಲ್ಲಿಯೇ ಕಟ್ಟುತ್ತೇವೆ, ೨೦೧೯ರ ಸಾರ್ವತ್ರಿಕ ಚುನಾವಣೆಗಳಲ್ಲಿ ಮತ್ತೊಮ್ಮೆ ಆರಿಸಿ ಬಂದು ಆಡಳಿತ ನಡೆಸುತ್ತೇವೆ, ರಾಮರಾಜ್ಯದ ಕನಸು ನನಸಾಗುವುದು, ೨೦೨೨ ಮೋದಿಯವರ ನೇತೃತ್ವದಲ್ಲಿ ಹೊಸ ಭಾರತವನ್ನು ನಿರ್ಮಾಣ ಮಾಡುತ್ತೇವೆ, ಇವೇ ಮುಂತಾದ ಮಾತುಗಳನ್ನು ಆರೆಸ್ಸೆಸ್ ನಾಯಕತ್ವದ ಭಾಜಪ ಹೇಳುತ್ತಿದೆ. ಮೋದಿ ಬ್ರ್ಯಾಂಡ್ ರಾಮರಾಜ್ಯ ಇಲ್ಲಿ ಯಾರಿಗೂ ಬೇಕಾಗಿಲ್ಲ! ಯೋಜನಾ ಮಂಡಳಿಯನ್ನು ರದ್ದು ಮಾಡಿ ಅದರ ಜಾಗದಲ್ಲಿ ನೀತಿ ಆಯೋಗವನ್ನು ರಚಿಸಲಾಗಿದೆ. ಅನೀತಿಯಿಂದ ಕೂಡಿದ ನೀತಿ ಆಯೋಗ ದೇಶಿ ಹಾಗೂ ವಿದೇಶಿ ಬಂಡವಾಳಗಾರರ ದಳ್ಳಾಳಿಯಾಗಿ ಕೆಲಸ ಮಾಡುತ್ತಿದೆ. ಲಂಗು ಲಗಾಮಿಲ್ಲದ ಮಾರುಕಟ್ಟೆ ಆರ್ಥಿಕ ಉದಾರೀಕರಣ ನೀತಿಗಳ ಪಾಲನೆಯಿಂದ, ಅಂತರರಾಷ್ಟ್ರೀಯ ಬಂಡವಾಳಗಾರರಿಗೆ ನಮ್ಮ ದೇಶವನ್ನೇ ಮಾರುವ ಕಾರ್ಯಾಚರಣೆಗಳಲ್ಲಿ ಭಾಜಪ ತೊಡಗಿದೆ.



ಭಾರತೀಯ ಜೀವವಿಮಾ ನಿಗಮ (ಎಲ್‌ಐಸಿ) ಐಡಿಬಿಐ ಬ್ಯಾಂಕುಗಳಲ್ಲಿ ಶೇಕಡ ೫೧ರಷ್ಟು ಷೇರುಗಳನ್ನು ಪಡೆದುಕೊಳ್ಳಲು ಯತ್ನಿಸುತ್ತಿದೆ. ಎಲ್‌ಐಸಿಯ ಬೋರ್ಡ್ ಆಫ಼್ ಡೈರೆಕ್ಟರ್ಸ್ ಇದಕ್ಕೆ ಸಮ್ಮತಿ ನೀಡಿದೆ. ಅದೇ ರೀತಿಯಲ್ಲಿ ಐಡಿಬಿಐ ಬ್ಯಾಂಕ್ ಸಹ ಬಹುಮತ ಷೇರುಗಳನ್ನು ಎಲ್‌ಐಸಿಗೆ ಮಾರಾಟ ಮಾಡಲು ಒಪ್ಪಿಗೆ ನೀಡಿದೆ. ಭಾರತದ ಇನ್ಸ್ಯೂರೆನ್ಸ್ ನಿಯಂತ್ರಣ ಪ್ರಾಧಿಕಾರ ಸಹ ಈ ಬಂಡವಾಳ ಹೂಡಿಕೆ ವ್ಯವಹಾರಕ್ಕೆ ತನ್ನ ಸಹಮತವನ್ನು ನೀಡಿದೆ. ಇನ್ನು ರಿಸರ್ವ್ ಬ್ಯಾಂಕ್ ಮತ್ತು ಸೆಬಿ (ಎಸ್‌ಇಬಿಐ)ಯ ಮಂಜೂರಾತಿ ಮಾತ್ರ ಬಾಕಿ ಉಳಿದಿದೆ. ಕೆಲವು ವಿಚಾರಗಳು ನಿಗೂಢವಾಗಿವೆ. ಎಲ್‌ಐಸಿಗೆ ತನ್ನದೇ ಆದ ಬ್ಯಾಂಕ್‌ನ ಅವಶ್ಯಕತೆ ಇದ್ದಿದ್ದರೆ ಹೊಸದಾಗಿ ಒಂದು ಬ್ಯಾಂಕನ್ನು ಸ್ಥಾಪಿಸಬಹುದಿತ್ತು. ಅದಕ್ಕೆ ಅವಶ್ಯಕವಾದ ಎಲ್ಲ ಅರ್ಹತೆಗಳು, ಸಾಧನಗಳು ಎಲ್‌ಐಸಿಯ ಬಳಿ ಇವೆ. ತೀವ್ರವಾದ ಆರ್ಥಿಕ ಮುಗ್ಗಟ್ಟಿನಲ್ಲಿರುವ ಐಡಿಬಿಐ ಬ್ಯಾಂಕನ್ನು ತನ್ನದನ್ನಾಗಿ ಮಾಡಿಕೊಳ್ಳುವಂತಹ ಅವಶ್ಯಕತೆ ಅದಕ್ಕೇನೂ ಇರಲಿಲ್ಲ. ಐಡಿಬಿಐ ಬ್ಯಾಂಕಿನ ಶೇಕಡ ೫೧ರಷ್ಟು ಷೇರು ಕೊಳ್ಳುವುದೆಂದರೆ ಅದಕ್ಕೆ ತಗಲುವ ವೆಚ್ಚ ರೂ.೧೩,೦೦೦ ಕೋಟಿ. ಇಷ್ಟು ಹಣವನ್ನು ವ್ಯಯ ಮಾಡಿ ಐಡಿಬಿಐ ಬ್ಯಾಂಕಿನಲ್ಲಿ ತನ್ನ ಬಂಡವಾಳವನ್ನು ಹೆಚ್ಚಿಸಿಕೊಂಡರೆ, ಬ್ಯಾಂಕಿನ ರೂ.೫೫,೦೦೦ ಕೋಟಿ ಮರುಪಾವತಿಯಾಗದ ಸಾಲಗಳು (ಎನ್‌ಪಿಎ) ಎಲ್‌ಐಸಿಗೆ ಕಂಟಕವಾಗುತ್ತದೆ. ೧೩,೦೦೦ ಕೋಟಿ ರೂಪಾಯಿಗಳ ಷೇರು ಕೊಂಡರೆ ೫೫,೦೦೦ ರೂಪಾಯಿಗಳ ಮರುಪಾವತಿ ಯಾಗದ ಸಾಲಗಳು ಫ಼್ರೀ ! ಎಂತಹ ಕರಾಮತ್ತು !! ಐಆರ್‌ಡಿಎ ಆ್ಯಕ್ಟ್ ಅನುಸಾರ ಎಲ್‌ಐಸಿ ಇತರ ಯಾವುದೇ ಸಂಸ್ಥೆಯಲ್ಲಿ ಶೇಕಡ ೧೫ಕ್ಕಿಂತ ಹೆಚ್ಚು ಬಂಡವಾಳವನ್ನು ಹೂಡುವಂತಿಲ್ಲ. ಐಡಿಬಿಐ ಬ್ಯಾಂಕಿನಲ್ಲಿ ಶೇ. ೫೧ರಷ್ಟು ಬಂಡವಾಳ ಹೂಡಲು ಎಲ್‌ಐಸಿಗೆ ಯೋಚನೆ ಯಾದರೂ ಹೇಗೆ ಬಂತು! ಅಥವಾ ಯಾರಿಂದ ಪ್ರೇರಣೆ ಆಯಿತು ಮತ್ತು ಐಆರ್‌ಡಿಎ ತನಗಿರುವ ಅಧಿಕಾರದ ಮಿತಿಯನ್ನು ದಾಟಿ ಶೇಕಡ ೫೧ರಷ್ಟು

# ಎಲ್‌ಐಸಿ – ಐಡಿಬಿಐ ಬ್ಯಾಂಕ್ ವ್ಯವಹಾರ

## ಜನಸಾಮಾನ್ಯರ ಉಳಿತಾಯ ಹಣಕ್ಕೆ ಗಂಡಾಂತರ!



ಬಂಡವಾಳ ಹೂಡಿಕೆಗೆ ಎಲ್‌ಐಸಿಗೆ ಹೇಗೆ ಅನುಮೋದನೆ ನೀಡಿತು, ಈ ರೀತಿಯ ಒಂದು ವ್ಯವಹಾರದ ಅವಶ್ಯಕತೆ ಇತ್ತೇ, ಇವೇ ಮೊದಲಾದ ವಿಚಾರಗಳು ನರೇಂದ್ರ ಮೋದಿಯವರಿಗಷ್ಟೇ ತಿಳಿದಿರುವ ಚಿದಂಬರ ರಹಸ್ಯಗಳು! ನಷ್ಟದಲ್ಲಿರುವ ಐಡಿಬಿಐ ಬ್ಯಾಂಕನ್ನು ಎಲ್‌ಐಸಿ ಹಣದಿಂದ ಪಾರು ಮಾಡುವುದು ಎಂಬ ಕ್ರಮ ಕೇಂದ್ರ ಸರ್ಕಾರದ ರಾಜ್ಯನೀತಿ ಆಗಿರಬಹುದೇ? ಪ್ರಥಮತಃ, ಎಲ್‌ಐಸಿಯ ಹಣ ಪಾಲಿಸಿದಾರರ, ಅಂದರೆ ಜೀವವಿಮಾ ಗ್ರಾಹಕರ ಹಣ. ೧೯೫೬ರಲ್ಲಿ ಎಲ್‌ಐಸಿ ಸ್ಥಾಪನೆ ಯಾದಾಗ ಕೇಂದ್ರ ಸರ್ಕಾರ ಒದಗಿಸಿದ ಬಂಡವಾಳ ಕೇವಲ ಐದು ಕೋಟಿ ರೂಪಾಯಿಗಳು ಮಾತ್ರ. ಸಂಸ್ಥೆಯ ಆರಂಭದಲ್ಲಿ ಉಂಟಾಗುವ ಖರ್ಚುಗಳನ್ನು ಸರಿಗಟ್ಟುವುದಕ್ಕೋಸ್ಕರ ನೀಡಿದ ಹಣವಷ್ಟೇ ಈ ಐದು ಕೋಟಿ ರೂಪಾಯಿ. 'ಆರಂಭಿಕ ವೆಚ್ಚಗಳನ್ನು ಪೂರೈಸಲು' ಎಂದು ಅಂದೇ ಅದಕ್ಕೆ ಸಮಜಾಯಿಷಿ ನೀಡಲಾಗಿತ್ತು. ಅದರರ್ಥ ಎಲ್‌ಐಸಿಯಲ್ಲಿ ಯಾವ ಬಂಡವಾಳವನ್ನೂ ಕೇಂದ್ರ ಸರ್ಕಾರ ಹೂಡಿರಲಿಲ್ಲ ಎಂದಷ್ಟೇ! ಜನರ ಪ್ರೀಮಿಯಂ ಹಣವೇ ಎಲ್‌ಐಸಿಯ ಬಂಡವಾಳವಾಗಿ ಪರಿವರ್ತನೆಯಾಯಿತು. ಈ ರೀತಿಯ ಕಂಪೆನಿಗಳನ್ನು ಮ್ಯುಚುಯಲ್ ಕಂಪನಿ ಗಳೆಂದು ಗುರುತಿಸುತ್ತಾರೆ. ಮ್ಯುಚುಯಲ್ ಕಂಪೆನಿಗಳ ಇನ್ನೆರಡು ಉದಾಹರಣೆಗಳು ಯು.ಕೆ.ಯ ಪ್ರುಡೆನ್ಷಿಯಲ್ ಲೈಫ್ ಮತ್ತು ಸ್ಟ್ಯಾಂಡರ್ಡ್ ಲೈಫ್ ಇನ್ಶ್ಯೂರೆನ್ಸ್ ಕಂಪೆನಿಗಳು. ಬಹಳ ದೀರ್ಘಕಾಲ, ಅಂದರೆ ಹೆಚ್ಚು ಕಡಿಮೆ ೨೦೦೮ರ ಗ್ಲೋಬಲ್ ಮೆಲ್ಟ್ ಡೌನ್ ತನಕ ಅವು ಮ್ಯುಚುಯಲ್ ಕಂಪೆನಿಗಳಾಗಿಯೇ ಇದ್ದವು. ಆದ್ದರಿಂದ, ಎಲ್‌ಐಸಿಯ ಕೋಟ್ಯಂತರ ಸಾಮಾನ್ಯ ಜನರ ವಿಮಾ ಉಳಿತಾಯದ ಹಣವನ್ನು ಕೇಂದ್ರ ಸರ್ಕಾರ ತನ್ನ ಮನಸೋ ಇಚ್ಛೆ ಬಳಸಿಕೊಳ್ಳ ಬಹುದೇ ಮತ್ತು ಆ ಕ್ರಮಕ್ಕೆ ರಾಜ್ಯನೀತಿ ಅಥವಾ "ಪಾಲಿಸಿ ಮ್ಯಾಟರ್" ಎಂಬ ಲೇಬಲ್ ಹಚ್ಚಬಹುದೇ?!

ಇನ್ನೊಂದು ವಿಚಾರವು ನಮ್ಮ ಸ್ವಾರಸ್ಯವನ್ನು ಕೆರಳಿಸಬಹುದು. ಐಡಿಬಿಐ ಬ್ಯಾಂಕಿಗೆ ತನ್ನದೇ ಆದ ಜೀವವಿಮಾ ಕಂಪೆನಿ ಇದೆ. ಆ ಜಂಟೀ ಉದ್ಯಮದ ಹೆಸರು ಐಡಿಬಿಐ ಫೆಡರಲ್ ಲೈಫ್. ಭಾರತದ ಒಟ್ಟು ಜೀವವಿಮಾ ವ್ಯವಹಾರದಲ್ಲಿ ಈ ಕಂಪೆನಿಯ ಪಾಲು – ಜುಲೈ ೩೧, ೨೦೧೭ರ ಅಂಕಿ ಅಂಶಗಳ ಪ್ರಕಾರ ಒಟ್ಟು ಮೊದಲ ವರ್ಷದ ಪ್ರೀಮಿಯಂ ಶೇಕಡ ೦.೪೦ ಮತ್ತು ಒಟ್ಟು ಪಾಲಿಸಿಗಳು ಶೇಕಡ ೦.೪೯ ಮಾತ್ರ. ಇದೇ ಅವಧಿಯಲ್ಲಿ ಎಲ್‌ಐಸಿಗೆ ಇದೇ ಅಂಶಗಳು ಶೇಕಡ ೭೩.೬೮ ಮತ್ತು ಶೇಕಡ ೭೪.೬೬ ಇದ್ದವು. ಐಡಿಬಿಐ ಫೆಡರಲ್ ಲೈಫ್ ಕಂಪೆನಿಗೂ ಎಲ್‌ಐಸಿಗೂ ಬಿಸಿನೆಸ್ ಆಧಾರದಲ್ಲಿ ಯಾವುದೇ ಹೋಲಿಕೆಯಿಲ್ಲ. ಹಿಮಾಲಯದ ಎವರೆಸ್ಟ್ ಪರ್ವತಕ್ಕೂ ರಾಜಾಜಿನಗರದ ಸಿದ್ಧರಾಮ ದಿಣ್ಣೆಗೂ ಇರುವ ಹೋಲಿಕೆ ಕೂಡ ಇರಲು ಸಾಧ್ಯವಿಲ್ಲ! ಇದೊಂದು ಕಡೆ ಇರಲಿ. ಐಡಿಬಿಐ ಬ್ಯಾಂಕ್ ಎಲ್‌ಐಸಿಯ ಸ್ವಾಮ್ಯಕ್ಕೆ ಒಳಗಾದರೆ ಐಡಿಬಿಐ ಫೆಡರಲ್ ಲೈಫ್‌ನ ಭವಿಷ್ಯವೇನು? ಅಥವಾ ಎಲ್‌ಐಸಿ ಮತ್ತು ಐಡಿಬಿಐ ಫೆಡರಲ್ ಲೈಫ್ ಕಂಪೆನಿಗಳು




ಬಿಸಿನೆಸ್‌ಗಾಗಿ ಪ್ರತಿಸ್ಪರ್ಧಿಗಳಾಗುತ್ತವೆಯೇ? ಈ ವಿಚಾರದಲ್ಲಿ ಇನ್ಶ್ಯೂರೆನ್ಸ್ ನಿಯಂತ್ರಣ ಪ್ರಾಧಿಕಾರ ಯಾವ ನಿಲುವನ್ನು ತಾಳಬಹುದು?

ಎಲ್‌ಐಸಿ ಮತ್ತು ಐಡಿಬಿಐ ಬ್ಯಾಂಕಿನ ವ್ಯವಹಾರವನ್ನು ದೇಶದ ಹೆಸರಾಂತ ಆರ್ಥಿಕ ತಜ್ಞರು, ಮುತ್ಸದ್ದಿಗಳು, ಸುದ್ದಿ ಮಾಧ್ಯಮಗಳು ಹಾಗೂ ಕಾರ್ಮಿಕ ನಾಯಕರು ತೀವ್ರವಾಗಿ ವಿಮರ್ಶಿಸಿದ್ದಾರೆ. ಆಲ್ ಇಂಡಿಯಾ ಎಲ್‌ಐಸಿ ಎಂಪ್ಲಾಯೀಸ್ ಫೆಡರೇಷನ್ ಹಾಗೂ ಐಡಿಬಿಐ ಬ್ಯಾಂಕ್ ಅಧಿಕಾರಿಗಳ ಮತ್ತು ನೌಕರರ ಸಂಘಗಳು ಮತ್ತು ಆಲ್ ಇಂಡಿಯಾ ಬ್ಯಾಂಕ್ ಎಂಪ್ಲಾಯೀಸ್ ಅಸೋಸಿಯೇಶನ್ (ಎಐಬಿಇಎ) ಸಹ ವಿರೋಧಿಸಿವೆ. ಸರ್ಕಾರದ ಬಂಡವಾಳವನ್ನು ಎಲ್‌ಐಸಿಗೆ ವರ್ಗಾವಣೆ ಮಾಡುವ ಕ್ರಮವನ್ನು ರದ್ದು ಮಾಡಬೇಕೆಂದು ಆಗ್ರಹಿಸಿವೆ. ಯಾವುದೇ ಕಾರಣಕ್ಕೆ ಐಡಿಬಿಐ ಬ್ಯಾಂಕನ್ನು ಖಾಸಗೀಕರಿಸಬಾರದು, ಬ್ಯಾಂಕಿನ ಬಹುಮತ ಬಂಡವಾಳ ಕೇಂದ್ರ ಸರ್ಕಾರದಲ್ಲಿಯೇ ಉಳಿಯಬೇಕು ಎನ್ನುವುದು ಬ್ಯಾಂಕ್ ಕಾರ್ಮಿಕ ಸಂಘಗಳ ಆಗ್ರಹ ಮತ್ತು ಬೇಡಿಕೆ. ಆದರೆ ಇದಾವುದನ್ನೂ ಕೇಂದ್ರ ಸರ್ಕಾರ ಕಿವಿಗೆ ಹಾಕಿಕೊಂಡಂತೆ ಕಾಣುವುದಿಲ್ಲ! ಎಲ್‌ಐಸಿಯಲ್ಲಿರುವ ಜನಸಾಮಾನ್ಯರ ಉಳಿತಾಯದ ಹಣವನ್ನು ದುರ್ಬಳಕೆ ಮಾಡಿ, ನಿಗಮವನ್ನು ಬಲಹೀನಗೊಳಿಸಿ, ಕ್ರಮೇಣ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಖಾಸಗೀಕರಿಸಿ, ಅದನ್ನು ಟಾಟಾ, ಬಿರ್ಲಾ, ಅಂಬಾನಿ, ಅದಾನಿಗಳಿಗೆ ಮತ್ತು ಅಂತರರಾಷ್ಟ್ರೀಯ ಬಂಡವಾಳಿಗರಿಗೆ ಮಾರಾಟ ಮಾಡುವ ಹುನ್ನಾರವಿರಬಹುದು ಎಂಬ ಶಂಕೆಯು ಮೂಡದೇ ಇರಲು ಸಾಧ್ಯವಿಲ್ಲ.

ಈ ಸಂದರ್ಭದಲ್ಲಿ ಐಡಿಬಿಐ ಬ್ಯಾಂಕ್ ಬಗ್ಗೆ ಹೆಚ್ಚಿನ ಮಾಹಿತಿ ಪಡೆಯುವುದು ಸೂಕ್ತ ಎನಿಸುತ್ತದೆ. ಐಡಿಬಿಐ ಅಂದರೆ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಬ್ಯಾಂಕ್ ಆಫ್ ಇಂಡಿಯಾ ಎಂದರ್ಥ. ಅದು ಜನ್ಮ ತಳೆದದ್ದು ಜುಲೈ ೧, ೧೯೬೪ರಲ್ಲಿ. ಕೇಂದ್ರ ಸರ್ಕಾರ ಪಾರ್ಲಿಮೆಂಟ್‌ನಲ್ಲಿ ಐಡಿಬಿಐ ಆ್ಯಕ್ಟ್‌ಗೆ ೧೯೬೪ರಲ್ಲಿ ಒಪ್ಪಿಗೆ ಪಡೆದ ಬಳಿಕ ದೊಡ್ಡ ಮತ್ತು ಮಧ್ಯಮ ಗಾತ್ರದ ಕೈಗಾರಿಕೆಗಳ ಸ್ಥಾಪನೆ ಮತ್ತು ಅಭಿವೃದ್ಧಿಗಾಗಿ ಐಡಿಬಿಐ ವಿಕಾಸಾತ್ಮಕ ಹಣಕಾಸಿನ ಸಂಸ್ಥೆಯಾಗಿ ಆರಂಭ ವಾಯಿತು. ಐಡಿಬಿಐ ಸಂಸ್ಥೆಯು ಕಂಪೆನೀಸ್ ಆ್ಯಕ್ಟ್ ಅಡಿಯಲ್ಲಿ ನೋಂದಾಯಿಸಲ್ಪಟ್ಟಿತು. ಅದು ಜನತಾ ಬ್ಯಾಂಕ್ ಆಗಿರಲಿಲ್ಲ. ಆದ ಕಾರಣ, ಇತರ ಬ್ಯಾಂಕು ಗಳಂತೆ ಐಡಿಬಿಐ ಬ್ಯಾಂಕಿಂಗ್ ರೆಗ್ಯುಲೇಷನ್ ಆ್ಯಕ್ಟ್ (BR Act) ಅಡಿಯಲ್ಲಿ ನೋಂದಾಯಿಸಲ್ಪಡಲಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನದಲ್ಲಿಟ್ಟುಕೊಳ್ಳಬೇಕು. ಅದು ಸಂಪೂರ್ಣವಾಗಿ ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿತ್ತು. ಪ್ರಾರಂಭದಿಂದಲೂ ಐಡಿಬಿಐ ಸಾರ್ವಜನಿಕ ಕ್ಷೇತ್ರಕ್ಕೆ ಸೇರಿದ ಸಂಸ್ಥೆಯಾಗಿತ್ತು. ದೊಡ್ಡ ದೊಡ್ಡ ಕೈಗಾರಿಕೆಗಳ ಸ್ಥಾಪನೆಗೆ ಹಣ ಒದಗಿಸುವುದು, ತನ್ಮೂಲಕ ನೂರಾರು, ಸಾವಿರಾರು ಕೆಲಸಗಳ ಸೃಷ್ಟಿ ಐಡಿಬಿಐ ಸಂಸ್ಥೆಯ ಮೂಲ ಉದ್ದೇಶ ಮತ್ತು ಗುರಿಯಾಗಿತ್ತು. ದೇಶದ ಕೈಗಾರಿಕಾ ಪ್ರಗತಿಗೆ ಐಡಿಬಿಐನ ಪಾತ್ರ ಏನೆಂಬುದನ್ನು ಗುರುತಿಸಲಾಗಿತ್ತು. ೧೯೬೯ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಪ್ರಧಾನಿ ಆಗಿದ್ದಾಗ ೧೪ ಖಾಸಗೀ ಬ್ಯಾಂಕ್‌ಗಳನ್ನು ರಾಷ್ಟ್ರೀಕರಿಸಲಾಯಿತು. ೧೯೮೦ರಲ್ಲಿ ಇನ್ನೂ ೫ ಖಾಸಗೀ ಬ್ಯಾಂಕ್‌ಗಳನ್ನು ರಾಷ್ಟ್ರೀಕರಿಸಿ, ಒಟ್ಟು ೧೯ ರಾಷ್ಟ್ರೀಕೃತ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಇದಲ್ಲದೆ, ಬಹಳ ಹಿಂದೆಯೇ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಆಗಿ ಪರಿವರ್ತನೆಯಾಗಿತ್ತು.

೨೦೦೪ರಲ್ಲಿ ಐಡಿಬಿಐಅನ್ನು 'ಐಡಿಬಿಐ ಬ್ಯಾಂಕ್ ನಿಯಮಿತ (ಲಿಮಿಟೆಡ್)' ಎಂದು ಪರಿವರ್ತಿಸಲಾಯ್ತು. ಇದರ ಸಲುವಾಗಿ ಪಾರ್ಲಿಮೆಂಟಿನಲ್ಲಿ 'ಇಂಡಸ್ಟ್ರಿಯಲ್ ಡೆವಲೆಪ್‌ಮೆಂಟ್ ಬ್ಯಾಂಕ್ (ಟ್ರಾನ್ಸ್‌ಫರ್ ಆಫ್ ಅಂಡರ್‌ಟೇಕಿಂಗ್ ಅಂಡ್ ರಿಪೀಲ್) ಆ್ಯಕ್ಟ್, ೨೦೦೩ ಎಂಬ ಕಾನೂನನ್ನು ಅಂಗೀಕರಿಸಲಾಯ್ತು. ಇದನ್ನು ಸಾಮಾನ್ಯವಾಗಿ "ರಿಪೀಲ್ ಆ್ಯಕ್ಟ್" ಎಂದೇ ಕರೆಯುತ್ತಾರೆ. ಏಪ್ರಿಲ್ ೨, ೨೦೦೫ರಿಂದ ಐಡಿಬಿಐ ಮತ್ತು ಐಡಿಬಿಐ ಬ್ಯಾಂಕ್ ಲಿಮಿಟೆಡ್ ಒಂದಾಗಿ ಏಕರೂಪ ತಾಳಿ, ಐಡಿಬಿಐ ಬ್ಯಾಂಕ್ ಲಿಮಿಟೆಡ್ ಎಂದು ಸೆಕ್ಷನ್ ೪೪ (ಎ), ಬ್ಯಾಂಕಿಂಗ್ ರೆಗ್ಯುಲೇಷನ್ಸ್ ಆ್ಯಕ್ಟ್, ೧೯೪೯ರ ಪ್ರಕಾರ ಮನ್ನಣೆ ಪಡೆಯಿತು. ಹೆಸರು ಬದಲಾವಣೆ ಮೇ ೭, ೨೦೦೮ರಿಂದ ಅಧಿಕೃತವಾಗಿ ಜಾರಿಗೆ ಬಂತು. ಬ್ಯಾಂಕಿನ ಅತ್ಯಧಿಕ ಬಂಡವಾಳ ಕೇಂದ್ರ ಸರ್ಕಾರದ್ದೇ ಇತ್ತು. ಐಡಿಬಿಐ ಬ್ಯಾಂಕ್ ಪ್ರಾರಂಭವಾದ ದಿನದಿಂದಲೂ ಸಾರ್ವಜನಿಕ ಕ್ಷೇತ್ರದ ಬ್ಯಾಂಕ್ ಆಗಿಯೇ ಮುಂದುವರಿದಿದೆ.

ಐಡಿಬಿಐ ಬ್ಯಾಂಕ್‌ನ ಇಂದಿನ ಪರಿಸ್ಥಿತಿ ಕಳವಳಕಾರಿ ಯಾಗಿದೆ. ತೀವ್ರವಾದ ಆರ್ಥಿಕ ಮುಗ್ಗಟ್ಟು ಉಂಟಾಗಿದೆ. ಲೆಕ್ಕ ಪುಸ್ತಕಗಳ ಪ್ರಕಾರ ಶೇಕಡ ೨೮ರಷ್ಟು ಸಾಲಗಳು ಮರುಪಾವತಿಯಾಗಿಲ್ಲ. ಅದರ ಒಟ್ಟು ಮೊತ್ತ ೫೫,೦೦೦ ಕೋಟಿ ರೂಪಾಯಿಗಳು. ನಿಜಾಂಶದಲ್ಲಿ ಮರುಪಾವತಿಯಾಗದ ಸಾಲದ ಹೊರೆ ಶೇಕಡ ೩೫ ಇರಬಹುದೆಂಬ ಶಂಕೆಯೂ ಇದೆ. ಬೇರೆ

ಕೆಲವು ಅವ್ಯವಹಾರಗಳೂ ನಡೆದಿರಬಹುದೆಂಬ ಆರೋಪಗಳಿವೆ. ಸಿಬಿಐ ತನಿಖೆ ಜಾರಿಯಲ್ಲಿದೆ. ಆದರೆ ಆಪಾದಿತರ ಮೇಲೆ ಯಾವುದೇ ಶಿಸ್ತಿನ ಕ್ರಮವನ್ನೂ ಜಾರಿಗೊಳಿಸಿಲ್ಲ.

ತೀವ್ರ ಸಂಕಷ್ಟಕ್ಕೆ, ಆರ್ಥಿಕ ಬಿಕ್ಕಟ್ಟಿಗೆ ಒಳಗಾಗಿರುವ ಐಡಿಬಿಐ ಬ್ಯಾಂಕನ್ನು ಎಲ್‌ಐಸಿ ಯಾವ ಸಕಾರಣಕ್ಕೆ, ಯಾವ ನಿರ್ಬಂಧಕ್ಕೆ ಒಳಪಟ್ಟು ಪಾರು ಮಾಡಲು ಹೊರಟಿದೆ? ಎಲ್‌ಐಸಿ ಕೇಂದ್ರ ಸರ್ಕಾರದ ಆರ್ಥಿಕ ತೀರ್ಮಾನಗಳನ್ನು ಜಾರಿ ಗೊಳಿಸಲು ಬಳಸಿಕೊಳ್ಳುವ ಎಟಿಎಂ ಯಂತ್ರವೇ? ಎಂಬ ಪ್ರಶ್ನೆ ಜನರನ್ನು ಬಾಧಿಸುತ್ತಿದೆ. ಭಾರತೀಯ ಜೀವ ವಿಮಾ ನಿಗಮ ಇಂದು ಪ್ರಪಂಚದ ಅತಿ ದೊಡ್ಡ ಜೀವ ವಿಮಾ ಕಂಪೆನಿಯಾಗಿದೆ. ಅದನ್ನು ಪ್ರಾರಂಭಿಸಿ ಇಂದಿಗೆ ೬೨ ವರ್ಷಗಳು ಕಳೆದಿವೆ. ೧೯೫೬ರಲ್ಲಿ ಅದರ ಒಟ್ಟು ಆಸ್ತಿ ೩೫೨.೨ ಕೋಟಿ ರೂಪಾಯಿಗಳು ಇದ್ದದ್ದು ಅದು ೨೦೧೮ರಲ್ಲಿ ೨೮.೪೫ ಲಕ್ಷ ಕೋಟಿ ರೂಪಾಯಿಗಳಾಗಿದೆ. ಮಾರ್ಕೆಟ್ ಶೇರ್ ಪಾಲಿಸಿ ಸಂಖ್ಯೆಗಳ ಆಧಾರದಲ್ಲಿ ಶೇಕಡ ೭೫.೬೭ರಷ್ಟಿದೆ. ದೇಶದ ಅಭಿವೃದ್ಧಿ ಕಾರ್ಯಗಳಿಗೆ ೨೦೧೮ರ ಮಾರ್ಚ್ ೩೧ರ ಹೊತ್ತಿಗೆ ೨೭,೩೬,೭೬೨ ಕೋಟಿ ರೂಪಾಯಿಗಳನ್ನು ಒದಗಿಸಿದೆ. ೧೯೫೬ರಲ್ಲಿ ಕೇಂದ್ರ ಸರ್ಕಾರ ಹೂಡಿದ ಐದು ಕೋಟಿ ರೂಪಾಯಿಗಳಿಗೆ ೨೦೧೬-೧೭ರ ಹಣಕಾಸಿನ ವರ್ಷದಲ್ಲಿ ೨,೨೦೬.೭೦ ಕೋಟಿ ರೂಪಾಯಿಗಳನ್ನು ಲಾಭಾಂಶ (ಡಿವಿಡೆಂಡ್)ವನ್ನಾಗಿ ನೀಡಿದೆ. ಬ್ರಹ್ಮಾಂಡವಾಗಿ ಬೆಳೆದಿರುವ ಭಾರತೀಯ ಜೀವ ವಿಮಾ ನಿಗಮ ಭಾರತದ ಪ್ರಜೆಗಳ ಆಸ್ತಿ.

ಇತ್ತೀಚಿನ ಕೆಲವು ವರ್ಷಗಳಲ್ಲಿ ಎಲ್‌ಐಸಿಯ ಹಲವಾರು ಬಂಡವಾಳ ಹೂಡಿಕೆಗಳು ಚರ್ಚೆಗೆ ಎಡೆ ಮಾಡಿಕೊಟ್ಟಿವೆ. ದೇಶದ ಜನತೆ ಇಂದು ಬ್ಯಾಂಕಿನಲ್ಲಿ ಶೇಖರಣೆಯಾಗಿರುವ ಮರುಪಾವತಿ ಯಾಗದ ಸಾಲಗಳ ಬಗ್ಗೆ ಕಳವಳ ವ್ಯಕ್ತಪಡಿಸು ತ್ತಿದ್ದಾರೆ. ಇದು ಸಹಜವೇ. ಅದೇ ವೇಳೆ ಎಲ್‌ಐಸಿಯಲ್ಲಿ ಸಹ ಮರುಪಾವತಿಯಾಗದ ಸಾಲಗಳ ಮೊತ್ತ ಹೆಚ್ಚುತ್ತಿದೆ. ಈ ದಿಶೆಯಲ್ಲಿ ಕೆಲವು ಅಂಕಿ ಅಂಶಗಳನ್ನು ಗಮನಿಸೋಣ:

ಈ ಮಾಹಿತಿಯಿಂದ ಭಾರತೀಯ ಜೀವ ವಿಮಾ ನಿಗಮದ ಮರು ಪಾವತಿಯಾಗದ ಸಾಲಗಳ ಮೊತ್ತ ಕಳೆದ ೬ ವರ್ಷಗಳಲ್ಲಿ ಗಣನೀಯವಾಗಿ ಹೆಚ್ಚಳವಾಗಿರುವುದನ್ನು ನೋಡುತ್ತೇವೆ. ೨೦೧೧-೧೨ರಲ್ಲಿ ಇದ್ದ ಒಟ್ಟು ಎನ್‌ಪಿಎ ೧.೨೫%ರಿಂದ ೨೦೧೬-೧೭ರಲ್ಲಿ ೪.೭೩%ಕ್ಕೆ ಏರಿದೆ. ೨೦೧೭-೧೮ರಲ್ಲಿ ಇದು ೬.೫%ರಿಂದ ೭.೦೦% ರವರೆಗೆ ತಲುಪಿರಬಹುದೆಂಬ ಶಂಕೆ ಇದೆ. ಇದರ ಬಗ್ಗೆ ಅಧ್ಯಯನ ನಡೆಸಿ ಈ ಕೆಟ್ಟ ಸಾಲ(ಎನ್‌ಪಿಎ)ದ ಪಿಡುಗನ್ನು ದೂರವೆಸೆದು ಜನರ ಹಣವನ್ನು ಸಂರಕ್ಷಿಸಬೇಕಾದ ಅಗತ್ಯತೆಯನ್ನು ಕೇಂದ್ರ ಸರ್ಕಾರ ಕೂಡಲೇ ಮನಗಾಣಬೇಕು. ಇದೇ ವಾದ ಬ್ಯಾಂಕ್‌ಗಳಿಗೂ ಅನ್ವಯವಾಗುವುದು. ಜನರ ಹಣ ಜನರ ಕಲ್ಯಾಣಕ್ಕಾಗಿಯೇ ಹೊರತು ಕಾರ್ಪೊರೇಟ್ ಲೂಟಿಗಾಗಿ ಅಲ್ಲ ! ಬೇಲಿಯೇ ಎದ್ದು ಬಂದು ಹೊಲ ಮೇಯ್ದಂತೆ ನರೇಂದ್ರ ಮೋದಿಯವರ ಸರ್ಕಾರ ಕಾರ್ಯಾಚರಣೆ ನಡೆಸುತ್ತಿದೆ. ಇದರ ಕುರಿತು ಜನ ಜಾಗೃತಗೊಳ್ಳಬೇಕು. ಐಡಿಬಿಐ ಬ್ಯಾಂಕ್‌ನಲ್ಲಿ ಶೇಕಡ ೫೧ರಷ್ಟು ಬಂಡವಾಳವನ್ನು ಎಲ್‌ಐಸಿ ಖರೀದಿಸ ಬೇಕೆಂಬ ಕೇಂದ್ರ ಸರ್ಕಾರದ ಆದೇಶ ಇಲ್ಲಿಗೇ ನಿಲ್ಲದಿರಬಹುದು. ಮುಂದೆ, ರಾಷ್ಟ್ರೀಕೃತ ಬ್ಯಾಂಕ್ ಗಳಲ್ಲಿಯೂ ಎಲ್‌ಐಸಿ ತನ್ನ ಹಣವನ್ನು ಬಂಡವಾಳವಾಗಿ ಹೂಡಬೇಕೆಂಬ ಆದೇಶ ಹೊರಡಿಸ ಬಹುದು. ಈ ಕ್ರಮಕ್ಕೆ 'ಮರು ಬಂಡವಾಳೀಕರಣ' (Recapitalisation) ಎನ್ನುತ್ತಾರೆ. ಇದಕ್ಕಾಗಿ ಎಲ್‌ಐಸಿಗೆ ಸುಮಾರು ೧.೩೫ ಲಕ್ಷ ಕೋಟಿ ರೂಪಾಯಿಗಳನ್ನು ನಿಗದಿ ಮಾಡಬಹುದು. ಇಲ್ಲಿ ಒಂದು ಮೂಲ ಪ್ರಶ್ನೆ ಉದ್ಭವವಾಗುತ್ತದೆ. ದೇಶದ ಬ್ಯಾಂಕುಗಳಲ್ಲಿನ ತೀವ್ರ ತರವಾದ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿಕೊಳ್ಳುವುದರ ಕಾರಣ ದಿನೇ ದಿನೇ ಹೆಚ್ಚುತ್ತಿರುವ ಮರುಪಾವತಿಯಾಗದ ಸಾಲದ ಹೊರೆ ಮತ್ತು ಕಾರ್ಪೊರೇಟ್ ಬಂಡವಾಳಗಾರರ ಪರವಾದಂತಹ ಕೇಂದ್ರ ಸರ್ಕಾರದ ಆರ್ಥಿಕ ನೀತಿಗಳು. ಸಾಲ ಹಿಂದಿರುಗಿಸದ ಕಾರ್ಪೊರೇಟ್ ಕ್ರಿಮಿನಲ್‌ಗಳನ್ನು ಕಾನೂನುರೀತ್ಯಾ ಬಂಧಿಸಿ, ಅವರ ಆಸ್ತಿಗಳನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡು ಸಾಲಗಳನ್ನು ವಸೂಲು ಮಾಡಿಕೊಳ್ಳಬಹುದು. ಯಾಕೆ ಸರ್ಕಾರ ಈ ಕೆಲಸವನ್ನು ಮಾಡುತ್ತಿಲ್ಲ? ದೇಶದ ಸಾರ್ವಜನಿಕ ಹಣಕಾಸಿನ ಸಂಸ್ಥೆಗಳನ್ನು ಮತ್ತು ಇತರ ಕೈಗಾರಿಕೆಗಳನ್ನು ಖಾಸಗೀಕರಿಸಿ, ಕಾರ್ಪೊರೇಟ್ ದಣಿಗಳಿಗೆ ಮಾರಾಟ ಮಾಡಲು ಕೇಂದ್ರ ಸರ್ಕಾರ ಶೀಘ್ರಗತಿಯಲ್ಲಿ ಮುಂದಾಗುತ್ತಿದೆ. ಖಾಸಗೀಕರಣ ಅಲ್ಲಿಗೇ ನಿಲ್ಲಲಿಲ್ಲ. ಇವತ್ತು ಸರಕಾರವನ್ನೇ ಖಾಸಗೀಕರಿಸಿ, ಆಡಳಿತವನ್ನು, ದೇಶವನ್ನು ನಡೆಸಿ ಕೊಂಡು ಹೋಗುವ ಕೆಲಸವನ್ನು ನರೇಂದ್ರ ಮೋದಿ ಯವರು ಕಾರ್ಪೊರೇಟ್ ಬಂಡವಾಳಗಾರರಿಗೇ ವಹಿಸಿದ್ದಾರೆ. ನೋಟುಗಳ ಅಮಾನ್ಯೀಕರಣದಿಂದ ಎಲ್ಲ ಕಪ್ಪು ಹಣವೂ ಬಿಳಿಯಾಗಿ ಪರಿವರ್ತನೆಯಾಗಿ ಆರ್ಥಿಕ ವ್ಯವಸ್ಥೆಯಲ್ಲಿ ಅಂತರ್ಗತವಾಗಿದೆ. ದೇಶ ಅಧಃಪತನದತ್ತ ದಾಪುಗಾಲಿಡುತ್ತಿದೆ. ಕ್ರಿಮಿನಲ್‌ಗಳು ದೇಶವನ್ನು ಲೂಟಿ ಹೊಡೆದು ಐಷಾರಾಮಿ ಜೀವನ ನಡೆಸುತ್ತಿದ್ದಾರೆ.

ಎಲ್‌ಐಸಿ ಇಂದು ದೇಶದ ಆರ್ಥಿಕ ಬೆನ್ನೆಲುಬು. ಪಾಲಿಸಿದಾರರ ಹಣವನ್ನು ಮನಸ್ಸಿಗೆ ಬಂದಂತೆ ಪೋಲು ಮಾಡಲು ಕೇಂದ್ರ ಸರ್ಕಾರಕ್ಕೆ ಅವಕಾಶ ನೀಡಬಾರದು. ಮುಂದೆ ಇದರ ಪ್ರಭಾವ ಕೆಟ್ಟದಾಗಿರ ಬಹುದು. ಎಲ್‌ಐಸಿಯನ್ನೇ ಖಾಸಗೀಕರಿಸುವ ಸಂಚು ಇದರಲ್ಲಿ ಅಡಗಿದೆ. ಎಫ್‌ಆರ್‌ಡಿಐ ಮಸೂದೆಯನ್ನೇ ಹಿಮ್ಮೆಟ್ಟಿಸಿದ ಹಿರಿಮೆ ನಮ್ಮ ಹೋರಾಟಕ್ಕಿದೆ. ಆದ್ದರಿಂದ ಎಲ್‌ಐಸಿ-ಐಡಿಬಿಐ ಬ್ಯಾಂಕ್ ವ್ಯವಹಾರವನ್ನೂ ಸೋಲಿಸುವ ಹೋರಾಟಕ್ಕೆ ನಾವು ಸಿದ್ಧರಾಗಬೇಕಿದೆ. ನರೇಂದ್ರ ಮೋದಿಯವರೇನೂ ಅಜೇಯರಲ್ಲ ! ಕಾರ್ಮಿಕ ವರ್ಗದ ಹೋರಾಟ ಎಂದೂ ಸೋತಿಲ್ಲ.

ದೇಶದಲ್ಲಿ ಮೋಸ, ವಂಚನೆ ಪ್ರಕರಣಗಳು ಹೆಚ್ಚುತ್ತಿವೆ. ರೂಪಾಯಿಯ ಮೌಲ್ಯ ಶರವೇಗದಲ್ಲಿ ಕುಸಿಯುತ್ತಿದೆ. ಇದರಿಂದಾಗಿ ನಮ್ಮ ದೇಶದಲ್ಲಿ ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಗಳು ಗಗನಕ್ಕೇರುತ್ತಿವೆ. ಸಾರಿಗೆ ದರಗಳು ಹೆಚ್ಚಿ ಆಹಾರ ಧಾನ್ಯಗಳ, ಅಗತ್ಯ ವಸ್ತುಗಳ ಬೆಲೆಗಳು ವಿಪರೀತವಾಗಿ ಹೆಚ್ಚಿವೆ. ಇದಾವುದರ ಬಗ್ಗೆಯೂ ಸರ್ಕಾರದಿಂದ ಯಾವ ಪ್ರತಿಕ್ರಿಯೆಯೂ ಬಂದಿಲ್ಲ. ರಾಮನ ಗುಡಿಯನ್ನು ಅಲ್ಲಿಯೇ ಕಟ್ಟುತ್ತೇವೆ, ೨೦೧೯ರ

| ಹಣಕಾಸು ವರ್ಷ | ಒಟ್ಟು ಬಂಡವಾಳ | ಒಟ್ಟು ಎನ್‌ಪಿಎ | ಎನ್‌ಪಿಎಗಾಗಿ ಕಾದಿರಿಸಿದ ಮೊತ್ತ | ನಿವ್ವಳ ಬಂಡವಾಳ ಹೂಡಿಕೆ | ಎನ್‌ಪಿಎ ನಿವ್ವಳ ಮೊತ್ತ | ಎನ್‌ಪಿಎ ಒಟ್ಟು ಮೊತ್ತ | ಎನ್‌ಪಿಎ ನಿವ್ವಳ ಮೊತ್ತ |
|---|---|---|---|---|---|---|---|
| ೨೦೧೧-೧೨ | ೨,೯೬,೩೨೫ | ೩,೬೯೨ | ೧,೯೩೨ | ೨,೯೪,೩೯೩ | ೧,೭೫೯ | ೧.೨೫ | ೦.೬೦ |
| ೨೦೧೨-೧೩ | ೩,೨೩,೨೨೫ | ೬,೯೫೨ | ೩,೪೧೪ | ೩,೧೯,೮೧೧ | ೩,೫೩೮ | ೨.೧೫ | ೧.೧೧ |
| ೨೦೧೩-೧೪ | ೩,೪೬,೮೦೩ | ೮,೪೬೫ | ೫,೪೪೨ | ೩,೪೧,೩೬೧ | ೩,೦೨೩ | ೨.೪೪ | ೦.೮೯ |
| ೨೦೧೪-೧೫ | ೩,೭೦,೬೨೬ | ೧೨,೨೧೩ | ೬,೪೬೩ | ೩,೬೪,೧೬೩ | ೫,೭೫೦ | ೩.೩೦ | ೧.೫೮ |
| ೨೦೧೫-೧೬ | ೩,೭೯,೩೭೬ | ೧೪,೨೮೩ | ೭,೪೫೫ | ೩,೭೧,೯೨೦ | ೬,೮೨೭ | ೩.೭೬ | ೧.೮೪ |
| ೨೦೧೬-೧೭ | ೩,೮೪,೧೫೫ | ೧೮,೧೭೩ | ೧೦,೮೫೨ | ೩,೭೩,೩೦೩ | ೭,೩೨೧ | ೪.೭೩ | ೧.೯೬ |

ಸಾರ್ವತ್ರಿಕ ಚುನಾವಣೆಗಳಲ್ಲಿ ಮತ್ತೊಮ್ಮೆ ಆರಿಸಿ ಬಂದು ಆಡಳಿತ ನಡೆಸುತ್ತೇವೆ, ರಾಮರಾಜ್ಯದ ಕನಸು ನನಸಾಗುವುದು, ೨೦೨೨ ಮೋದಿಯವರ ನೇತೃತ್ವದಲ್ಲಿ ಹೊಸ ಭಾರತವನ್ನು ನಿರ್ಮಾಣ ಮಾಡುತ್ತೇವೆ, ಇವೇ ಮುಂತಾದ ಮಾತುಗಳನ್ನು ಆರೆಸ್ಸೆಸ್ ನಾಯಕತ್ವದ ಭಾಜಪ ಹೇಳುತ್ತಿದೆ. ಮೋದಿ ಬ್ರ್ಯಾಂಡ್ ರಾಮರಾಜ್ಯ ಇಲ್ಲಿ ಯಾರಿಗೂ ಬೇಕಾಗಿಲ್ಲ! ಯೋಜನಾ ಮಂಡಲಿಯನ್ನು ರದ್ದುಮಾಡಿ ಅದರ ಜಾಗದಲ್ಲಿ ನೀತಿ ಆಯೋಗವನ್ನು ರಚಿಸಲಾಗಿದೆ. ಅನೀತಿಯಿಂದ ಕೂಡಿದ ನೀತಿ ಆಯೋಗ ದೇಶಿ ಹಾಗೂ ವಿದೇಶಿ ಬಂಡವಾಳಗಾರರ ದಳ್ಳಾಳಿಯಾಗಿ ಕೆಲಸ ಮಾಡುತ್ತಿದೆ. ಲಂಗುಲಗಾಮಿಲ್ಲದ ಮಾರುಕಟ್ಟೆ ಆರ್ಥಿಕ ಉದಾರೀಕರಣ ನೀತಿಗಳ ಪಾಲನೆಯಿಂದ, ಅಂತರ ರಾಷ್ಟ್ರೀಯ ಬಂಡವಾಳಗಾರರಿಗೆ ನಮ್ಮ ದೇಶವನ್ನೇ ಮಾರುವ ಕಾರ್ಯಾಚರಣೆಗಳಲ್ಲಿ ಭಾಜಪ ತೊಡಗಿದೆ.

ಸ್ವಾತಂತ್ರ್ಯದ ನಂತರ ಎಲ್‌ಐಸಿಯಲ್ಲಿ ಒಂದು ಆರ್ಥಿಕ ಹಗರಣ ಜರುಗಿತು. ಇವತ್ತಿನ ಸಂದರ್ಭದಲ್ಲಿ ಆ ಅಹಿತಕರ ಘಟನೆ ಮತ್ತು ಅದರ ಬೆನ್ನಲ್ಲೇ ನಡೆದ ವಿದ್ಯಮಾನಗಳು ಮಹತ್ವಪೂರ್ಣವೆನಿಸುತ್ತವೆ.

ಎಲ್‌ಐಸಿ ಪ್ರಾರಂಭವಾಗಿ ಒಂದು ವರ್ಷದ ನಂತರ, ಅಂದರೆ, ೧೯೫೭ರಲ್ಲಿ "ಮುಂದ್ರಾ ಹಗರಣ" ಜರುಗಿತು. ಹರಿದಾಸ್ ಮುಂದ್ರ ಎಂಬುವನು ಕಲ್ಕತ್ತೆಯ ಒಬ್ಬ ಉದ್ಯೋಗಪತಿ ಮತ್ತು ಶೇರ್ ಮಾರ್ಕೆಟ್ ದಳ್ಳಾಳಿ. ಆತನಿಗೆ ಕೇಂದ್ರ ಸರ್ಕಾರದ ಹಣಕಾಸಿನ ಮಂತ್ರಾಲಯದಲ್ಲಿ ಸಾಕಷ್ಟು ಪ್ರಭಾವವಿತ್ತು. ಅದನ್ನು ಬಳಸಿ, ಮುಗ್ಗಟ್ಟಿನಲ್ಲಿದ್ದ ತನ್ನ ಆರು ಉದ್ಯೋಗಗಳಲ್ಲಿ ಎಲ್‌ಐಸಿ ಒಂದು ಕೋಟಿ ಇಪ್ಪತ್ತಾರು ಲಕ್ಷ ರೂಪಾಯಿಗಳನ್ನು ಬಂಡವಾಳವಾಗಿ ಹೂಡಿಸುವುದರಲ್ಲಿ ಯಶಸ್ವಿಯಾದ. ಈ ಮೊತ್ತದ ಹಣವನ್ನು ಮುಂದ್ರನ ಉದ್ಯೋಗಗಳಲ್ಲಿ ಹೂಡಬೇಕೆಂಬ ಆದೇಶ ಕೇಂದ್ರ ಹಣಕಾಸು ಸಚಿವಾಲಯದಿಂದ ಎಲ್‌ಐಸಿಗೆ ನೀಡ ಲಾಗಿತ್ತು. ಈ ಬಂಡವಾಳ ಹೂಡಿಕೆ ಕುರಿತು ಎಲ್‌ಐಸಿಯ ಇನ್‌ವೆಸ್ಟ್‌ಮೆಂಟ್ ಕಮಿಟಿಯಿಂದ ಅನುಮೋದನೆಯನ್ನು ಪಡೆಯಲಿಲ್ಲ. ಅಂದು ಹಣಕಾಸಿನ ಮಂತ್ರಿಯಾಗಿದ್ದವರು ಶ್ರೀ ಟಿ. ಟಿ. ಕೃಷ್ಣಮಾಚಾರಿ ಮತ್ತು ಅಂದು ಹಣಕಾಸಿನ ಕಾರ್ಯದರ್ಶಿಯಾಗಿದ್ದವರು ಶ್ರೀ ಎಚ್. ಎಂ. ಪಟೇಲ್ (ಇದೇ ಎಚ್.ಎಂ. ಪಟೇಲ್ ಅಲ್ಪ ಅವಧಿಗೆ ಎಲ್‌ಐಸಿಯ ಅಧ್ಯಕ್ಷರಾಗಿ ಅಧಿಕಾರ ವಹಿಸಿದ್ದರು. ತುರ್ತು ಪರಿಸ್ಥಿತಿಯ ನಂತರ ಶ್ರೀಮತಿ ಇಂದಿರಾ ಗಾಂಧಿಯವರ ಕಾಂಗ್ರೆಸ್ ಪಕ್ಷ ಚುನಾವಣೆಗಳಲ್ಲಿ ಪ್ರಚಂಡ ಸೋಲನ್ನನುಭವಿಸಿ, ಜನತಾ ಪಕ್ಷ ಅಧಿಕಾರಕ್ಕೆ ಬಂದಾಗ, ಎಚ್. ಎಂ. ಪಟೇಲ್ ಹಣಕಾಸಿನ ಮಂತ್ರಿಯಾಗಿದ್ದರು). ಮುಂದ್ರಾ ಉದ್ಯೋಗಗಳಲ್ಲಿ ಎಲ್‌ಐಸಿ ಅಕ್ರಮವಾಗಿ ಹೂಡಿದ ೧.೨೬ ಕೋಟಿ ರೂಪಾಯಿಗಳ ಬಂಡವಾಳದ ವಿಚಾರ ಸುದ್ದಿ ಮಾಧ್ಯಮಗಳಲ್ಲಿ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿತು. ಪಾರ್ಲಿಮೆಂಟಿನಲ್ಲಿ ದೊಡ್ಡ ಗಲಭೆಯೇ ನಡೆಯಿತು. ಇದರ ಬಗ್ಗೆ ಅತ್ಯಂತ ಪರಿಣಾಮಕಾರಿಯಾಗಿಯೂ, ಆಕ್ರೋಶದಿಂದಲೂ ಮಾತನಾಡಿದವರು ಶ್ರೀ ಫಿರೋಜ್ ಗಾಂಧಿ. ಕಾಂಗ್ರೆಸ್ ಪಕ್ಷದ ಸಂಸದರಾಗಿದ್ದ ಫಿರೋಜ್ ಗಾಂಧಿ ಯವರು ಶ್ರೀಮತಿ ಇಂದಿರಾ ಪ್ರಿಯದರ್ಶಿನಿ (ನಂತರದ ಇಂದಿರಾ ಗಾಂಧಿ)ಯವರ ಪತಿ ಮತ್ತು ನೆಹರೂರವರ ಅಳಿಯ. ನೆಹರೂರವರ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡ ಫಿರೋಜ್ ಗಾಂಧಿಯವರು ನ್ಯಾಯಾಂಗ ತನಿಖೆಗೆ ಆಗ್ರಹಿಸಿದರು. ಸಂಯಮವನ್ನು ಪಾಲಿಸಿದ ಪ್ರಧಾನಿ ನೆಹರು ನ್ಯಾಯಾಂಗ ತನಿಖೆಗೆ ಒಳಪಡಿಸಿದರು. ಬಾಂಬೆ ಹೈಕೋರ್ಟಿನ ನಿವೃತ್ತ ಮುಖ್ಯ ನ್ಯಾಯಾಧೀಶ ಎಂ. ಸಿ. ಚಾಗ್ಲಾ ಅವರನ್ನು ತನಿಖೆಗೆ ನೇಮಕ ಮಾಡಿದರು. ಚಾಗ್ಲಾ ತಮ್ಮ ತನಿಖೆಯನ್ನು ಕೇವಲ ೨೪ ದಿನಗಳಲ್ಲಿ ಪೂರೈಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದರು. ತನಿಖೆ ಪಬ್ಲಿಕ್ ಆಗಿ ಎಲ್ಲರಿಗೂ ಗೋಚರಿಸುವ ರೀತಿಯಲ್ಲಿ ನಡೆಯಿತು. ಚಾಗ್ಲಾ ತಮ್ಮ ವರದಿಯಲ್ಲಿ ಹಣಕಾಸು ಮಂತ್ರಿ ತಪ್ಪು ಮಾಡಿದ್ದಾರೆಂಬ ತೀರ್ಪನ್ನು ಪ್ರಕಟಿಸಿದರು. ಅದರ ಪರಿಣಾಮವಾಗಿ ಕೇಂದ್ರ ಹಣಕಾಸು ಮಂತ್ರಿ ಟಿ. ಟಿ. ಕೃಷ್ಣಮಾಚಾರಿಯವರು ತಮ್ಮ ಪದವಿಗೆ ಫೆಬ್ರವರಿ ೧೮, ೧೯೫೮ರಲ್ಲಿ ರಾಜೀನಾಮೆ ಸಲ್ಲಿಸಿ ಕೆಳಗಿಳಿದರು. ಇನ್ನು ಹರಿದಾಸ್ ಮುಂದ್ರನನ್ನು ಆರೋಪಿ ಎಂದು ಗುರುತಿಸಲಾಗಿ, ಆತನಿಗೆ ದೀರ್ಘಾವಧಿ ಕಾರಾಗೃಹ ಶಿಕ್ಷೆಯನ್ನು ವಿಧಿಸಲಾಯ್ತು.

ನೆಹರೂರವರ ದಿಟ್ಟತನ, ಸಮತೋಲನದ ದೃಷ್ಟಿಕೋನ, ಆಡಳಿತ ದಕ್ಷತೆ ಹಾಗೂ ಪ್ರಾಮಾಣಿಕತೆಗೆ ಮುಂದ್ರಾ ಹಗರಣ ಸಾಕ್ಷಿಯಾಯಿತು. ನ್ಯಾಯಾಂಗ ತನಿಖೆಯ ಶೀಘ್ರಗತಿ, ಪಾರದರ್ಶಕತೆ, ನ್ಯಾಯಪರ ವರದಿ, ಆರೋಪಿಗೆ ವಿಧಿಸಿದ ಶಿಕ್ಷೆ, ಪದವಿ ತ್ಯಾಗ ಮಾಡಿದ ಮಂತ್ರಿ ಇವೇ ಮುಂತಾದ ವಿಚಾರಗಳು ನಮ್ಮ ದೇಶದ ಪಾರ್ಲಿಮೆಂಟಿನ ಗೌರವವನ್ನು ಹಾಗೂ ಘನತೆಯನ್ನು ಹೆಚ್ಚಿಸಿದವು.

ಮುಂದ್ರಾ ಹಗರಣವನ್ನು ಇವತ್ತಿನ ಸಂದರ್ಭದಲ್ಲಿ ಸರಿದೂಗಿಸಿ ನೋಡಿದಾಗ ವಿಸ್ಮಯವಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಹತ್ತು ಹಲವಾರು ಹಗರಣಗಳು ನಡೆದುಹೋಗಿವೆ. ನೂರಾರು ಲಕ್ಷಾಂತರ ಕೋಟಿ ಹಣವನ್ನು ಗುಳುಂ ಮಾಡಲಾಗಿದೆ. ಮುಂದ್ರಾ ಹಗರಣದಲ್ಲಿ ಸಿಲುಕಿದ ಮೊತ್ತ ಕೇವಲ ೧.೨೬ ಕೋಟಿ ರೂಪಾಯಿಗಳು. ಇವತ್ತಿಗೆ ಬೆಂಗಳೂರಿನಂತಹ ನಗರಗಳಲ್ಲಿ ಪ್ರತಿಷ್ಠಿತ ನಗರ ಪ್ರದೇಶದಲ್ಲಿ ಖಾಲಿ ನಿವೇಶನವೂ ಸಹ ಈ ಹಣಕ್ಕೆ ದೊರೆಯುವುದಿಲ್ಲ! ೧೯೯೨ರಲ್ಲಿ ನಡೆದ ಹರ್ಷದ್ ಮೆಹ್ತಾ – ಸ್ಟೇಟ್ ಬ್ಯಾಂಕ್ ಹಗರಣದಲ್ಲಿ ಸಿಲುಕಿದ ಹಣ ರೂ. ೪೦೦ ಕೋಟಿ. ಮೊನ್ನೆ ನಡೆದ ನೀರವ್ ಮೋದಿ – ಪಂಜಾಬ್ ನ್ಯಾಷನಲ್ ಬ್ಯಾಂಕ್ ಹಗರಣದಲ್ಲಿ ಕಳೆದುಕೊಂಡ ಹಣ ರೂ. ೧೪,೦೦೦ ಸಾವಿರ ಕೋಟಿ. ಹಣಕಾಸಿನ ವ್ಯವಸ್ಥೆಗೆ ಉಂಟಾದ ನಷ್ಟ ರೂ. ೬೦,೦೦೦ ಕೋಟಿಗಿಂತಲೂ ಹೆಚ್ಚು. ದೇಶದಲ್ಲಿರುವ ಕಪ್ಪುಹಣದ ಮೊತ್ತ ಸುಮಾರು ರೂ. ೯೦,೦೦೦ ಕೋಟಿ ಇರಬಹುದೆಂದು ಅಂದಾಜಿಸಲಾಗಿದೆ. ಹೀಗೆ ಹೇಳುತ್ತಾ ಹೋದರೆ ಪಟ್ಟಿ ಹನುಮಂತನ ಬಾಲದಂತೆ ಬೆಳೆಯುತ್ತಲೇ ಹೋಗುತ್ತದೆ. ಒಂದೇ ಒಂದು ಪ್ರಕರಣದ ಬಗ್ಗೆಯೂ ಶಿಸ್ತಿನಿಂದ ಕೂಡಿದ ನ್ಯಾಯಪರ ವರದಿ ಪ್ರಕಟವಾಗಲಿಲ್ಲ. ಮತ್ತು ಅಪರಾಧಿಗಳಿಗೆ ಶಿಕ್ಷೆ ವಿಧಿಸಲಿಲ್ಲ. ಫ್ರಾನ್ಸ್ ಜೊತೆಗೆ ರಫೇಲ್ ಜೆಟ್ ಫೈಟರ್ ವಿಮಾನಗಳ ಬಗ್ಗೆ ಮಾಡಿಕೊಂಡ ಒಪ್ಪಂದದ ಕುರಿತು ಮಾಹಿತಿಯನ್ನು ನೀಡಲು ಕೇಂದ್ರ ಸರ್ಕಾರ ನಿರಾಕರಿಸಿದೆ. ಇದು ಇಂದಿನ ಭಾರತದ ಪರಿಸ್ಥಿತಿ.

ಎಲ್‌ಐಸಿ, ಸಾರ್ವಜನಿಕ ಕ್ಷೇತ್ರದ ಬ್ಯಾಂಕ್ ಮತ್ತು ಸಾಮಾನ್ಯ ವಿಮಾ ಕಂಪನಿಗಳು ನಮ್ಮ ದೇಶದ ಆರ್ಥಿಕತೆಗೆ ಬೆನ್ನೆಲುಬು. ದೇಶದ ಸ್ವಾಯತತ್ತೆ, ಸ್ವಾವಲಂಬನೆ ಮತ್ತು ಸಾರ್ವಭೌಮತ್ವದ ಪ್ರತೀಕ. ಅವುಗಳನ್ನು ನಾಶಮಾಡಲು ಬಿಡಬಾರದು. ಎಲ್‌ಐಸಿಯ ಹಣ ಅದರ ೩೦ ಕೋಟಿ ಪಾಲಿಸಿದಾರರ ಹಣ. ಅವರ ಆಸ್ತಿ. ಅದನ್ನು ಪೋಲು ಮಾಡುವುದಕ್ಕೆ ಎಡೆಮಾಡಿ ಕೊಡಬಾರದು. ಎಲ್‌ಐಸಿ – ಐಡಿಬಿಐ ವ್ಯವಹಾರವನ್ನು ರದ್ದುಗೊಳಿಸಬೇಕು. ಸಾರ್ವಜನಿಕ ಕ್ಷೇತ್ರದ ಹಣಕಾಸು ವಲಯವನ್ನು ಖಾಸಗೀಕರಿಸುವುದಕ್ಕೆ ಬಿಡಬಾರದು.

ಆಲ್ ಇಂಡಿಯಾ ಐಡಿಬಿಐ ಬ್ಯಾಂಕ್ ಆಫೀಸರ್ಸ್ ಅಸೋಸಿಯೇಶನ್ (AIIDBIOA) ಎಲ್‌ಐಸಿ–ಐಡಿಬಿಐ ಬ್ಯಾಂಕಿನ ಶೇಕಡ ೫೧ ಶೇರ್ ವ್ಯವಹಾರ ಕುರಿತು ಕೇಂದ್ರ ಸರ್ಕಾರದ ವಿರುದ್ಧ ದೆಹಲಿ ಹೈಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿದೆ. ಕೇಸ್ ದಾಖಲಿಸಿದೆ. ಸದ್ಯಕ್ಕೆ ಐಡಿಬಿಐ ಬ್ಯಾಂಕಿನಲ್ಲಿ ಕೇಂದ್ರ ಸರ್ಕಾರದ ಬಂಡವಾಳ ಶೇಕಡ ೬೬ರಷ್ಟಿದೆ. ಅದರಲ್ಲಿ ಶೇಕಡ ೫೧ರಷ್ಟು ಬಂಡವಾಳವನ್ನು ಎಲ್‌ಐಸಿಗೆ ವರ್ಗಾಯಿಸಲು ಕೇಂದ್ರ ಸರ್ಕಾರ ತೀರ್ಮಾನಿಸಿದೆ. ೨೦೦೫ರ ಡಿಸೆಂಬರ್ ೮ರಂದು, ಆಗಿನ ಎನ್‌ಡಿಎ ಸರ್ಕಾರದ ಹಣಕಾಸಿನ ಮಂತ್ರಿ ಜಸ್‌ವಂತ್ ಸಿಂಗ್‌ರವರು ಪಾರ್ಲಿಮೆಂಟಿನಲ್ಲಿ, "ಯಾವುದೇ ಕಾರಣಕ್ಕೂ, ಯಾವುದೇ ಕಾಲದಲ್ಲಿಯೂ, ಐಡಿಬಿಐ ಬ್ಯಾಂಕ್‌ನಲ್ಲಿ ಕೇಂದ್ರ ಸರ್ಕಾರದ ಬಂಡವಾಳ ಶೇಕಡ ೫೧ಕ್ಕಿಂತ ಕಡಿಮೆಯಾಗುವುದಿಲ್ಲ" ಎಂಬ ಭರವಸೆ ನೀಡಿದ್ದರು. ಆದರೆ ಇಂದು ಅದೇ ಭಾಜಪ ನೇತೃತ್ವದ ಎನ್‌ಡಿಎ ಸರ್ಕಾರ ೨೦೦೫ರಲ್ಲಿ ನೀಡಿದ್ದ ತನ್ನ ಮಹತ್ವಪೂರ್ಣ ಮತ್ತು ಘನವಾದ ಭರವಸೆಯನ್ನು ಗಾಳಿಗೆ ತೂರಿ ಐಡಿಬಿಐ ಬ್ಯಾಂಕಿನಲ್ಲಿ ತನ್ನ ಬಂಡವಾಳವನ್ನು ಶೇಕಡ ೫೦ಕ್ಕಿಂತ ಕಡಿಮೆ ಮಾಡಿಕೊಳ್ಳಲು ಮುಂದಾಗಿದೆ! ಇದು ಐಡಿಬಿಐ ಬ್ಯಾಂಕನ್ನು ಖಾಸಗೀಕರಿಸುವ ಪ್ರಯತ್ನ ಎಂಬುದಾಗಿ ಬ್ಯಾಂಕ್‌ನ ಅಧಿಕಾರಿಗಳ ಮತ್ತು ನೌಕರರ ಆಕ್ರೋಶ. ಈ ಕಾನೂನು ಹೋರಾಟದ ಫಲಿತಾಂಶವನ್ನು ಕಾದು ನೋಡಬೇಕಾಗಿದೆ.

**ನ. ಸುಂದರಮೂರ್ತಿ**

೧೪, ೬ನೇ ಅಡ್ಡರಸ್ತೆ, ಶ್ರೀರಾಂಪುರ, ಬೆಂಗಳೂರು–೫೬೦೦೨೧

**ಅಭಿನಂದನೆ.....**

ಶರಣ ಸಂಸ್ಕೃತಿಯವರು ನೀಡುವ 'ಮುರುಘಾಶ್ರೀ' ಪ್ರಶಸ್ತಿಯು ಸಾಹಿತಿ ಡಾ॥ ಮೂಡ್ನಾಕೂಡು ಚಿನ್ನಸ್ವಾಮಿ ಅವರಿಗೆ ಲಭಿಸಿದೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.

ಗಾಂಧಿ ಮತ್ತು ಸಿನಿಮಾ ಸಂಬಂಧ ಬಹಳ ಸ್ವಾರಸ್ಯಕರವಾದುದು. ತನ್ನ 'ಹಿಂದ್ ಸ್ವರಾಜ್' ಕೃತಿಯಲ್ಲಿ ಸಿನಿಮಾವನ್ನು ಸೇರಿದಂತೆ ಯಂತ್ರ ನಾಗರಿಕತೆಯ ಹಲವಾರು ಅವತಾರಗಳ ಬಗೆಗೆ ತಕರಾರನ್ನು ತೆಗೆದ ಗಾಂಧಿ ಸಿನಿಮಾವನ್ನು ಆಧುನಿಕತೆ ಒದಗಿಸಿದ ಕೇಡೆಂದೇ ಬಗೆದಿದ್ದರು. ತನ್ನ ಇಡೀ ಜೀವಮಾನದಲ್ಲಿ ಆತ ನೋಡಿದ್ದು ರಷ್ಯಾದ 'ಮಿಶನ್ ಟು ಮಾಸ್ಕೋ' (೧೯೪೩) ಮತ್ತು ಮುಂಬೈನ ಮಿತ್ರ ವಿಜಯ ಭಟ್ ನಿರ್ದೇಶಿಸಿದ ರಾಮರಾಜ್ಯ ಎನ್ನುವ ಸಿನಿಮಾವನ್ನು. ಆದರೂ ಆತ ನೋಡಿದ್ದು ಅರ್ಧ ಸಿನಿಮಾವನ್ನಷ್ಟೇ. ಗಾಂಧಿ ತನ್ನ ಸ್ನೇಹಿತ ವಿಜಯ್ ಭಟ್‌ರವರಲ್ಲಿ ವೈಷ್ಣವ ಜನತೋವನ್ನು ಬರೆದ ಗುಜರಾತಿ ವೈಷ್ಣವ ಸಂತ ನರಸೀ ಮೆಹತಾ ಬಗೆಗೆ ಸಿನಿಮಾವನ್ನು ಮಾಡಲು ಸೂಚಿಸಿದ್ದರು. ಭಟ್ ಸುಮಾರು ೧೯೪೦ರಲ್ಲಿ ಈ 'ನನಗೆ ಸಂದರ್ಶನ ನೀಡಬೇಕೆಂಬ ಮನಸ್ಸಿದ್ದರೂ ಕೂಡ, ನೀಡುವ ಯೋಗ್ಯತೆ ನನ್ನಲ್ಲಿಲ್ಲ. ಸಿನಿಮಾ ನನಗೆ ತೀರಾ ಅಪರಿಚಿತ. ಆದರೆ ಸಿನಿಮಾವು ಕೆಡುಕನ್ನು ಸಾಧಿಸುತ್ತಿದೆ. ಒಂದು ವೇಳೆ ಅದು ಒಳ್ಳೆಯದನ್ನು ಏನಾದರೂ ಮಾಡಿದ್ದರೆ ಅದು ಇನ್ನಷ್ಟೇ ತಿಳಿಯಬೇಕಷ್ಟೇ' ಎಂದಿದ್ದರು. ಆಗಿನ ಪ್ರಸಿದ್ಧ ನಿರ್ದೇಶಕ ಕೆ. ಎ. ಅಬ್ಬಾಸ್ ಆ ಕಾಲದ ಪ್ರಸಿದ್ಧ ಸಿನಿಮಾ ಪತ್ರಿಕೆಯಾಗಿದ್ದ 'ಫಿಲ್ಮ್ ಇಂಡಿಯಾ'ದಲ್ಲಿ, 'ಗಾಂಧಿ ಯಾವ ರೀತಿಯ ಜ್ಞಾನದ ಹಿನ್ನೆಲೆ ಮತ್ತು ಆಧಾರದ ಮೇಲೆ ಸಿನಿಮಾದ ಮೇಲೆ ಈ ರೀತಿಯ ಜ್ಞಾನರಹಿತ ಮತ್ತು ಪೂರ್ವಾಗ್ರಹದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೋ ನಾನು ಕಾಣೆ' ಎನ್ನುತ್ತಾರೆ.

ಗಾಂಧಿ ಮತ್ತು ಪ್ರಸಿದ್ಧ ಸಿನಿಮಾ ನಟ-ನಿರ್ದೇಶಕ ಚಾರ್ಲಿ ಚಾಪ್ಲಿನ್ ಭೇಟಿ ಕೂಡ ಗಾಂಧಿಯ ಆಸಕ್ತಿ ಮತ್ತು ಉತ್ಸುಕತೆಯಿಂದ ಉಂಟಾದುದೇನೂ ಅಲ್ಲ. ಯಂತ್ರ ನಾಗರಿಕತೆ ಆವರಿಸುವುದು ಮತ್ತು ಪ್ರಕೃತಿಯ ಶೋಷಣೆ ಮೊದಲಾದ ವಿಚಾರಗಳ, ಚರ್ಚೆಯ ಸಿನಿಮಾ ಎರಕದಂತೆ ಚಾಪ್ಲಿನ್‌ನ 'ಮಾಡರ್ನ್ ಟೈಮ್ಸ್' ಕಂಡುಬರುತ್ತದೆ.

ಸಿನಿಮಾರಂಗ ಮೊದಲಿನಿಂದಲೂ ಕೂಡ ಗಾಂಧಿಯ ಬಗೆಗೆ ಒಂದು ರೀತಿಯ ತೀರದ ಕುತೂಹಲವನ್ನು ಹೊಂದಿತ್ತು. ಮೊತ್ತಮೊದಲಿಗೆ ಸುಮಾರು ೧೯೨೨ರಲ್ಲಿ 'ಗಾಂಧಿ ನೌ ಕಂಡೆಮ್ನ್‌ಡ್ ಟು ಸಿಕ್ಸ್ ಈಯರ್ಸ್ ಇಂಪ್ರಿಸನ್‌ಮೆಂಟ್' ಎಂಬ ನ್ಯೂಸ್ ರೀಲ್ ಒಂದರಲ್ಲಿ ಬ್ರಿಟಿಷ್ ಸಂಸ್ಥೆ 'ಫ್ಹಾತೆ' ಚಿತ್ರಿಸಿತ್ತು. ಸುಮಾರು ೧೯೩೨ರ ಹೊತ್ತಿನ ಪೂನಾ ಫ್ಯಾಕ್ಟ್ ಆಸುಪಾಸಿನ, 'ಗಾಂಧಿ ಫಾಸ್ಟ್ ಬ್ರಿಂಗ್ಸ್ ನ್ಯೂ ಇಂಡಿಯನ್ ಕ್ರೈಸಿಸ್' ಎರಡನೇ ನ್ಯೂಸ್ ರೀಲ್ ಆಗಿತ್ತು. ೧೯೩೨ರಲ್ಲಿ ಅಮೇರಿಕನ್ ನ್ಯೂಸ್‌ರೀಲ್

# ಗಾಂಧಿ ಮತ್ತು ಸಿನಿಮಾ

**ಇಂಡಿಯನ್ ಸಿನಿಮಾಟೋಗ್ರಾಫ್ ಕಮಿಟಿ (ಐ.ಸಿ.ಸಿ)ಯನ್ನು ರಚಿಸಿ ಭಾರತದಲ್ಲಿನ ಸಿನಿಮಾ ಪ್ರದರ್ಶನದ ಕುರಿತು ಪ್ರಶ್ನಾವಳಿ ಅಥವಾ ಕ್ವಶ್ಚನೇರ್‌ಗಳ ಮುಖಾಂತರ ವಿಚಾರಣೆ ಮತ್ತು ಅಭಿಪ್ರಾಯವನ್ನು ಸಂಗ್ರಹಿಸುವ ಕೆಲಸವನ್ನು ಮಾಡಿತ್ತು. ಈ ಸಮಿತಿಯು ಗಾಂಧಿಯ ಸಂದರ್ಶನವನ್ನು ಬಯಸಿದಾಗ ಗಾಂಧಿಯು, 'ನನಗೆ ಸಂದರ್ಶನ ನೀಡಬೇಕೆಂಬ ಮನಸ್ಸಿದ್ದರೂ ಕೂಡ, ನೀಡುವ ಯೋಗ್ಯತೆ ನನ್ನಲ್ಲಿಲ್ಲ. ಸಿನಿಮಾ ನನಗೆ ತೀರಾ ಅಪರಿಚಿತ. ಆದರೆ ಸಿನಿಮಾವು ಕೆಡುಕನ್ನು ಸಾಧಿಸುತ್ತಿದೆ. ಒಂದು ವೇಳೆ ಅದು ಒಳ್ಳೆಯದನ್ನು ಏನಾದರೂ ಮಾಡಿದ್ದರೆ ಅದು ಇನ್ನಷ್ಟೇ ತಿಳಯಬೇಕಷ್ಟೇ' ಎಂದಿದ್ದರು.**




ಕಾರ್ಯವನ್ನು ಸಾಧಿಸಿದರಾದರೂ ಕೂಡ ಸ್ವತಂತ್ರ ಚಳುವಳಿಯ ಕೈಂಕರ್ಯ ಮತ್ತು ಮುಂಚೂಣಿತನವು ಈ ಸಿನಿಮಾವನ್ನು ನೋಡಲು ತುಸು ಸಮಯವನ್ನೂ ನೀಡದಂತೆ ಮಾಡಿತು. ಗಾಂಧಿಯ ಒಂದು ಹಂತದ ಆದರ್ಶವೇ ಆಗಿದ್ದ ಹರಿಶ್ಚಂದ್ರನ ಕಥೆ ಆಧಾರಿತ ಡಿ. ಜಿ. ಫಾಲ್ಕೆಯವರ 'ರಾಜಾ ಹರಿಶ್ಚಂದ್ರ'ವನ್ನು ಕೂಡ ಗಾಂಧಿ ನೋಡಿರಲಿಲ್ಲವಾಗಿತ್ತು.

ಸುಮಾರು ೧೯೨೭-೨೮ರ ಅವಧಿಯಲ್ಲಿ ಅಂದಿನ ಬ್ರಿಟಿಷ್ ಸರ್ಕಾರವು ಮದ್ರಾಸ್ ಹೈಕೋರ್ಟ್‌ನ ನಿವೃತ್ತ ನ್ಯಾಯಾಧೀಶ ಟಿ. ರಂಗಾಚಾರಿಯರ್ ನೇತೃತ್ವದಲ್ಲಿ ಇಂಡಿಯನ್ ಸಿನಿಮಾಟೋಗ್ರಾಫ್ ಕಮಿಟಿ (ಐ.ಸಿ.ಸಿ)ಯನ್ನು ರಚಿಸಿ ಭಾರತದಲ್ಲಿನ ಸಿನಿಮಾ ಪ್ರದರ್ಶನದ ಕುರಿತು ಪ್ರಶ್ನಾವಳಿ ಅಥವಾ ಕ್ವಶ್ಚನೇರ್‌ಗಳ ಮುಖಾಂತರ ವಿಚಾರಣೆ ಮತ್ತು ಅಭಿಪ್ರಾಯವನ್ನು ಸಂಗ್ರಹಿಸುವ ಕೆಲಸವನ್ನು ಮಾಡಿತ್ತು. ಈ ಸಮಿತಿಯು ಗಾಂಧಿಯ ಸಂದರ್ಶನವನ್ನು ಬಯಸಿದಾಗ ಗಾಂಧಿಯು, ಗಾಂಧಿಯು ಚಾಪ್ಲಿನ್‌ನನ್ನು ಬರೀ ಒಬ್ಬ ಹಾಸ್ಯನಟ(ಕಾಮಿಕ್) ಎಂದೇ ತಿಳಿದಿದ್ದರು. ಆದರೆ ಭೇಟಿಯ ನಂತರವಷ್ಟೇ ಆತ ಆ ಕಾಲದ ಪ್ರಮುಖ ಕಾರ್ಮಿಕರ ನಾಯಕ ಮತ್ತು ಹೀರೊ ಎಂಬುದು ಗಾಂಧಿಗೆ ಅರಿವಾಯಿತು. ಲಂಡನ್‌ನ ದುಂಡು ಮೇಜಿನ ಸಭೆಯ ಸಂದರ್ಭದ ಈ ಭೇಟಿ ಬಗ್ಗೆ ಚಾಪ್ಲಿನ್‌ಗೆ ಮಾತ್ರ ಅತೀವ ಕುತೂಹಲ ಮತ್ತು ಆಸಕ್ತಿ ಇತ್ತು. ಆತ 'ಗಾಂಧಿಯೊಬ್ಬ ಅತ್ಯಂತ ಪ್ರಮುಖ ವ್ಯಕ್ತಿತ್ವ, ಆತನೊಬ್ಬ ಅಂತರರಾಷ್ಟ್ರೀಯ ವ್ಯಕ್ತಿ. ಇದಲ್ಲದೆ ಆತ ಬಹಳ ಪ್ರಮುಖ ನಾಟಕೀಯ ವ್ಯಕ್ತಿತ್ವ (ಡ್ರಾಮಾಟಿಕ್ ಫಿಗರ್) ಹೊಂದಿರುವಂಥವನು' ಎಂದಿದ್ದ. ತಾತ್ವಿಕವಾಗಿ ಗಾಂಧಿಯ ಹಿಂದ್ ಸ್ವರಾಜ್‌ನ ಯಂತ್ರ ನಾಗರಿಕತೆ, ಮಾನವನ ಪರಕೀಯತೆ, ಆಧುನಿಕತೆ ಮತ್ತದರ ಉಪ-ಉತ್ಪನ್ನಗಳು ಮನುಷ್ಯನನ್ನು ಕೊಳ್ಳುಬಾಕನನ್ನಾಗಿಸುವುದು, ಮನುಷ್ಯ ಕೇಂದ್ರವನ್ನು ಕಂಪೆನಿ ಫಾಕ್ಸ್ ಮೂವಿಟೋನ್ 'ಮಹಾತ್ಮ ಗಾಂಧಿ ಟಾಕ್ಸ್' ಎನ್ನುವುದನ್ನು ನಿರ್ಮಿಸಿತ್ತು. ಆಗ ಗಾಂಧಿ ವಾಸಿಸಿದ್ದ 'ಬೋರ್ಸಾದ್' ಗ್ರಾಮದಲ್ಲಿ ಚಿತ್ರೀಕರಣಕ್ಕಿಂತ ಮುಂಚೆ ಗಾಂಧಿ, 'ನನಗಿದೆಲ್ಲ ತೀರಾ ಇಷ್ಟವಾಗುವುದಿಲ್ಲ, ಆದರೂ ನಾನು ನನ್ನ ನಿಲುವನ್ನು ಪುನರ್ ಪರಿಶೀಲಿಸುತ್ತೇನೆ' ಎಂದಿದ್ದರು.

ಸುಮಾರು ೧೯೪೪ರ ಹೊತ್ತಿಗೆ ಅಮೇರಿಕಾದ 'ಫ್ಹಾತೇ ನ್ಯೂಸ್'ನಲ್ಲಿ ಕ್ಯಾಮರಾಮೆನ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಮದ್ರಾಸಿನ ಎ. ಕೆ. ಚೆಟ್ಟಿಯಾರ್ ಜಗತ್ತಿನ ಅನೇಕ ದೇಶಗಳನ್ನು ಸಂಚರಿಸಿ ಅಲ್ಲಿ ಗಾಂಧಿಯನ್ನು ಕುರಿತು ಚಿತ್ರೀಕರಿಸಿದ್ದ ಸುಮಾರು ೫೦,೦೦೦ ಅಡಿಯ ಫ್ಲೂಟೇಜ್ ಅಥವಾ ವೀಡಿಯೋವನ್ನು ಸಂಗ್ರಹಿಸಿ ೨೧ ನಿಮಿಷಗಳ ಕಾಲದ ಗಾಂಧಿ ಬಗೆಗಿನ ಮೊತ್ತಮೊದಲ ಡಾಕ್ಯುಮೆಂಟರಿ ಸಿನಿಮಾ, 'ಮಹಾತ್ಮ ಗಾಂಧಿ: ಟ್ವೆಂಟಿಯತ್ ಸೆಂಚುರಿ ಪ್ರೊಫೆಟ್'ಅನ್ನು ನಿರ್ಮಿಸಿದರು.

**ಪ್ರದೀಪ ಕುಮಾರ್ ಶೆಟ್ಟಿ, ಕೆಂಚನೂರು**

ಕೆ. ಎ. ಅಬ್ಬಾಸ್ ಅವರು ಈ ಡಾಕ್ಯುಮೆಂಟರಿ ಸಿನಿಮಾವನ್ನು 'ಜೋರಿಸ್ ಇವೆನ್ಸ್'ನ 'ದಿ ಸ್ಪಾನಿಷ್ ಅರ್ಥ್' ಮತ್ತು 'ಜಿಗಾ ವರ್ತೋವ್'ನ 'ತ್ರೀ ಸಾಂಗ್ಸ್ ಅಬೌಟ್ ಲೆನಿನ್' ಜತೆ ತೂಗಿ ನೋಡಿದ್ದರು. ಆ ಕಾಲದಲ್ಲಿ ಫಿಲ್ಮ್ ಇಂಡಿಯಾದಲ್ಲಿ ಅವರು ಮಾಡಿದ ಇದರ ಬಗೆಗಿನ ವಿಮರ್ಶೆಯಲ್ಲಿ, 'ಗಾಂಧಿ ನೋಡುವ ಮೊದಲ ಸಿನಿಮಾದಲ್ಲಿ ಗಾಂಧಿ ಪಾತ್ರದ ಪಾತ್ರಧಾರಿಯೇ ಗಾಂಧಿಯಾಗಿ ಇರುತ್ತಾರೆ' ಎಂದು ಬರೆದಿದ್ದರು.







೧೯೩೯ರಲ್ಲಿನ ಕ್ಯಾರಿ ಗ್ರಾಂಟ್, ವಿಕ್ಟರ್ ಮೆಕ್‌ಲೆನ್ ಮತ್ತು ಡಗ್ಲಾಸ್ ಫೈರ್‌ಬ್ಯಾಂಕ್ಸ್ ಜೂನಿಯರ್ ಅಭಿನಯದ ಸಾಹಸ ಪ್ರಧಾನ ಚಿತ್ರ ಹಾಲಿವುಡ್‌ನಲ್ಲಿ ಮೊದಲ ಬಾರಿಗೆ ಗಾಂಧಿಯನ್ನು ಚಿತ್ರಿಸಿತು. ಈ ಚಿತ್ರದ ನೀರು ಹೊರುವವ ಅಥವಾ ಬಿಷ್ತಿ ಸರಿಸುಮಾರು ಗಾಂಧಿ ಧರಿಸುತ್ತಿದ್ದ ಪೋಷಾಕನ್ನೇ ಧರಿಸಿದ್ದ. ಇದರ ವಿರುದ್ಧದ ಪಾತ್ರವಾದ ಖಳನಾಯಕ ಕೊಲೆಪಾತಕಿಯಾಗಿ ಗಾಂಧಿ ವಿರುದ್ಧದ ಪ್ರತಿಮೆಯಂತಿದ್ದ. ೧೯೩೫ರ ಇನ್ನೊಂದು ಸಿನಿಮಾ ಹಾಸ್ಯ ಪ್ರಧಾನವಾದ, 'ಎವರಿಬಡಿ ಲೈಕ್ಸ್ ಮ್ಯೂಸಿಕ್' ಸಿನಿಮಾವು ಗಾಂಧಿಯು ಪಾನಮತ್ತರಾಗಿ ಮಹಿಳೆಯ ಜತೆ ನರ್ತಿಸುತ್ತಿರುವಂತೆ ಚಿತ್ರಿಸಿತ್ತು. ಇವೆರಡನ್ನೂ ಕೂಡ ಆ ಕಾಲದ ಪತ್ರಿಕೆಗಳು ಮತ್ತು ಭಾರತೀಯರು ಕಟುವಾಗಿ ಟೀಕಿಸಿದ್ದರು. ೧೯೬೩ರ ಹಾಲಿವುಡ್ ಸಿನಿಮಾ 'ನೈನ್ ಅವರ್ಸ್ ಟು ರಾಮಾ' 'ಸ್ಟಾನ್ಲೀ ವೋಲ್ಪರ್'ನ ಕಾದಂಬರಿಯನ್ನು ಆಧರಿಸಿತ್ತು ಮತ್ತು ಗಾಂಧಿ ಹತ್ಯೆಯ ಸಂದರ್ಭದ ಕಾಲವನ್ನು ಆಧರಿಸಿತ್ತು. ಗಾಂಧಿ ಪಾತ್ರ ನಿರ್ವಹಿಸಿದ ಜೆ. ಎಸ್. ಕಶ್ಯಪ್ ಬಹು ಮನೋಜ್ಞವಾಗಿ ಇದರಲ್ಲಿ ಅಭಿನಯಿಸಿದ್ದರು. ಗಾಂಧಿ ಹತ್ಯೆಯ ಈ ಸಿನಿಮಾದ ದೃಶ್ಯವನ್ನೇ ಸಾಮಾಜಿಕ ಜಾಲತಾಣ ಮತ್ತಿತರ ಕಡೆ ನಿಜವಾದ ವೀಡಿಯೋ ಎಂಬಂತೆ ಇತ್ತೀಚೆಗೆ ಬಳಸಲಾಗುತ್ತಿದೆ.

ವಿಶ್ವದ ಮತ್ತು ಭಾರತೀಯ ಸಿನಿಮಾಗಳು ಗಾಂಧಿಯನ್ನು ಚಿತ್ರಿಸಿವೆ ಹಾಗೂ ವಸ್ತುವಾಗಿಸಿವೆ. ಗಾಂಧಿ ಬಗೆಗೆ ಒಂದು ಸಿನಿಮಾ ಮಾಡಬೇಕೆನ್ನುವುದು ಭಾರತೀಯರ ಮನಸ್ಸಿನಲ್ಲೂ ಇತ್ತು, ಬ್ರಿಟಿಷರಲ್ಲೂ ಇತ್ತು. ಬ್ರಿಟಿಷ್ ಸಾಮ್ರಾಜ್ಯಕ್ಕೆ ಗಾಂಧಿ ನೀಡುತ್ತಿದ್ದ ಸಂಕಟ ಮತ್ತು ಪ್ರತ್ಯುತ್ತರವನ್ನು ತಾಳಲಾರದೆ ೧೯೨೩ರಲ್ಲಿ ಬ್ರಿಟಿಷ್ ಸರ್ಕಾರ ಆಗಿನ ಪ್ರಸಿದ್ಧ ಅಮೆರಿಕನ್ ನಿರ್ದೇಶಕ 'ಡಿ.ಡಬ್ಲ್ಯು. ಗ್ರಿಫಿತ್' ಅವರಲ್ಲಿ ಒಂದು ಗಾಂಧಿ ವಿರೋಧಿ ಸಿನಿಮಾ ಮಾಡುವಂತೆ ಕೋರಿತ್ತು. ಆದರೆ ಗ್ರಿಫಿತ್ ಇದಕ್ಕೆ ಒಪ್ಪಿರಲಿಲ್ಲವಾಗಿತ್ತು. ಹಂಗೇರಿಯಾದ ನಿರ್ದೇಶಕ 'ಗೇಬ್ರಿಯಲ್ ಪ್ಯಾಸ್ಕಲ್' ಮತ್ತು ಇಂಗ್ಲಿಷ್ ನಿರ್ದೇಶಕ 'ಡೇವಿಡ್ ಲೀನ್'ಗೆ ಗಾಂಧಿ ಮೇಲೆ ಸಿನಿಮಾ ಮಾಡಬೇಕೆಂಬ ಮಹದಾಸೆ ಇದ್ದಿತ್ತು. ಲೀನ್ ಅಂತೂ ೧೯೫೮ರಲ್ಲಿ ಚಿತ್ರಕಥೆಯೊಂದಿಗೆ ಅನುಮತಿಗಾಗಿ ಭಾರತಕ್ಕೆ ಬಂದರಾದರೂ ಅವರಿಗೆ ಅನುಮತಿಯನ್ನು ನೀಡಲಿಲ್ಲವಾಗಿತ್ತು. ಈ ಬೇಸರದಿಂದ ಲೀನ್ ೪ ವರ್ಷಗಳ ನಂತರ 'ಲಾರೆನ್ಸ್ ಆಫ್ ಅರೇಬಿಯಾ' ಎನ್ನುವ ಅದ್ಭುತ ಸಿನಿಮಾವನ್ನು ನೀಡಿದರು. ಬ್ರಿಟಿಷ್ ಗಾಂಧಿವಾದಿ ಮೋತಿಲಾಲ್ ಕೊಥಾರಿಯವರ ಯೋಜನೆ ಹಿಡಿದು 'ರಿಚರ್ಡ್ ಅಟೆನ್‌ಬರೋ' ಭಾರತಕ್ಕೆ ಬಂದಾಗ ನೆಹರು, 'ನೀವು ಯಾವ ರೀತಿ ಬೇಕಾದರೂ ಸಿನಿಮಾ ಮಾಡಿ. ಆದರೆ ಗಾಂಧಿಯನ್ನು ಅವಮಾನಿಸದಿರಿ, ಭಂಜಿಸದಿರಿ ಮತ್ತು ದೈವವಾಗಿಸದಿರಿ' ಎಂದರಂತೆ. ಗಾಂಧಿ ಪಾತ್ರಕ್ಕೆ ನೆಹರೂ ಆಯ್ಕೆ ನಟ 'ಅಲೆಕ್ ಗಿನ್ನಿಸ್' ಆಗಿದ್ದರಂತೆ. ಆದರೆ ಇಂಗ್ಲಿಷ್ ನಟನನ್ನು ಗಾಂಧಿಯಾಗಿಸುವುದು ಒಂದು ವಿಡಂಬನೆ ಎಂಬ ಭಾವವೂ ಅವರಿಗಿದ್ದಿತ್ತು. ನೆಹರೂ ಭೇಟಿಯ ೧೮ ವರ್ಷಗಳ ನಂತರ ಅಟೆನ್‌ಬರೋ ಗುಜರಾತಿ–ಬ್ರಿಟಿಷ್ ವ್ಯಕ್ತಿಯಾದ 'ಬೆನ್ ಕಿಂಗ್‌ಸ್ಲೇ'ಯನ್ನು ಗಾಂಧಿಯಾಗಿಸಿ ಚಿತ್ರ ನಿರ್ಮಿಸಿದರು.

ಅಟೆನ್ ಬರೋವಿನ 'ಗಾಂಧಿ' ಸಿನಿಮಾವು ಗಾಂಧಿಯನ್ನು ಒಂದು ಸೆಕ್ಯುಲರ್ ನೆಲೆಯಲ್ಲಿ ಐಕಾನಿಕ್ ಆಗಿ ರೂಪಿಸಿತು. ಯೋಗಿ, ಬಾಬಾ, ಗುರು, ಸನ್ಯಾಸಿ ಮತ್ತಿತರರನ್ನು ಅಧ್ಯಾತ್ಮದ ನೆಲೆಯಲ್ಲಿ 'ಐಕಾನ್'ಗಳಾಗಿಸುವ ಪರಿಪಾಠ ಭಾರತದಲ್ಲಿದೆ. ಒಂದು ಮತ ನಿರಪೇಕ್ಷ ದೇವರಾಗಿ ಗಾಂಧಿ ಇಲ್ಲಿ ಗೋಚರಿಸುತ್ತಾರೆ. ಅಟೆನ್ ಬರೋ ಕೂಡ ಒಬ್ಬ ಭಕ್ತ ನಿರ್ದೇಶಕನಾಗುತ್ತಾನೆ. ಬೆನ್ ಕಿಂಗ್‌ಸ್ಲೇಯಂತೂ ತನ್ನ ದಢೂತಿ ದೇಹವನ್ನು ಕರಗಿಸಲು ಅನ್ನಾಹಾರ ಬಿಟ್ಟು ಕೊನೆಗೂ ೫೦ ಕೆ.ಜಿ.ಯ ಆಸುಪಾಸಿಗೆ ಬಂದು ಫಕೀರನೇ ಆಗುತ್ತಾನೆ. ಒಂದು ರೀತಿ ಈ ಸಿನಿಮಾ ಒಂದು ಭಾವನಾವಾದೀಯ – ಭಕ್ತಿಯ ರೂಪಕದಂತೆಯೇ ಕಾಣಿಸುತ್ತದೆ. ಗಾಂಧಿ ತನ್ನ ಕೃತಿ 'ಹಿಂದ್ ಸ್ವರಾಜ್'ನ ಮೂಲಕ ತಾತ್ವಿಕ ಮತ್ತು ಒಂದು ಅನುಭಾವೀಯ ಪ್ರವಾದೀತನವನ್ನು ತರ್ಕಗಳ ಮೂಲಕ ಪಡೆದರೆ ಈ ಸಿನಿಮಾ ದೃಶ್ಯ ಮತ್ತು ಬಾಂಬ್‌ಗಳ ಮೂಲಕ ಆತನನ್ನು ಪ್ರವಾದಿಯನ್ನಾಗಿಸುತ್ತದೆ.

ಶ್ಯಾಂ ಬೆನಗಲ್‌ರ 'ಮೇಕಿಂಗ್ ಆಫ್ ಮಹಾತ್ಮ'ವು ಗಾಂಧಿ ಮತ್ತು ಆಫ್ರಿಕಾದ ಪ್ರಯೋಗಶಾಲೆ ಹಾಗೂ ಅದು ರೂಪಿಸಿದ ಹೋರಾಟದ ಅಸ್ತ್ರಗಳಾದ ಸತ್ಯಾಗ್ರಹ, ಅಹಿಂಸೆ ಮುಂತಾದವು ರೂಪುಗೊಂಡ ಬಗೆಯನ್ನು ತಿಳಿಸುತ್ತದೆ. ಇದರ ಜತೆಗೆ ಕಸ್ತೂರ ಬಾ ಮೂಲಕ ಗಾಂಧಿಯನ್ನು ವಿಮರ್ಶೆಗೆ ಹಚ್ಚುವ ನೆಲೆ ಕೂಡ ಬಹಳ ಪರಿಣಾಮಕಾರಿಯಾದುದು. ೨೦೦೭ರ ಫಿರೋಜ್ ಖಾನ್‌ರ 'ಗಾಂಧಿ ಮೈ ಫಾದರ್' ಗಾಂಧಿಯ ಮಗ ಹರಿಲಾಲ್ ಮೂಲಕ ಗಾಂಧಿಯನ್ನು ಕೌಟುಂಬಿಕ ಮತ್ತು ವೈಯಕ್ತಿಕ ಮೌಲ್ಯಗಳನ್ನು ನಿರ್ವಹಿಸಿದ ಮತ್ತು ವಿಫಲತೆಯ ಮಾದರಿಯಾಗಿ ನಿರೂಪಿಸುತ್ತದೆ. ೨೦೦೬ರ ರಾಜ್‌ಕುಮಾರ್ ಹಿರಾನಿ ನಿರ್ದೇಶನದ 'ಲಗೋ ರಹೋ ಮುನ್ನಾ ಭಾಯ್' ಕೂಡ ಅತ್ಯಂತ ಪ್ರಮುಖವಾದ ಸಿನಿಮಾ. ಒಂದು ರೀತಿಯ ಗಾಂಧೀವಾದದ ಗ್ರಾಮ್ಶಿಯನ್ ನಿರೂಪಣೆ ಮತ್ತು ಕಥನದಂತಿದೆ ಈ ಸಿನಿಮಾ. ಮುಂಬೈನ ಡಾನ್ ಒಬ್ಬ ಮಹಾತ್ಮ ಗಾಂಧಿಯಿಂದ ಪ್ರೇರಣೆ ಪಡೆದು, ಗಾಂಧಿಯ ಚೈತನ್ಯವನ್ನು ಅನುಭವಿಸಿ, ಆತನ ಜತೆ ಸಂವಾದ ಸಾಧಿಸಿ, ಸಾಮಾನ್ಯ ಜನರೂ ಕೂಡ ಗಾಂಧಿಯನ್ನು ಕಂಡು, ಸಂವಾದಿಸಿ ಅವರ ಸಮಸ್ಯೆ–ಸಂಕಷ್ಟಗಳನ್ನು ನಿವಾರಿಸಿಕೊಳ್ಳಬಹುದಾದ ಒಂದು ಜನಪ್ರಿಯ ಮಾದರಿಯಾದ 'ಗಾಂಧಿಗರಿ'ಯನ್ನು ಆತ ಉತ್ಪಾದಿಸುತ್ತಾನೆ. ಬಹುಶಃ ಗಾಂಧಿ ಕುರಿತ ಸಿನಿಮಾಗಳಲ್ಲೇ ಒಂದು ವಿನೂತನ ಮಾದರಿಯದು. ೨೦೧೩ರ ಕೇರಳದ ನಿರ್ದೇಶಕ ಜಯನ್ ಚೆರಿಯನ್‌ರವರ 'ಪ್ಯಾಪಿಲಿಯೋ ಬುದ್ಧ' ಸಿನಿಮಾ ದಲಿತ ರಾಜಕಾರಣ ಮತ್ತದರ ಚರಿತ್ರೆ ಹಾಗೂ ವರ್ತಮಾನವನ್ನು ಚರ್ಚಿಸುತ್ತಾ ಮೊತ್ತ ಮೊದಲ ಬಾರಿಗೆ ಗಾಂಧಿಯ ವಿರುದ್ಧ ಪ್ರತಿ ಮತ್ತು ವಿರೋಧಾತ್ಮಕ ಕಥನವಾಗಿ ಏರ್ಪಟ್ಟಿತು. ಬಹುಶಃ ಭಾರತದಲ್ಲಿ ಇಂತಹ ನಿರೂಪಣೆ ಮೊತ್ತಮೊದಲನೆಯದು. ಗಾಂಧಿಯೆಂಬ ಐಕನ್ ಮತ್ತು ವಿಗ್ರಹ ಭಂಜನೆಯನ್ನು ಮಾಡಿದ ಕಾರಣದಿಂದ ಸರ್ಕಾರ ಇದರ ಮೇಲೆ ಪ್ರತಿಬಂಧವನ್ನೂ ಕೂಡ ಹೇರಿತು. ಗಾಂಧಿಯು ೧೯೩೨ರ ಪೂನಾ ಒಪ್ಪಂದದ ಮೂಲಕ ಜಾತಿ ಪ್ರಶ್ನೆಯನ್ನು ಮತ್ತದರ ಮೇಲಿನ ರಾಜಕಾರಣವನ್ನು ಸ್ಥಿರೀಕರಿಸಿದರು ಎನ್ನುವುದು ಪ್ಯಾಪಿಲಿಯೋದ ಪ್ರಮುಖವಾದ ವಾದವಾಗಿದೆ. ಅಂಬೇಡ್ಕರ್ ಆಲೋಚನೆಯ ಜಾತಿಯಿಂದ ಸಂಪೂರ್ಣ ವಿಮೋಚನೆಯು ಗಾಂಧಿಯ ಆದ್ಯತೆಯಾಗಿರಲಿಲ್ಲ ಎನ್ನುವುದು ಜಯನ್ ಅವರ ಅಭಿಪ್ರಾಯವಾಗಿತ್ತು.

**ಪ್ರದೀಪ ಕುಮಾರ್ ಶೆಟ್ಟಿ, ಕೆಂಚನೂರು**
ಚರಿತ್ರೆ ಉಪನ್ಯಾಸಕ, ಸರಕಾರಿ ಪದವಿ ಪೂರ್ವ ಕಾಲೇಜು
ಬೈಂದೂರು

# ಹೊಸತು ಪ್ರಾರಂಭದ ದಿನಗಳು

**ಪರಂಜ್ಯೋತಿ**

'ನೆಮ್ಮದಿಯ ನಾಳೆ ನಮ್ಮದು' ಎಂಬ ಆಶಯದೊಂದಿಗೆ ಪ್ರಕಟವಾಗುತ್ತಿರುವ, 'ಹೊಸತು' ಪತ್ರಿಕೆ ೨೦ನೇ ವರ್ಷಕ್ಕೆ ಕಾಲಿರಿಸಿರುವ ಸಂಭ್ರಮ!

ಪ್ರಾರಂಭದ ವರ್ಷಗಳಲ್ಲಿ ಸಂಪಾದಕ ಬಳಗದ ಸದಸ್ಯನಾಗಿ ಕಾರ್ಯನಿರ್ವಹಿಸಿ, 'ಹೊಸತು'ಗಾಗಿ ಹಲವು ಗಣ್ಯವ್ಯಕ್ತಿಗಳ – ವಿಜ್ಞಾನಿಗಳು, ಸಾಹಿತಿಗಳು, ಕವಿಗಳು, ಅರ್ಥಶಾಸ್ತ್ರಜ್ಞರು, ಪರಿಸರವಾದಿಗಳು, ಸಿನೆಮಾ ನಿರ್ದೇಶಕರು, ಕಲಾಕಾರರು, ಲೋಕಾಯುಕ್ತರು – ಫೋಟೋ ಕ್ಲಿಕ್ಕಿಸಿರುವ ನನಗೂ ಸಂಭ್ರಮವೆನಿಸುತ್ತಿದೆ!

ನವಕರ್ನಾಟಕ ಪ್ರಕಾಶನದಿಂದ ಒಂದು ಪತ್ರಿಕೆ ಹೊರಡಿಸುವ ಕನಸು ಕಂಡವರು, ಅದನ್ನು ಪ್ರಕಾಶನದ ಹಿತೈಷಿಗಳ ಮತ್ತು ಲೇಖಕ ಬಳಗದ ಎದೆಗೆ ಬಿತ್ತಿದವರು ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾಗಿದ್ದ ಶ್ರೀ ಆರ್. ಎಸ್. ರಾಜಾರಾಮ್.

ನಾಲ್ಕೈದು ಬಾರಿ ಎಲ್ಲರನ್ನೂ ಕರೆದು ಸಮಾಲೋಚಿಸಿ, ವಿಚಾರ ವಿನಿಮಯ ನಡೆಸಿ, ಸಂಪಾದಕ ಮಂಡಲಿ ರಚಿಸಿ, ಸಂಪಾದಕರಾಗಿ ಡಾ॥ ಜಿ. ರಾಮಕೃಷ್ಣ ಅವರನ್ನು ಒಪ್ಪಿಸುವಲ್ಲಿಯೂ ಸಫಲರಾದರು.

'ಹೊಸತು' ಹೆಸರು ಸೂಚಿಸಿದವರು ವೆಂಕಟರಾಮನ್. ಅದು ಎಲ್ಲರಿಗೂ ಒಪ್ಪಿಗೆಯಾಯಿತು. 'ನೆಮ್ಮದಿಯ ನಾಳೆ ನಮ್ಮದು' – ಎಂಬ ಧ್ಯೇಯವಾಕ್ಯ ಸಂಪಾದಕರ ಕೊಡುಗೆ. ಮೊದಲನೇ ಸಂಚಿಕೆಯ ಮುಖಪುಟ ರಚಿಸಿದವರು ನವಕರ್ನಾಟಕದ ಕಲಾವಿದ, ವಿನ್ಯಾಸಕಾರ ರವಿಕುಮಾರ್ ಅಜ್ಜೀಪುರ ಅವರು. ಅದೇ ಚಿತ್ರ ಮುಂದಿನ ಸಂಚಿಕೆಗಳಲ್ಲಿ 'ಹೊಸತು' ಲಾಂಛನವೂ ಆಯಿತು.

ತನ್ನ ಹೆಸರಿನಿಂದಲೇ ಕುತೂಹಲ ಹುಟ್ಟಿಸಿದ್ದ 'ಹೊಸತು' ಪ್ರಾರಂಭದ ದಿನಗಳಲ್ಲಿ 'ಏನಯ್ಯ ಇದರಲ್ಲಿ ಹೊಸತು! ಬೆಡಗಿಯರ ಚಿತ್ರಗಳಿಲ್ಲ, ದೇವ–ಮಾನವರನ್ನು ಹಾಗೂ ಮಂತ್ರಿ ಮಹೋದಯರಂಥ ಪ್ರಭಾವಿ ವ್ಯಕ್ತಿಗಳನ್ನು ಹೊಗಳಿ ಅಟ್ಟಕ್ಕೇರಿಸುವ ಲೇಖನಗಳಿಲ್ಲ, ಕ್ರಿಕೆಟ್ ಇಲ್ಲ, ಹಾಳಾಗಿ ಹೋಗಲಿ ಎಂದರೆ, ತಿಂಗಳ ಭವಿಷ್ಯದ ಕಾಲಮ್ಮೇ ಇಲ್ಲ!' ಎಂದು ಕೆಲವು ಓದುಗರು ಗೊಣಗಿಕೊಂಡರೂ, ಪ್ರಕಟವಾಗುತ್ತಿದ್ದ ವಿಚಾರಪೂರ್ಣ ಲೇಖನಗಳ ಆಕರ್ಷಣೆಗೊಳಗಾಗಿ ಕ್ರಮೇಣ 'ಹೊಸತು' ಬರುವ ದಿನಕ್ಕಾಗಿ ಕಾಯುವ ಹಂತಕ್ಕೆ ತಲುಪಿದರು.

ಬಿಡಿ ಸಂಚಿಕೆಗಳಲ್ಲಿ ಜಾಹಿರಾತು ಅಪರೂಪವಾದರೂ, ಜನವರಿ ತಿಂಗಳಲ್ಲಿ ಪ್ರಕಟವಾಗುವ ವಿಶೇಷ ಸಂಚಿಕೆಯಲ್ಲಿ ಹಿತೈಷಿಗಳ ಸಹಕಾರದಿಂದ ಜಾಹಿರಾತುಗಳು ಕಾಣಿಸಿಕೊಳ್ಳುತ್ತವೆ. ಆ ಪೈಕಿ ಬಹುಪಾಲು ಪುಸ್ತಕೋದ್ಯಮಕ್ಕೆ ಸಂಬಂಧಿಸಿರುತ್ತವೆ. ಇದು 'ಹೊಸತು' ವೈಶಿಷ್ಟ್ಯವೂ ಹೌದು.

ಪ್ರಾರಂಭದಲ್ಲಿ, ಪ್ರತಿ ತಿಂಗಳೂ ಹಿಂಬದಿಯ ರಕ್ಷಾಪುಟಕ್ಕೆ ಜಾಹಿರಾತು ಒದಗಿಸಿಕೊಳ್ಳುವ ಸಮಸ್ಯೆ ಎದುರಾಯಿತು. ರಕ್ಷಾಪುಟಗಳು ಬಹುವರ್ಣದಲ್ಲಿ ಪ್ರಕಟವಾಗುತ್ತಿದ್ದುದರಿಂದ ಸಮಸ್ಯೆ ಮತ್ತಷ್ಟು ತೊಡಕಿನದಾಗಿತ್ತು. ಹೊಸ ಪತ್ರಿಕೆಯೊಂದಕ್ಕೆ ಜಾಹಿರಾತು ನೀಡಲು ಯಾರೂ ತಾವಾಗಿಯೇ ಮುಂದೆ ಬರಲಾರರಷ್ಟೇ! ಹಾಗೊಂದು ಜಾಹಿರಾತು ಪಡೆಯಲು ನಾವು ಮಾಡಿದ ಉಪಾಯ ಸ್ವಾರಸ್ಯಕರವಾಗಿದೆ.

ಗೆಳೆತನದ ನೆಪದಲ್ಲಿ ಸಹಾಯ ಪಡೆದ ಪ್ರಕರಣ ಅದು.

ನನ್ನ ಗೆಳೆಯರಾದ ನಾ. ರಾಮಾನುಜ ಅವರು ಆಗ ಬೆಂಗಳೂರಿನಲ್ಲಿ ಎಚ್‌ಎಮ್‌ಟಿ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾಗಿದ್ದರು. ಬೆಂಗಳೂರಿನ ಎಚ್‌ಎಮ್‌ಟಿಯಲ್ಲಿ ವೃತ್ತಿ ಜೀವನ ಪ್ರಾರಂಭಿಸಿದ ಅವರು ಉತ್ತರ ಭಾರತದ ಬೇರೆ ಬೇರೆ ಕಡೆ ಸೇವೆ ಸಲ್ಲಿಸಿ, ಒಂದೊಂದೇ ಮೆಟ್ಟಿಲು ಏರಿ, ಉನ್ನತ ಅಧಿಕಾರಿಯಾಗಿ ಮತ್ತೆ ಬೆಂಗಳೂರಿಗೆ ತಲುಪಿದ್ದರು. ಎಲ್ಲಿದ್ದರೂ ಕನ್ನಡವಾಗಿಯೇ ಇದ್ದರು. ಅವರ ಅಧಿಕಾರಾವಧಿಯಲ್ಲಿ ಎಚ್‌ಎಮ್‌ಟಿ ಗಡಿಯಾರಗಳಲ್ಲಿ ಕನ್ನಡ ಅಂಕಿಗಳನ್ನು ಪೋಣಿಸಿದುದು ಅವರು ಸದ್ದಿಲ್ಲದೆ ಮಾಡಿದ ಕನ್ನಡ ಸೇವೆಗಳಲ್ಲೊಂದು.

ನಾನೂ ನೀಲಗಿರಿಯಿಂದ ಪುತ್ತೂರು, ಬೆಂಗಳೂರು, ಮದರಾಸು – ಹೀಗೆ ಅಲೆದಾಟ ನಡೆಸಿ ಮತ್ತೆ ಬೆಂಗಳೂರಿಗೆ ತಲುಪಿದ್ದೆ.

ರಾಮಾನುಜರಿಗೂ ನನಗೂ ಎತ್ತಣ ಪರಿಚಯ, ಎಲ್ಲಿಯ ಗೆಳೆತನ? ಇದು ಹೇಗೆ ಸಾಧ್ಯ ಮುಂತಾಗಿ ಕೆಲವರಿಗೆ ಅನುಮಾನ ಉಂಟಾಗಬಹುದು. ಅಂದಿನ ದಿನಗಳಲ್ಲಿ ನಾವು ಹೇಗೆ ಗೆಳೆಯರನ್ನು




ಹುಡುಕಿಕೊಳ್ಳುತ್ತಿದ್ದೆವು ಅಥವಾ ಗೆಳೆತನ ನಮ್ಮನ್ನು ಒಂದುಗೂಡಿಸುತ್ತಿತ್ತು ಎಂಬುದನ್ನೆಲ್ಲ 'ಮಂಜಿನೆಡೆಯ ಚಿತ್ರಗಳು' ಎಂಬ ಕೃತಿಯಲ್ಲಿ ವಿವರವಾಗಿ ಚಿತ್ರಿಸಿದ್ದೇನೆ. ಅದನ್ನು ಮತ್ತೆ ಇಲ್ಲಿ ಪ್ರಸ್ತಾಪಿಸುವ ಅಗತ್ಯವಿಲ್ಲ.

ಜಾಹಿರಾತಿಗಾಗಿ ನಮ್ಮ ಪ್ರಯತ್ನ ಮುಂದುವರಿದಿತ್ತು. ನಮ್ಮ ಹೊಸ ಪತ್ರಿಕೆಗೆ ಜಾಹಿರಾತು ನೀಡಿ ಸಹಕರಿಸುವಂತೆ ಅನೇಕ ಸಂಸ್ಥೆಗಳಿಗೆ ಪತ್ರ ಬರೆದಿದ್ದೆವು. ಅದೇ ರೀತಿ ಎಚ್‌ಎಮ್‌ಟಿಗೆ ಸಹ, ಹಾಗೆ ಪತ್ರ ಬರೆದ ಕೂಡಲೇ ಜಾಹಿರಾತನ್ನು ತಟ್ಟೆಯಲ್ಲಿರಿಸಿಕೊಂಡು ಯಾರು ಕಾಯುತ್ತಿರುತ್ತಾರೆ! ಹಾಗಾಗಿ, ನಾನು ಮತ್ತು ರಾಜಾರಾಮ್ ಈ ಉಪಾಯ ಮಾಡಿದೆವು. ರಾಮಾನುಜರನ್ನು ನೇರ ಭೇಟಿ ಮಾಡಿ ನಮ್ಮ ಬೇಡಿಕೆಯನ್ನು ಮುಂದಿರಿಸಲು ನಿರ್ಧರಿಸಿದೆವು.

ನಮ್ಮ ಹಳೆಯ ಗೆಳೆತನವನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದ್ದೇನೇನೋ ಎಂಬ ತಾಕಲಾಟ ನನ್ನ ಮನಸ್ಸಿನಲ್ಲಿ.

ಒಂದು ದಿನ, ಆಫೀಸಿನಿಂದ ಮನೆಗೆ ಹೋಗುವ ದಾರಿಯಲ್ಲಿ ಎಚ್‌ಎಮ್‌ಟಿ ಬಡಾವಣೆಯಲ್ಲಿದ್ದ ಅವರ ವಿಶಾಲ ಬಂಗಲೆಗೆ ಕರೆಯದ

ಪ್ರಕಾಶನದ ಅವರ ಚಟುವಟಿಕೆಗಳ ಬಗ್ಗೆ ತಿಳಿದುಕೊಂಡಿದ್ದರು. ನನ್ನನ್ನು ಮರೆತಿರಲಿಲ್ಲ. ದಿಲ್ಲಿ ಅತಿಥಿಗಳಿಗೆ 'ಈತ ನನ್ನ ಹಳೆಯ ದೋಸ್ತ್. ಕನ್ನಡದಲ್ಲಿ ಬಡಾ ಲೇಖಕ್!' ಎಂದು ಹಿಂದಿಯಲ್ಲೇ ಪರಿಚಯ ಮಾಡಿಕೊಟ್ಟರು. ಕನ್ನಡದ ಬಡಲೇಖಕನನ್ನು ಹಿಂದಿಯಲ್ಲಿ ಬಡಾಲೇಖಕ್ ಮಾಡಿದರಲ್ಲ ಎಂದು ನನಗೆ ಆಶ್ಚರ್ಯವಾಗದೇ ಇರಲಿಲ್ಲ!

ನಮ್ಮ ಕಾರ್ಯತಂತ್ರ ಫಲ ನೀಡಿತು. ಅಲ್ಲಿಂದ ಸುಮಾರು ಒಂದು ವರ್ಷ ಅವರು 'ಹೊಸತು' ನಾಲ್ಕನೇ ರಕ್ಷಾಪುಟಕ್ಕೆ ಬಹುವರ್ಣ ಜಾಹಿರಾತು ನೀಡಿ ಪತ್ರಿಕೆ ತನ್ನ ಕಾಲಿನಮೇಲೆ ನಿಲ್ಲಲು ಸ್ವಲ್ಪಮಟ್ಟಿಗೆ ಸಹಾಯಕರಾದರು.

ಸಾಕಪ್ಪ ಇವರ ಗೆಳೆತನದ ಉಪದ್ರವ ಎಂದು ರಾಮಾನುಜರು ಅಷ್ಟಕ್ಕೇ ಸುಮ್ಮನಿದ್ದುಬಿಡಲಿಲ್ಲ. ಮತ್ತೊಂದು ಸಲಹೆಯನ್ನು ಮುಂದಿರಿಸಿ ನಮಗೆ ಅಚ್ಚರಿ ಉಂಟುಮಾಡಿದರು!

'ಹೊಸತು'ವಿನಲ್ಲಿ ಪ್ರಕಟವಾಗುವ, ಸಂಪಾದಕ ಬಳಗ ಅತ್ಯುತ್ತಮ ಎಂದು ನಿರ್ಣಯಿಸುವ ಒಂದು ಪ್ರಬಂಧಕ್ಕೆ ಒಂದು ಎಚ್‌ಎಮ್‌ಟಿ ಗಡಿಯಾರ ಬಹುಮಾನವಾಗಿ ನೀಡುವ ಯೋಜನೆ ಅದು.

ಹೀಗೆ, 'ಹೊಸತು' ಪ್ರಾರಂಭದ ದಿನಗಳಲ್ಲಿ ಗೆಳೆಯ ರಾಮಾನುಜರು 'ಹೊಸತು' ಲೇಖಕರಿಗೂ ಪ್ರೋತ್ಸಾಹ ನೀಡಿದ್ದನ್ನು ನೆನಪಿಸಿಕೊಳ್ಳಬಹುದು.


ನಾ. ರಾಮಾನುಜ

ಅತಿಥಿಗಳಾಗಿ ಅನಿರೀಕ್ಷಿತ ಭೇಟಿ ನೀಡಿದೆವು. ಅಕಸ್ಮಾತ್ ಗೇಟ್‌ಕ್ರ್ಯಾಷ್ ಮಾಡಿದೆವು ಎಂದರೂ ಸರಿಯಾಗುತ್ತದೆ. ಆಗ ರಾತ್ರಿ ಸುಮಾರು ಎಂಟು ಗಂಟೆ. ಅವರಿಗಾಗಿ ನವಕರ್ನಾಟಕದ ಕೆಲವು ಪ್ರಕಟಣೆಗಳನ್ನು ಒಯ್ದಿದ್ದೆವು.

ಅವರಲ್ಲಿಗೆ ದಿಲ್ಲಿಯ ಅತಿಥಿಗಳು ಬಂದಿದ್ದಂತಿತ್ತು. ಪ್ರಾಯಶಃ ಎಚ್‌ಎಮ್‌ಟಿಯ ಉನ್ನತಾಧಿಕಾರಿಗಳಾಗಿರಬಹುದೆಂದು ಊಹಿಸಿದೆ. ರಾಮಾನುಜರು ಅವರ ಜೊತೆಗೆ ಹಿಂದಿಯಲ್ಲಿ ಮಾತಾಡುತ್ತಿದ್ದರು. ತಮಗಾದ ಕಸಿವಿಸಿಯನ್ನು ಮರೆತು, ಕರೆಯದೇ ಹಾಜರಾದ ನಮ್ಮನ್ನು ಸ್ವಾಗತಿಸಿದರು. ಅವರಿಗೆ ರಾಜಾರಾಮ್‌ರ ಪರಿಚಯವಿರಲಿಲ್ಲ. ಆದರೆ ಪುಸ್ತಕ


**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೨೧ನೇ 'ಬಿ' ಕ್ರಾಸ್, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭


## ಸಾದರ ಸ್ವೀಕಾರ

**ಜಾತಿ ಅಸ್ಪೃಶ್ಯತೆಯ ಸಂಘರ್ಷ** *ಡಾ|| ಎಂ. ವೆಂಕಟಸ್ವಾಮಿ*
**ಪುಟ : ೨೨೦ ಬೆಲೆ : ರೂ. ೨೦೦**

**ಸ್ವಾಮಿ ವಿವೇಕಾನಂದ** (ಹೊಸ ಶೋಧ)
*ಮರಾಠಿ ಮೂಲ : ಡಾ|| ದತ್ತಪ್ರಸಾದ ದಾಭೋಲ್ಕರ್*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
**ಪುಟ : ೧೩೬ ಬೆಲೆ : ರೂ. ೧೨೫**

**ಕಂಗಳ ಮುಂದಣ ಕತ್ತಲು** (ವಿಶ್ವಗ್ರಾಮದಲ್ಲಿ ವಿಶ್ವಮಾನವನಿಲ್ಲ) *ಡಾ|| ಮೂಡ್ನಾಕೂಡು ಚಿನ್ನಸ್ವಾಮಿ*
**ಪುಟ : ೧೬೪ ಬೆಲೆ : ರೂ. ೧೫೦**

**ವಿಶ್ವದ ವೈವಿಧ್ಯ** (ಭೌತವಿಜ್ಞಾನ ಮತ್ತು ಖಗೋಳವಿಜ್ಞಾನ ಕುರಿತ ಲೇಖನಗಳು) *ಡಾ|| ಪಾಲಹಳ್ಳಿ ಆರ್. ವಿಶ್ವನಾಥ್*
**ಪುಟ : ೧೬೮ ಬೆಲೆ : ರೂ. ೧೫೦**

**ಹೊಸದಿಕ್ಕು** (ರಂಗಭೂಮಿ ಕುರಿತ ಲೇಖನಗಳು)
*ಎಸ್. ಮಾಲತಿ*
**ಪುಟ : ೧೩೬ ಬೆಲೆ : ರೂ. ೧೨೫**

**ಇಂಗ್ಲಿಷ್ ನುಡಿಗಟ್ಟು ಮತ್ತು ಪಡೆನುಡಿಗಳ ವಿವರಣಾತ್ಮಕ ಕೋಶ** *ಬೇದ್ರೆ ಮಂಜುನಾಥ*
**ಪುಟ : ೧೮೦ ಬೆಲೆ : ರೂ. ೧೦೦**

**ಇಂಗ್ಲಿಷ್ ಗಾದೆಗಳ ವಿವರಣಾತ್ಮಕ ಕೋಶ**
*ಬೇದ್ರೆ ಮಂಜುನಾಥ*
**ಪುಟ : ೮೮ ಬೆಲೆ : ರೂ. ೫೫**

**ಶನಿಗೇಕೆ ಉಂಗುರ?** (ಪುಟ್ಟ–ಕಿಟ್ಟ ವಿಜ್ಞಾನ ಸಂವಾದ–೧೨) *ಡಾ|| ಎ. ಓ. ಆವಲ ಮೂರ್ತಿ*
**ಪುಟ : ೭೨ ಬೆಲೆ : ರೂ. ೫೫**

**ನಮಗೆ ಕನಸುಗಳು ಬೀಳುವುದೇಕೆ?** (ಪುಟ–ಕಿಟ್ಟ ವಿಜ್ಞಾನ ಸಂವಾದ–೧೧) *ಡಾ|| ಎ. ಓ. ಆವಲ ಮೂರ್ತಿ*
**ಪುಟ : ೭೨ ಬೆಲೆ : ರೂ. ೫೫**

**ನಮಗೆ ಭಯವಾಗುವುದೇಕೆ?** (ಪುಟ–ಕಿಟ್ಟ ವಿಜ್ಞಾನ ಸಂವಾದ–೧೦) *ಡಾ|| ಎ. ಓ. ಆವಲ ಮೂರ್ತಿ*
**ಪುಟ : ೭೨ ಬೆಲೆ : ರೂ. ೫೫**

**ನಕ್ಷತ್ರಗಳೇ ಮಿನುಗುತ್ತವೆ?** (ಪುಟ–ಕಿಟ್ಟ ವಿಜ್ಞಾನ ಸಂವಾದ–೦೯) *ಡಾ|| ಎ. ಓ. ಆವಲ ಮೂರ್ತಿ*
**ಪುಟ : ೭೨ ಬೆಲೆ : ರೂ. ೫೫**

ಮೇಲಿನ ಹನ್ನೊಂದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧.

**ಬಸವಣ್ಣ ಏಕೆ ಬೇಕು?** (ವೇದಕ್ಕೆ ಒರೆಯ ಕಟ್ಟುವೆ... ಆಗಮದ ಮೂಗ ಕೊಯಿವೆ) *ರಂಜಾನ್ ದರ್ಗಾ*
**ಪುಟ : ೮೮ ಬೆಲೆ : ರೂ. ೬೦**

**ಮಾಂಸದಂಗಡಿಯ ನವಿಲು** *ಎನ್ಕೆ ಹನುಮಂತಯ್ಯ*
**ಪುಟ : ೧೭೬ ಬೆಲೆ : ರೂ. ೧೪೦**

**ಅಸ್ಪೃಶ್ಯತೆ ವೈಕಂ ಸತ್ಯಾಗ್ರಹ** *ಮೂಲ : ಪೆರಿಯಾರ್*
*ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*
**ಪುಟ : *x*+೫೬ ಬೆಲೆ : ರೂ. ೬೦**

**ಉರಿವ ಕುಡಿಯ ನಟ್ಟನಡುವೆ** (ಜಲಾಲುದ್ದೀನ್ ರೂಮಿ ಕವಿತೆಗಳು) *ಡಾ|| ಎಚ್. ಎಸ್. ಅನುಪಮಾ*
**ಪುಟ : ೧೪೦ ಬೆಲೆ : ರೂ. ೧೨೦**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧.

**ಡಿ. ದೇವರಾಜ ಅರಸು** (ಸಾಮಾಜಿಕ ಪರಿವರ್ತನೆಯ ಹರಿಕಾರ) *ಡಾ|| ಬಿ. ಸಿ. ನಿಂಗಣ್ಣ*
**ಪುಟ : ೧೧೨ ಬೆಲೆ : ರೂ. ೧೦೦**
**ರೇಣುಕಾ ಪ್ರಕಾಶನ,** ಗೋದುತಾಯಿನಗರ, ಕಲಬುರಗಿ – ೫೮೫ ೧೦೨

**ಲಿಂಗಾಯತ ಅಧ್ಯಯನ ಸಂಸ್ಥೆ ಮತ್ತು ಡಾ. ಎಂ. ಎಂ. ಕಲಬುರ್ಗಿ** *ಪ್ರಕಾಶ ಗಿರಿಮಲ್ಲನವರ*
**ಪುಟ : X+೧೨೨ ಬೆಲೆ : ರೂ. ೬೦**
**ಲಿಂಗಾಯತ ಅಧ್ಯಯನ ಸಂಸ್ಥೆ,** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

**ಸಾಹಿತ್ಯ ವಿಜ್ಞಾನ ಸಮನ್ವಯಕ ಡಾ. ವ್ಯಾಸರಾವ್ ನಿಂಜೂರು** *ರಮಾ ಉಡುಪ*
**ಪುಟ : XII+೧೦೨ ಬೆಲೆ : ರೂ. ೮೦**
**ಕನ್ನಡ ಅಧ್ಯಯನ ವಿಭಾಗ,** ಮುಂಬಯಿ ವಿಶ್ವವಿದ್ಯಾಲಯ, ಮುಂಬೈ

**ಡಾ. ಎಸ್. ಆರ್. ಗುಂಜಾಳ** (ದಿನಚರಿಗಳಲ್ಲಿ ಕಂಡಂತೆ)
*ಪ್ರಕಾಶ ಗಿರಿಮಲ್ಲನವರ*
**ಪುಟ : *xvi*+೧೫೨ ಬೆಲೆ : ರೂ. ೮೦**
**ಬೆಳಂದಿಗಳು ಪ್ರಕಾಶನ :** ಪ್ಲಾಟ್ ನಂ.೩೯, ಬಸವ ಕಾಲೋನಿ, ಬಾಕ್ಸೈಟ್ ರಸ್ತೆ, ಬೆಳಗಾವಿ – ೫೯೦ ೦೧೦

**ಹನಿ ಹಳ್ಳ** *ಸಿ.ಪಿ.ಕೆ.*
**ಪುಟ : ೧೦೪ ಬೆಲೆ : ರೂ. ೭೫**
**ಚಿತ್ರಭಾನು ಪ್ರಕಾಶನ,** ನಂ. ೨೨೬೫/೧೯, 'ಭಾರತಿ' ೬ನೇ ಕ್ರಾಸ್, ವಿನಾಯಕನಗರ, ಮೈಸೂರು–೫೭೦ ೦೧೨

**ಮತ್ತೊಂದು ಎಲೆ** (ಕವನ ಸಂಕಲನ) *ಚಂದ್ರಶೇಖರ ಪಾಟೀಲ*
**ಪುಟ : ೧೧೦ ಬೆಲೆ : ರೂ. ೧೦೦**
**ಸಂಕ್ರಮಣ ಪ್ರಕಾಶನ,** ಜ್ಯೋತಿ ಲೇಔಟ್, ಯಲಚೇನಹಳ್ಳಿ, ಜೆ.ಪಿ.ನಗರ, ಬೆಂಗಳೂರು–೭೮

**ನನ್ನವರು** (ಕವನ ಸಂಕಲನ) *ವೀರಪ್ಪ ಮಲ್ಲಪ್ಪ ನಿಂಗೋಜಿ*
**ಪುಟ : *xii*+೫೨=೬೪ ಬೆಲೆ : ರೂ. ೬೦**
**ಲಲಿತಾ ಪ್ರಕಾಶನ,** ಕರಮುಡಿ, ಯಲಬುರ್ಗಾ ತಾ||, ಕೊಪ್ಪಳ ಜಿಲ್ಲೆ – ೫೮೩ ೨೩೬

**ಅಂಬಿಗ ನಿನ್ನ ನಂಬಿದೆ** (ಅಂಬಿಗರ ಚೌಡಯ್ಯನ ಕುರಿತು ನಾಟಕ) *ಡಾ. ಬಸವರಾಜ ಸಬರದ*
**ಪುಟ : *xvi*+೧೦೮=೧೨೪ ಬೆಲೆ : ರೂ. ೧೦೦**
**ಅನುಪಮಾ ಪ್ರಕಾಶನ,** ಅಥಣಿ



# ರೈತ ಚಳವಳಿ : ಸಮಕಾಲೀನ ಸ್ಥಿತ್ಯಂತರ

ರೈತ ಚಳವಳಿ ಅಥವಾ ರೈತ ಹೋರಾಟ ಎಂದರೆ ಪ್ರಮುಖವಾಗಿ ನಮಗೆ ಆಗಾಗ ನೆನಪಿಸುವ ಎರಡು ಹೋರಾಟಗಳೆಂದರೆ ಒಂದು ಹೊಸಪೇಟೆಯ ಕಬ್ಬು ಬೆಳೆಗಾರರ ಹೋರಾಟ ಮತ್ತೊಂದು ಶಿರಾದ ಶೇಂಗಾ ಬೆಳೆಗಾರರ ಹೋರಾಟ. ಈ ಎರಡು ಹೋರಾಟಗಳು ಇಂದಿಗೂ ಕೂಡ ರೈತ ಹೋರಾಟಕ್ಕೆ ಪ್ರಮುಖವಾಗಿ ಉದಾಹರಣೆಯಾಗುತ್ತಲೇ ಇವೆ.

ವಿಜಯನಗರ ಕಾಲದಿಂದಲೂ ೧೯೧೦–೧೯೧೫ರವರೆಗೆ ಹೊಸಪೇಟೆ ಮತ್ತು ಚಿತ್ತಲವಾಡಿ ಪ್ರಮುಖ ಬೆಲ್ಲದ ವ್ಯಾಪಾರ ಕೇಂದ್ರವಾಗಿತ್ತು. ಆ ಕಾಲದಲ್ಲಿ ಶನಿವಾರ ಮತ್ತು ಭಾನುವಾರ ಎರಡು ದಿನಗಳು ಸಂತೆಯಲ್ಲಿ ೧೫೦೦ರಿಂದ ೨೦೦೦ ಚೀಲ ಬೆಲ್ಲ ಹಾಗೂ ಮತ್ತಿತರ ವಸ್ತುಗಳು ವ್ಯಾಪಾರ ಆಗುತ್ತಿದ್ದವು. ಇದೇ ವೇಳೆಗೆ ಮದ್ರಾಸ್ ಸರ್ಕಾರವು ಚಿತ್ತಲವಾಡಿಯಲ್ಲಿ ಸುಧಾರಿಸಿದ ಬೆಲ್ಲ ತಯಾರಿಕಾ ಘಟಕವೊಂದನ್ನು ಸ್ಥಾಪಿಸಿತು. ಆದರೆ ಈ ಯೋಜನೆ ರೈತರನ್ನು ಸೆಳೆಯಲು ವಿಫಲವಾಯಿತು. ೧೯೩೨ರಲ್ಲಿ ಭಾರತ ಸರ್ಕಾರವು ದೇಶೀಯ ಸಕ್ಕರೆ ಉದ್ಯಮವನ್ನು ವಿದೇಶಿ ಕಂಪನಿಗಳ ಪೈಪೋಟಿಯಿಂದ ರಕ್ಷಿಸಲು ಸಕ್ಕರೆ ಉದ್ಯಮ ರಕ್ಷಣಾ ಕಾನೂನು ಜಾರಿಗೆ ತಂದಿತು. ಅಲ್ಲಿಂದ ಮುಂದೆ ಈ ದೇಶದಲ್ಲಿ ಸಕ್ಕರೆ ಉದ್ಯಮ ಶರವೇಗದಲ್ಲಿ ಬೆಳೆಯಲಾರಂಭಿಸಿತು. ಸಾರ್ವಜನಿಕರೇ ಮುಂದೆ ಬಂದು ಕಾರ್ಖಾನೆಗಳನ್ನು ಹೊಸಪೇಟೆಯಲ್ಲಿ ಸ್ಥಾಪಿಸಲು ಯತ್ನಿಸಿದರು. ೧೯೨೪–೨೫ರ ಸುಮಾರಿಗೆ ಅಮೇರಿಕಾ ವಿಶ್ವವಿದ್ಯಾನಿಲಯವೊಂದರಲ್ಲಿ ಕೃಷಿ ವಿಜ್ಞಾನದಲ್ಲಿ ಉನ್ನತ ಪದವಿ ಪಡೆದ ಡಾ॥ ಆರ್. ನಾಗನಗೌಡ, ಉನ್ನತ ಸರ್ಕಾರಿ ನೌಕರಿ ಬಿಟ್ಟು ಥಿಯೋಸೊಫಿಸ್ಟ್ ಆಗಿದ್ದ ರಂಗನಾಥ್ ಮೊದಲಿಯಾರ್ ಹಾಗೂ ತಾಂಡವ ಮೊದಲಿಯಾರ್ ಇವರುಗಳ ಪ್ರಯತ್ನದಿಂದ ಮದ್ರಾಸ್ ಪ್ರಾಂತ್ಯದ ಪ್ರಭಾವಶಾಲಿ ಕಂಟ್ರ್ಯಾಕ್ಟರುಗಳೊಂದಿಗೆ ಆರ್ಥಿಕ ಸಹಾಯಕ್ಕಾಗಿ ಷೇರು ಬಂಡವಾಳವನ್ನು ಸಂಗ್ರಹಿಸಲಾಯಿತು. ಆ ಕಾಲದಲ್ಲಿ ೧೦ ಲಕ್ಷ ರೂಪಾಯಿಗಳ ಬಂಡವಾಳವನ್ನು ಸಂಗ್ರಹಿಸಲಾಗಿತ್ತು. ೧೯೩೪–೩೫ರಲ್ಲಿ ಸಕ್ಕರೆ ಕಾರ್ಖಾನೆಯು ಹೊಸಪೇಟೆಯ ಚಿತ್ತಲವಾಡಿಯಲ್ಲಿ ಕೆಲಸ ಪ್ರಾರಂಭವಾಯಿತು.

ಬಂಡವಾಳಗಾರರು ಸಕ್ಕರೆ ಕಾರ್ಖಾನೆ ತಮ್ಮ ಕೈಗೆ ಬಂದ ಮೇಲೆ ರೈತರನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಳ್ಳಲಿಲ್ಲ. ಅವರು ಯಥಾಸ್ಥಿತಿ ಶೋಷಣೆಯನ್ನು ಮುಂದುವರಿಸಿಯೇಬಿಟ್ಟರು. ಕಬ್ಬು ಬೆಳೆಗಾರರ ಉತ್ಸಾಹವನ್ನು ಕುಂದಿಸಿಯೇಬಿಟ್ಟರು. ಕಬ್ಬಿಗೆ ಯೋಗ್ಯ ಬೆಲೆ ಕೊಡುವಲ್ಲಿ ಕಾರ್ಖಾನೆ ವಿಫಲವಾಯಿತು. ಬೆಲೆ ನಿರ್ಧರಿಸುವಾಗ ಕೂಡ ಅಧ್ವಾನವಾಗತೊಡಗಿತು. ಸರಬರಾಜು ಮಾಡಿದ ಕಬ್ಬಿಗೆ ಕಾಲ ಕಾಲಕ್ಕೆ ಸರಿಯಾಗಿ ಹಣ ಪಾವತಿ ಮಾಡಲಿಲ್ಲ. ಅದರಿಂದಾಗಿ ರೈತರು ಕಂಗಾಲಾದರು. ತೂಕದಲ್ಲಿ ಮೋಸ

**ಹಾರೋಹಳ್ಳಿ ರವೀಂದ್ರ**

ಊರಿನಲ್ಲಿ ಐದು ರೂಪಾಯಿಗೆ ಎಳನೀರು ಮಾರಾಟ ಮಾಡುವ ರೈತ, ಅದು ನಗರಕ್ಕೆ ಬಂದಾಗ ೨೦ ರೂ. ಕೊಟ್ಟು ಅದೇ ಎಳನೀರು ಕುಡಿಯಬೇಕಾದಾಗ ಅವನ ಕಣ್ಣಲ್ಲಿ ರಕ್ತ ಹರಿದುಬರುತ್ತದೆ. ನಡುವಿನ ೧೫ ರೂಪಾಯಿಯನ್ನು ಯಾರು ತಿನ್ನುತ್ತಿದ್ದಾರೆ? ಆ ಎಲ್ಲಾ ದಲ್ಲಾಳಿಗಳನ್ನು ಹೋಗಲಾಡಿಸಿ, ಒಟ್ಟಾರೆ ಮಾರಾಟದ ಮೊತ್ತ ರೈತನಿಗೆ ತಲುಪುವಂತೆ ಮಾಡಿದರೆ ಸಾಕು, ರೈತ ಬದುಕಿಕೊಳ್ಳುತ್ತಾನೆ. ಅವನಿಗೆ ಯಾರ ಮೊಸಳೆ ಕಣ್ಣೀರು ಬೇಕಿಲ್ಲ. ಸಾಲ ಮನ್ನಾ ಎಂಬುವ ಭಿಕ್ಷೆಯು ಸಹ ಅನಗತ್ಯ. ಅವನ ಬೆಳೆಗೆ ಮಾರುಕಟ್ಟೆಯಲ್ಲಿ ಮಾರಾಟವಾಗುವ ಮುಕ್ಕಾಲು ಭಾಗದಷ್ಟಾದರೂ ಬೆಲೆ ಕೊಡಿಸಿದರೆ ಕೃಷಿ ಅತ್ಯಂತ ಆಕರ್ಷಕ ಕ್ಷೇತ್ರವಾಗಿ ತೆರೆದುಕೊಳ್ಳುತ್ತದೆ. ಅನ್ನದಾತ ನೆಮ್ಮದಿಯಿಂದ ಬದುಕುತ್ತಾನೆ. ಇಷ್ಟಕ್ಕೂ ಈ ಒಂದು ಕೆಲಸ ಅಸಾಧ್ಯವಾದದ್ದೇ?

ತಾಂಡವವಾಡಲು ಶುರುವಾಗಿ ನಾಗನಗೌಡ ಇದನ್ನು ಪರಿಹರಿಸಲು ಪ್ರಯತ್ನಿಸಿ ಅದು ಫಲಕಾರಿಯಾಗದೆ ಕಂಪನಿಯಿಂದ ಹೊರನಡೆದರು.

ಕಬ್ಬು ಬೆಳೆಗಾರರ ಸಂಘಟನೆಯಲ್ಲಿ ಆಸಕ್ತಿ ತೆಗೆದುಕೊಂಡವರಲ್ಲಿ ಹೆಚ್ಚಾಗಿ ಜಮೀನ್ದಾರರು, ವ್ಯಾಪಾರಸ್ಥರು ಹಾಗೂ ಶಿಕ್ಷಣ ಹೊಂದಿದ ರೈತರು ಇದ್ದರು. ಇದರ ರೂವಾರಿ ನಾಗನಗೌಡರು. ಬೆಲ್ಲದ ಚೆನ್ನಪ್ಪ, ಪತ್ತಿಕೊಂಡ ಗುರುನಾಥಪ್ಪ ಮೊದಲಾದವರು ಬೆಲೆ, ತೂಕಕ್ಕೆ ಸಂಬಂಧಿಸಿದ ಪ್ರಶ್ನೆಗಳ ಹಿನ್ನೆಲೆಯಲ್ಲಿ ರೈತ ಸಂಘಟನೆಗೆ ಒಂದು ಅಸ್ತಿತ್ವ ತಂದುಕೊಟ್ಟರು. ೧೯೫೦ರ ಹೊತ್ತಿಗೆ ಕಬ್ಬು ಬೆಳೆಗಾರರ ಸಂಘಟನೆ ಒಂದು ದೃಢವಾದ ರೂಪಕ್ಕೆ ಬಂದು ಕಮಲಾಪುರ, ಚಿತ್ತಲವಾಡಿ ಮತ್ತು ಹೊಸಪೇಟೆಗಳಲ್ಲಿ ನೋಂದಾಯಿಸಲ್ಪಟ್ಟ ರೈತ ಸಂಘಟನೆಗಳು ನಾಗನಗೌಡರ ಮಾರ್ಗದರ್ಶನದಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ರೈತ ಸಂಘವು ಪ್ರಬಲವಾದ ಕಾರಣದಿಂದ ಕಾರ್ಖಾನೆಯ ಜೊತೆ ಸರ್ವಾನುಮತದ ಒಪ್ಪಂದಕ್ಕೆ ಬರುವ ವಾತಾವರಣ ಸೃಷ್ಟಿಯಾಯಿತು. ಕಬ್ಬು ಕಾರ್ಖಾನೆಗಳು ರೈತರು ಬೆಳೆದ ಕಬ್ಬಿಗೆ ಸರಿಯಾದ ಬೆಲೆ ಕೊಡದಿದ್ದಾಗಲೆಲ್ಲಾ ರಾಜ್ಯ ಸರ್ಕಾರಕ್ಕೆ ಸಲ್ಲಿಸಿದ ಮನವಿ ಬೆಲೆ ಪಡೆಯುವಲ್ಲಿ ಯಶಸ್ವಿಯಾಗಿದೆ. ಇಂತಹ ಸಂದರ್ಭದಲ್ಲಿ ರೈತ ಸಂಘ, ಕಾರ್ಖಾನೆ ಮತ್ತು ಸರ್ಕಾರಗಳ ಪ್ರತಿನಿಧಿಗಳಿಂದ ಕೂಡಿದ ತ್ರಿಪಕ್ಷ ಸಭೆಯ ಮೂಲಕ ಸಮಸ್ಯೆಗಳು ಇತ್ಯರ್ಥ ವಾಗುವಂತಹ ವ್ಯವಸ್ಥೆಯನ್ನು ರೂಪುಗೊಳಿಸು ವುದರಲ್ಲಿ ಕೂಡ ರೈತ ಸಂಘದ ಪಾತ್ರ ಮಹತ್ವದ್ದಾಗಿದೆ.

ಕೆಂಗಲ್ ಹನುಮಂತಯ್ಯನವರ ಕ್ಯಾಬಿನೆಟ್‌ನಲ್ಲಿ ಕೆಲವು ಕಾಲ ಕೃಷಿ ಸಚಿವರಾಗಿದ್ದ ಡಾ॥ ನಾಗನಗೌಡರ ನೇತೃತ್ವದ ಈ ರೈತ ಸಂಘವು ನ್ಯಾಯಾಲಯಗಳಲ್ಲೂ ಅನೇಕ ಮೊಕದ್ದಮೆಗಳನ್ನು ರೈತರ ಪರವಾಗಿ ನಡೆಸಿತು. ೧೯೬೮ರಲ್ಲಿ ಕೇಂದ್ರ ಸರ್ಕಾರವು ಸಕ್ಕರೆ ಕಾರ್ಖಾನೆಗಳು ಕೊಡಬೇಕಾದ ಹೆಚ್ಚುವರಿ ಕಬ್ಬಿನ ಬೆಲೆಯ ಬಗ್ಗೆ ಅಧ್ಯಯನ ನಡೆಸಲು ಒಂದು ಏಕ ಸದಸ್ಯ ಆಯೋಗವನ್ನು ನೇಮಿಸಿತ್ತು. ಈ ಸಮಿತಿಯು ೧೯೬೦–೬೧ ಮತ್ತು ೧೯೬೧–೬೨ನೇ ಸಾಲಿನಲ್ಲಿ ಅರೆದ ಕಬ್ಬಿಗೆ ಕಾರ್ಖಾನೆಗಳು ಎರಡು ವರ್ಷ ಕೂಡಿ ಪ್ರತಿ ಟನ್‌ಗೆ ರೂ. ೧೧.೨೫ರಂತೆ ಹೆಚ್ಚುವರಿ ಬೆಲೆ ನೀಡಬೇಕೆಂದು ಸಲಹೆ ಮಾಡಿತು. ಸಮಿತಿಯ ಸಲಹೆಯಂತೆ ಕಾರ್ಖಾನೆಯು ಹಣ ಪಾವತಿ ಮಾಡಲು ಕೇಂದ್ರ ಸರಕಾರವು ಆಜ್ಞೆಯನ್ನು ಹೊರಡಿಸಿತು. ಆದರೆ ಕಾರ್ಖಾನೆಯ ಆಡಳಿತ ವರ್ಗವು ಸರ್ಕಾರದ ಆ ಆಜ್ಞೆಯನ್ನು ಮರುಪರಿಶೀಲನೆ ಮಾಡುವಂತೆ ಕೋರಿಕೊಂಡಿತು. ಪರಿಣಾಮವಾಗಿ ರೈತ ಸಂಘವು ಕೂಡ ಸರ್ಕಾರಕ್ಕೆ ಮನವಿ ಸಲ್ಲಿಸಿ, ಹೆಚ್ಚುವರಿ ಬೆಲೆ ಪಾವತಿ ವಿಷಯದಲ್ಲಿ ರೈತರ ಹಿತಾಸಕ್ತಿಯನ್ನು ಕಾಪಾಡಬೇಕೆಂದು ಒತ್ತಾಯಮಾಡಿತು. ಆದರೆ ಸರ್ಕಾರವು ರೈತರ ಮನವಿಯನ್ನು ನಿರ್ಲಕ್ಷಿಸಿ ಆಡಳಿತ ವರ್ಗಕ್ಕೆ ಅನುಕೂಲವಾಗುವಂತೆ ಏಕಪಕ್ಷೀಯವಾಗಿ ರೂ. ೧೧.೨೫ಕ್ಕೆ ಬದಲಾಗಿ, ಎರಡು ವರ್ಷದ ಅವಧಿಗೆ ಬದಲಾಗಿ ಕೇವಲ ೧೯೬೦–೬೧ನೇ ಸಾಲಿನ ಕಬ್ಬಿಗೆ ಮಾತ್ರ ಕೇವಲ ಎಪ್ಪತ್ತು ಪೈಸೆ ಹೆಚ್ಚುವರಿ ಬೆಲೆಯನ್ನು ಕಾರ್ಖಾನೆ ಪಾವತಿ ಮಾಡುವಂತೆ ೧೯೬೮ನೇ ಸೆಪ್ಟೆಂಬರ್ ೧೧ರಂದು ಮತ್ತೊಂದು ಆಜ್ಞೆ ಹೊರಡಿಸಿತು. ಈ ಅನ್ಯಾಯವನ್ನು ವಿರೋಧಿಸಿ ಸರ್ಕಾರದ ಮರು ಆಜ್ಞೆ ವಿರುದ್ಧ ಕರ್ನಾಟಕ ರಾಜ್ಯದ ಹೈಕೋರ್ಟ್‌ನಲ್ಲಿ ಹೊಸಪೇಟೆಯ ರೈತರ ಸಂಘವು ದಾವೆ ಹೂಡಿತು. ಹೈಕೋರ್ಟ್ ರೈತ ಸಂಘದ ವಾದ ಎತ್ತಿಹಿಡಿದು ತೀರ್ಪು ನೀಡಿತು. ರೈತ ಸಂಘದ ಪರವಾಗಿದ್ದ ರಾಜ್ಯ ಹೈಕೋರ್ಟ್ ತೀರ್ಪಿನ ವಿರುದ್ಧ ಕಾರ್ಖಾನೆಯ ಬಂಡವಾಳಶಾಹಿಗಳು ಸರ್ವೋಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿದರು.

ಸರ್ವೋಚ್ಚ ನ್ಯಾಯಾಲಯವು ಕೂಡ ೧೯೬೫, ನವೆಂಬರ್ ೧೯ರ ತೀರ್ಪಿನಲ್ಲಿ ಕಬ್ಬಿನ ಹೆಚ್ಚುವರಿ ಬೆಲೆ ನಿಗದಿಪಡಿಸಿದಾಗ ಮತ್ತು ಅದನ್ನು ಮನ್ನಾ ಮಾಡುವಾಗ ಸರ್ಕಾರವು ರೈತರ ಅಭಿಪ್ರಾಯವನ್ನು ಕೇಳಬೇಕೆಂಬುದನ್ನು ಸ್ಪಷ್ಟಪಡಿಸಿತು. ಈ ತೀರ್ಪಿನ ಆಧಾರದ ಮೇಲೆ ಬೆಲೆಯ ಬಗ್ಗೆ ವರದಿಗಾಗಿ ಕೇಂದ್ರ ಸರ್ಕಾರದ ಸಕ್ಕರೆ ನಿರ್ದೇಶನಾಲಯಕ್ಕೆ ಕಾರ್ಖಾನೆಯು ಮನವಿ ಯೊಂದನ್ನು ಸಲ್ಲಿಸಿತು. ನಿರ್ದೇಶನಾಲಯವು

## ಗನ್ನು ನಿಮ್ಮದು ಪೆನ್ನು ನಮ್ಮದು




ಗನ್ನು ನಿಮ್ಮದು ಪೆನ್ನು ನಮ್ಮದು
ನಡೆದಿದೆ ಹೋರಾಟ
ಮುಖವಿರುವವರ ಮುಖವಿರದವರ
ನಡುವಿನ ಹೋರಾಟ ॥ ಪ ॥

ಬುಲೆಟ್ಟು ನಿಮ್ಮದು ಬ್ಯಾಲೆಟ್ಟು ನಮ್ಮದು
ನಡೆದಿದೆ ಹೋರಾಟ
ಕತ್ತಲೆ ಮುಖಗಳ ಬೆಳಕಿನ ಕುಡಿಗಳ
ನಡುವಿನ ಹೋರಾಟ

ಭ್ರಾಂತಿ ನಿಮ್ಮದು ಕ್ರಾಂತಿ ನಮ್ಮದು
ನಡೆದಿದೆ ಹೋರಾಟ
ನೆತ್ತರ ಕೈಗಳ ಅಕ್ಷರ ಕೈಗಳ
ನಡುವಿನ ಹೋರಾಟ

ಮೌನ ನಿಮ್ಮದು ಮಾತು ನಮ್ಮದು
ನಡೆದಿದೆ ಹೋರಾಟ
ಗುಂಡಿಗೆ ಇರುವ ಅದು ಇರದವರ
ನಡುವಿನ ಹೋರಾಟ

ದಮನ ನಿಮ್ಮದು ಕದನ ನಮ್ಮದು
ನಡೆದಿದೆ ಹೋರಾಟ
ವಿಳಾಸದವರ ವಿಲಾಸದವರ
ನಡುವಿನ ಹೋರಾಟ

**ಡಾ. ಕಾ. ವೆಂ. ಶ್ರೀನಿವಾಸಮೂರ್ತಿ**
'ಅಕ್ಷರ', # ೯೬೫, ೧ನೇ ಮುಖ್ಯರಸ್ತೆ, ಚಿನ್ನಣ್ಣ ಬಡಾವಣೆ, ಕಾವಲು ಬೈರಸಂದ್ರ, ಬೆಂಗಳೂರು – ೫೬೦೦೩೨



**ಅಭಿನಂದನೆ.....**

ಧಾರವಾಡದಲ್ಲಿ ನಡೆಯಲಿರುವ ೮೪ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನವು ಡಿಸೆಂಬರ್ ೭, ೮, ೯ರಂದು ನಡೆಯಲಿದ್ದು ಅದರ ಅಧ್ಯಕ್ಷರಾಗಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಕವಿ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಡಾ|| ಚಂದ್ರಶೇಖರ ಕಂಬಾರ ಅವರು ಆಯ್ಕೆಯಾಗಿದ್ದಾರೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ'ದ ಹೃತ್ಪೂರ್ವಕ ಅಭಿನಂದನೆಗಳು.



ಕಾರ್ಖಾನೆಯು ೧೯೬೦-೬೧ನೇ ಸಾಲಿಗೆ ಎಪ್ಪತ್ತು ಪೈಸೆ ಹೆಚ್ಚುವರಿ ಬೆಲೆಯನ್ನು ನೀಡಬೇಕೆಂದು ಆದೇಶ ಹೊರಡಿಸಿ ರೈತರ ಹೋರಾಟಕ್ಕೆ ತಣ್ಣೀರೆರಚಿತು. ಪರಿಣಾಮವಾಗಿ, ಹಠ ಹಿಡಿದ ಹೊಸಪೇಟೆಯ ರೈತ ಸಂಘವು ೧೯೭೯ರಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ದಾವೆ ಹೂಡಿತು. (ದಾವೆ ನಂ – ೩೩೩: ೧೯೭೯). ಏಕಸದಸ್ಯ ಸಮಿತಿ ಸಲಹೆಯಂತೆ ಕಾರ್ಖಾನೆಯು ೧೯೬೦-೬೧ ಮತ್ತು ೬೧-೬೨ರ ಸಾಲಿಗೆ ಕಬ್ಬಿನ ಹೆಚ್ಚುವರಿ ಬೆಲೆ ಪಾವತಿಗೆ ರೈತರ ಸುಮಾರು ೧೫ರಿಂದ ೨೦ ಲಕ್ಷ ಕೊಡಬೇಕಿತ್ತು. ಆದರೆ ಸರ್ವೋಚ್ಚ ನ್ಯಾಯಾಲಯದಲ್ಲಿ ೧೮ ವರ್ಷ ದಾವೆ ನಡೆದು ಕೊನೆಗೆ ಅಂದರೆ ೧೯೯೭ರಲ್ಲಿ ಟನ್ನೊಂದಕ್ಕೆ ಕೇವಲ ಮೂವತ್ತೇಳು ಪೈಸೆಯನ್ನು ಹೆಚ್ಚುವರಿ ಬೆಲೆ ನೀಡಬೇಕೆಂದು ಆದೇಶ ನೀಡಿತು.

ರೈತ ಹೋರಾಟದಲ್ಲಿ ಹೊಸಪೇಟೆಯದು ಒಂದು ಸಮಸ್ಯೆಯಾದರೆ ಶಿರಾದ ರೈತ ಹೋರಾಟ ಮತ್ತೊಂದು ಸಮಸ್ಯೆ. ಉಳಿದ ರೈತ ಸಂಘಟನೆಗಳಂತೆ ಯಾವುದೇ ನಿರ್ದಿಷ್ಟ ಬಗೆಯ ಸೈದ್ಧಾಂತಿಕ ಹಿನ್ನೆಲೆಗಳಿಲ್ಲದೆ ಸರ್ಕಾರದ ಬೆಲೆ ನೀತಿಯನ್ನು ಹಿಂಸಾತ್ಮಕವಾಗಿ ಸ್ವಯಂ ಪ್ರೇರಣೆಯಿಂದ ೧೯೯೮ ಅಕ್ಟೋಬರ್ ತಿಂಗಳಲ್ಲಿ ಶಿರಾದ ರೈತರು ಪ್ರತಿಭಟಿಸಿದರು. ಶಿರಾ ಶೇಂಗಾ ಬೆಳೆಗೆ ಬಹಳ ಪ್ರಸಿದ್ಧವಾದದ್ದು. ಶೇಂಗಾ ಬೆಳೆಗೆ ಹೋರಾಟ ಮಾಡಿದ ಅಪರೂಪದ ಘಟನೆ ಇದು. ಈಗಾಗಲೇ ಗಮನಿಸಿರುವಂತೆ ಕಬ್ಬು, ಕಾಫಿ, ಭತ್ತ ಬೆಳೆಗಳ ಬೆಲೆಗಳ ಬಗ್ಗೆ ಆಗಾಗ ಕರ್ನಾಟಕ ರಾಜ್ಯ ರೈತ ಸಂಘ ಅಥವಾ ಇನ್ನುಳಿದ ಸಂಘಟನೆಗಳು ಹೋರಾಟ ಮಾಡಿರುವುದನ್ನು ನೋಡಿದ್ದೇವೆ. ಆದರೆ ಶೇಂಗಾಕ್ಕೆ ಸಂಬಂಧಿಸಿದ ಪ್ರಶ್ನೆಯು ೧೯೯೮ ಅಕ್ಟೋಬರ್‌ನಲ್ಲಿ ಕರ್ನಾಟಕ ರಾಜ್ಯಾದ್ಯಂತ ಚರ್ಚೆಗೆ ಒಳಗಾಯಿತು.

೧೯೯೮ರ ಅಕ್ಟೋಬರ್ ೨೭ರಂದು ಆ ದಿನ ಎಂದಿನಂತೆ ರೈತರು ೩೫.೦೦೦ಕ್ಕೂ ಹೆಚ್ಚು ಚೀಲ ಕಡಲೆಕಾಯಿಯನ್ನು ಶಿರಾದ ಎಪಿಎಂಸಿ ಮಾರುಕಟ್ಟೆಗೆ ತಂದರು. ಕೇವಲ ಒಂದು ವಾರದ ಹಿಂದೆ ಕ್ವಿಂಟಾಲ್‌ಗೆ ೧೪೦೦ ರೂ. ಇದ್ದದ್ದು, ನಿರೀಕ್ಷೆಗೂ ಮೀರಿದ ಹೆಚ್ಚಿನ ಫಸಲು ಮಾರುಕಟ್ಟೆಗೆ ಬಂದಾಕ್ಷಣ ಮಾರುಕಟ್ಟೆಯ ದಲ್ಲಾಳಿಗಳು ೧೪೦೦ ರೂ. ಇದ್ದ ಬೆಲೆಯನ್ನು ಏಕಾಏಕಿ ೬೦೦ ರೂ.ಗೆ ಇಳಿಸಿಬಿಟ್ಟರು. ಮಾರುಕಟ್ಟೆಯಲ್ಲಿ ಕ್ವಿಂಟಾಲ್ ಬೀಜಕ್ಕೆ ೧೮೦೦ ರೂ. ಕೊಟ್ಟು ಖರೀದಿಸಿ ಸಾವಿರಾರು ರೂ.ಗಳನ್ನು ಗೊಬ್ಬರಕ್ಕಾಗಿ ವಿನಿಯೋಗಿಸಿ ಶೇಂಗಾ ಬೆಳೆಗಾಗಿ ಖರ್ಚು ಮಾಡಿದ್ದ ರೈತರ ಹೆಗಲ ಮೇಲೆ ಸಾವಿರಾರು ರೂ.ಗಳ ಸಾಲದ ಹೊರೆ ಹೆಗಲೇರಿದಂತೆ ಅಲ್ಲವೆ?

೧೮೦೦ ರೂಪಾಯಿಯಿಂದ ಬೆಲೆಯನ್ನು ೬೦೦ ರೂಪಾಯಿಗೆ ಇಳಿಸಿದ್ದನ್ನು ರೈತರು ಉಗ್ರವಾಗಿಯೇ ಪ್ರತಿಭಟಿಸಿದರು. ರೈತರ ಆಕ್ರೋಶಕ್ಕೆ ಎಪಿಎಂಸಿ ಕಛೇರಿಯ ಗಾಜುಗಳು ಪುಡಿ ಪುಡಿಯಾದವು. ಅಲ್ಲಿಯೇ ಬೀಡು ಬಿಟ್ಟಿದ್ದ ತುಮಕೂರಿನ ಉಸ್ತುವಾರಿ ಸಚಿವ ಸತ್ಯ ನಾರಾಯಣ ಸ್ಥಳಕ್ಕೆ ಭೇಟಿ ನೀಡಿ ಉತ್ತಮ ಧಾರಣೆಗಾಗಿ ಮರು ಟೆಂಡರ್ ಹಾಕಿರುವುದಾಗಿಯೂ, ಇಲ್ಲವಾದಲ್ಲಿ ಬೀಜ ನಿಗಮವೇ ಒಟ್ಟು ಬೀಜವನ್ನು ಕೊಂಡುಕೊಳ್ಳುವಂತೆ ವ್ಯವಸ್ಥೆ ಮಾಡುವುದಾಗಿಯೂ ಹೇಳಿದರು. ಆದರೆ ಮಂತ್ರಿಯ ಭರವಸೆ ಈಡೇರಲಿಲ್ಲ. ರೈತರ ಆಕ್ರೋಶ ಮುಗಿಲಿಗೇರಿತು. ದಿನಾಂಕ ೧೮ರಂದು ೧೦.೦೦೦ಕ್ಕೂ ಹೆಚ್ಚಿನ ರೈತರು ಶಿರಾ ಬಳಿಯ ರಾಷ್ಟ್ರೀಯ ಹೆದ್ದಾರಿ ೪ರಲ್ಲಿ ಸೇರಿ 'ರಾಸ್ತಾ ರೋಕೋ' ಪ್ರಾರಂಭಿಸಿದರು. ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ರೈತರನ್ನು ಹತ್ತಿಕ್ಕಲು ಪೊಲೀಸರು ಗೋಲಿಬಾರ್ ಮಾಡಿದಾಗ ಕೆಲವು ರೈತರು ಪ್ರಾಣ ಕಳೆದುಕೊಂಡರು. ರೈತರು ಇದರಿಂದ ಕ್ರುದ್ಧರಾಗಿ ಪೊಲೀಸರ ಮೇಲೆ ಹಲ್ಲೆ ಮಾಡಿದರು. ಒಬ್ಬ ಡಿವೈಎಸ್‌ಪಿ ಹಾಗೂ ಒಬ್ಬ ಪೇದೆ ರೈತರಿಂದ ಹತರಾದರು. ರೈತರ ಆಕ್ರೋಶಕ್ಕೆ ಹತ್ತಾರು ಬಸ್ಸು ಲಾರಿಗಳು ಭಸ್ಮವಾದವು, ಹಿಂಸೆಯಿಂದಲೆ ಈ ಪ್ರತಿಭಟನೆ ಮುಗಿಯಿತು. ಇದು ಖಂಡಿತವಾಗಿಯೂ ಸರ್ಕಾರವು ಸ್ಪಷ್ಟವಾದ ಬೆಲೆಯ ನೀತಿಯನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಗದಿದ್ದಕ್ಕೆ ಒಂದು ಸೂಕ್ತ ಛಾಟಿ ಏಟನ್ನು ರೈತರು ನೀಡಿದರು. ಸ್ವಯಂ ಪ್ರೇರಣೆಯಿಂದಲೇ ಈ ಪ್ರತಿಭಟನೆ ನಡೆದಿದೆ ಎನ್ನುವುದಾದರೆ ಇಂತಹ ಸಂದರ್ಭಗಳು ಮತ್ತೊಮ್ಮೆ ಎದುರಾದರೆ ಪ್ರತಿಭಟನೆಗಳು ಎದುರಾಗುತ್ತಲೇ ಇರುತ್ತವೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ರೈತರ ಸಮಸ್ಯೆ ಕಾಲಘಟ್ಟದಿಂದ ಕಾಲಘಟ್ಟಕ್ಕೆ ಜರುಗುತ್ತಲೇ ಇದ್ದರೂ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಳ್ಳುತ್ತಿದೆ. ಯಾವುದೇ ಸರ್ಕಾರ ಬಂದರೂ ರೈತರ ಸಮಸ್ಯೆಯಂತೂ ನಿವಾರಣೆಯಾಗುತ್ತಿಲ್ಲ ಎನ್ನುವ ಮಟ್ಟಕ್ಕೆ ಇಂದಿನ ರೈತಾಪಿ ವರ್ಗ ಬಂದು ನಿಂತಿದೆ. ಯಾವುದೇ ಸರ್ಕಾರ ಅಧಿಕಾರಕ್ಕೆ ಬಂದರೂ ರೈತರ ಸಮಸ್ಯೆಗಳು ಭುಗಿಲೇಳುತ್ತಿವೆ. ಆದರೆ ಅದಕ್ಕೆ ಪರಿಹಾರ ಕಂಡುಕೊಳ್ಳದೆ ಸಾವೇ ಎಲ್ಲದಕ್ಕೂ ಪರಿಹಾರ ಎನ್ನುವಂತೆ ಇವತ್ತಿನ ಪೀಳಿಗೆ ಭಾವುಕವಾಗಿದೆ. ಸಾವು ಇಲ್ಲಿ ಬದುಕಿಗಿಂತ ಅಗ್ಗ. ಅನ್ನ ಉಣಿಸುವವನ ಬಾಯಲ್ಲಿ ಮಣ್ಣು ಬಹು ಸರಾಗವಾಗಿ ಬೀಳುತ್ತಿದೆ. ಅದನ್ನು ಮುಂದಿಟ್ಟುಕೊಂಡು ಎಲ್ಲಾ ರಾಜಕೀಯ ಪಕ್ಷಗಳು ಭರ್ಜರಿ ಲಾಭ ಪಡೆಯುವುದಕ್ಕೆ ಹೊರಡುತ್ತವೆ. ಸತ್ತವನ ಮನೆಗೆ ಹೋಗಿ ಕಾಸು ಕೊಡುವುದು, ಹಾಲಿ ಸರ್ಕಾರವನ್ನು ಹೀಯಾಳಿಸುವುದು, ತಾವು ಮಾತ್ರ ರೈತ ಪರ ಎಂದು ಬಿಂಬಿಸಿಕೊಳ್ಳುವುದು ನಡೆಯುತ್ತಲೇ ಇದೆ. ಆಳುವ ಪಕ್ಷ ಸಹ ಹೆದರಿಕೊಂಡು ರೈತನ ಬಾಕಿ ಹಣವನ್ನು ತಾನೇ ಪಾವತಿಸುವುದಾಗಿ ಹೇಳಿ ಪ್ಯಾಕೇಜ್ ಘೋಷಣೆ ಮಾಡುತ್ತದೆ. ಅಲ್ಲಿಗೆ ಎಲ್ಲಾ ಮುಕ್ತಾಯ. ಪ್ರತಿಪಕ್ಷಗಳು ತಮ್ಮ ಹೋರಾಟಕ್ಕೆ ಸಿಕ್ಕ ಜಯವಿದು ಅಂತ ತಮ್ಮ ಬೆನ್ನನ್ನು ತಾವೇ ತಟ್ಟಿಕೊಳ್ಳುತ್ತವೆ. ಸರ್ಕಾರ ಕೂಡ ಎಲ್ಲದಕ್ಕೂ ತಿಪ್ಪೆ ಸಾರಿಸಿದ ರೀತಿಯಲ್ಲಿ ನಿಟ್ಟುಸಿರು ಬಿಡುತ್ತಿದೆ. ಇಷ್ಟಕ್ಕೆ ಎಲ್ಲವೂ ಮುಗಿದು ಹೋಯಿತೇ?

ಒಂದಿಷ್ಟು ಸಾಲಕ್ಕೆ, ಅದು ತಂದಿಡುವ ಆತಂಕಕ್ಕೆ ತುಂಬು ಬದುಕನ್ನೇ ಬರಿದುಮಾಡಿಕೊಂಡವನ ಅಂತ್ಯ ಒಂದಿಷ್ಟು ಪುಡಿಕಾಸಿನ ಪರಿಹಾರದೊಂದಿಗೆ ತಾಳೆಯಾಗಲು ಸಾಧ್ಯವೇ? ಅಷ್ಟರ ಮಟ್ಟಿಗೆ ರೈತನ ಬದುಕು ಅಗ್ಗವೇ? ಇಂಥ ಪ್ರಶ್ನೆಗೆ ಉತ್ತರ ನಮ್ಮಲ್ಲೇ ಇಲ್ಲ. ಕನಿಷ್ಠ ಮುಂದೆ ಅಥವಾ ರೈತರ ಸ್ವಯಂ ಹತ್ಯೆಗಳು ತಡೆಯುವಂಥ ದೂರಗಾಮಿ ಯೋಜನೆಗಳನ್ನು ನಮ್ಮ ಸರ್ಕಾರ ಯಾಕೆ ತೆಗೆದುಕೊಳ್ಳುವುದಿಲ್ಲ? ಇವತ್ತು ರೈತನ ಸಾವನ್ನೆ ಬಂಡವಾಳ ಮಾಡಿಕೊಳ್ಳುವ ಎಲ್ಲಾ ರಾಜಕೀಯ ಪಕ್ಷಗಳು ಯಾಕೆ ಪರಿಹಾರ ಸೂಚಿಸುವುದಿಲ್ಲ? ಯಾಕೆಂದರೆ ಇಲ್ಲಿ ಎಲ್ಲರೂ ಯಥಾಸ್ಥಿತಿವಾದಿಗಳೆ. ರೈತರು ಮಾತ್ರ ಹುಳುಹುಪ್ಪಟೆಗಳ ಹಾಗೆ ದೈನೇಸಿಯಾಗಿ ಸಾಯುತ್ತಲೇ ಇರುತ್ತಾರೆ. ಮತ್ತದೇ ಪ್ರತಿಭಟನೆ, ಪರಿಹಾರ ಮತ್ತು ತಾತ್ಕಾಲಿಕ ಪ್ಯಾಕೇಜುಗಳು, ಸಾಲಮನ್ನಾ, ಹೊಸ ಸಾಲಗಳು ಇದನ್ನು ಮೀರಿ ರೈತ ಸಮುದಾಯವನ್ನು ಉದ್ಧರಿಸುವುದಕ್ಕೆ ಬೇರೆ ಮಾರ್ಗವೇ ಇಲ್ಲವೆ?

ಉಣ್ಣುವ ಅಕ್ಕಿಯ ಬೆಲೆ ಈಗ ಕೆಜಿಗೆ ೬೦ ರೂಪಾಯಿಗಳ ಗಡಿಯನ್ನು ದಾಟಿ ನಿಂತಿದೆ. ಆದರೂ ಅನ್ನವನ್ನು ತ್ಯಜಿಸಲಾಗದ ಮಧ್ಯಮ ವರ್ಗ ಗೊಣಗುತ್ತಲೇ ಅಕ್ಕಿ ಕೊಳ್ಳುತ್ತಾರೆ. ರೈತರೆಲ್ಲಾ ಸೋಮಾರಿಗಳಾಗಿಹೋದರು, ಭೂಮಿಯನ್ನೆಲ್ಲಾ ತೆಕ್ಕಲು ಬಿಟ್ಟುಕೊಂಡಿದ್ದರ ಫಲ, ಅಕ್ಕಿ ದುಬಾರಿಯಾಗಿ ಹೋಯ್ತು ಅಂತ ರೈತನನ್ನೇ ದೂರುತ್ತಾರೆ. ಈಗ ನೇಗಿಲ ಮೇಳಿ ಹಿಡಿದುಕೊಂಡು ಉತ್ತು ಬಿತ್ತಿದ ರೈತನ ದೃಷ್ಟಿಕೋನಕ್ಕೆ ಬನ್ನಿ, ಯಾವುದೋ ಒಂದು

ಸರ್ಕಾರ ಭತ್ತಕ್ಕೆ ೧೨೦೦ ರೂಪಾಯಿ ಎಂದು ಬೆಂಬಲ ಬೆಲೆ ಘೋಷಿಸುತ್ತದೆ. ಆ ಬೆಲೆಗೆ ಭತ್ತ ಮಾರಿದ ಉಸ್ತಾದ್ ದುರ್ಬೀನು ಹಾಕಿಕೊಂಡು ಹುಡುಕಿದರೂ ಸಿಕ್ಕುವುದಿಲ್ಲ. ಇವತ್ತಿಗೂ ಕ್ವಿಂಟಾಲ್ ಭತ್ತಕ್ಕೆ ದಲ್ಲಾಳಿಗಳು ೯೫೦ ರೂಗಳಿಗಿಂತ ಹೆಚ್ಚು ನಿಗದಿಪಡಿಸುವುದಿಲ್ಲ. ಇಲ್ಲಿ ಒಂದೆರಡು ಖರ್ಚುಗಳು ಇರಬಹುದು. ಆದರೆ ಅದೇ ಒಟ್ಟಾರೆ ಪರಿಸ್ಥಿತಿಯಲ್ಲ. ಕ್ವಿಂಟಾಲ್ ಭತ್ತಕ್ಕೆ ೭೫ ಕೆಜಿ ಅಕ್ಕಿ ಸಿಗುವುದು ಗ್ಯಾರಂಟಿ. ಅದು ಸರಾಸರಿ ೪೦ ರೂ.ನಂತೆ ಮಾರಾಟವಾದರೂ ಮೂರು ಸಾವಿರಗಳಿಗೆ ಮಾರಾಟವಾಗುತ್ತದೆ. ಭತ್ತ ಬಿಡಿಸಿದ ರೈಸ್ ಮಿಲ್ ಕೂಲಿ, ನುಚ್ಚು, ತೌಡು, ಜೊಳ್ಳಿಗೆ ವಜಾ ಹಾಕುವುದರಿಂದ ಅಲ್ಲಿ ಖರ್ಚೇನೂ ಬರುವುದಿಲ್ಲ. ಅಲ್ಲಿಗೆ, ದಲ್ಲಾಳಿ ಜೇಬಿಗೆ ಮೂರು ಸಾವಿರ ರೂಪಾಯಿ ಅಷ್ಟೆ.

ರೈತ ಬೆವರು ಸುರಿಸಿ ಆರು ತಿಂಗಳು ಬೆಳೆದ ಫಸಲಿಗೆ ಒಂದು ಸಾವಿರ ರೂಪಾಯಿಯನ್ನೂ ಕೊಡಲಾರದ ನಮ್ಮ ದಲ್ಲಾಳಿ ವ್ಯವಸ್ಥೆ ಅದನ್ನು ಮೂರು ಸಾವಿರ ರೂಪಾಯಿಗಳಿಗೆ ಮಾರಿಕೊಳ್ಳುತ್ತದೆ. ರೈತನಿಗೆ ದಕ್ಕುವ ಪುಡಿಗಾಸು ಅವನ ಬಿತ್ತನೆ, ಗೊಬ್ಬರ, ಕ್ರಿಮಿನಾಶಕ, ಮತ್ತು ಕೃಷಿ ಕಾರ್ಮಿಕರ ಕೂಲಿಗಳನ್ನು ಲೆಕ್ಕ ಹಾಕುತ್ತಾ ಹೋದರೆ, ಅಲ್ಲಿ ಗಂಟಿಗೇ ಖೋತಾ. ರೈತನ ದುಡಿಮೆಯನ್ನಂತೂ ಲೆಕ್ಕ ಹಾಕಲು ಸಾಧ್ಯವಿಲ್ಲ. ಇದು ಕೇವಲ ಭತ್ತ ಬೆಳೆದವನ ಹಣೆಬರಹವಲ್ಲ. ರೈತನ ಎಲ್ಲಾ ಉತ್ಪನ್ನಗಳ ಹಣೆಬರಹವೂ ಇಷ್ಟೆ. ಊರಿನಲ್ಲಿ ಐದು ರೂಪಾಯಿಗೆ ಎಳನೀರು ಮಾರಾಟ ಮಾಡುವ ರೈತ, ಅದು ನಗರಕ್ಕೆ ಬಂದಾಗ ೨೦ ರೂ. ಕೊಟ್ಟು ಅದೇ ಎಳನೀರು ಕುಡಿಯಬೇಕಾದಾಗ ಅವನ ಕಣ್ಣಲ್ಲಿ ರಕ್ತ ಹರಿದುಬರುತ್ತದೆ. ನಡುವಿನ ೧೫ ರೂಪಾಯಿಯನ್ನು ಯಾರು ತಿನ್ನುತ್ತಿದ್ದಾರೆ? ಆ ಎಲ್ಲಾ ದಲ್ಲಾಳಿಗಳನ್ನು ಹೊಗಲಾಡಿಸಿ, ಒಟ್ಟಾರೆ ಮಾರಾಟದ ಮೊತ್ತ ರೈತನಿಗೆ ತಲುಪುವಂತೆ ಮಾಡಿದರೆ ಸಾಕು, ರೈತ ಬದುಕಿಕೊಳ್ಳುತ್ತಾನೆ. ಅವನಿಗೆ ಯಾರ ಮೊಸಳೆ ಕಣ್ಣೀರು ಬೇಕಿಲ್ಲ. ಸಾಲ ಮನ್ನಾ ಎಂಬುವ ಭಿಕ್ಷೆಯು ಸಹ ಅನಗತ್ಯ. ಅವನ ಬೆಳೆಗೆ ಮಾರುಕಟ್ಟೆಯಲ್ಲಿ ಮಾರಾಟವಾಗುವ ಮುಕ್ಕಾಲು ಭಾಗದಷ್ಟಾದರೂ ಬೆಲೆ ಕೊಡಿಸಿದರೆ ಕೃಷಿ ಅತ್ಯಂತ ಆಕರ್ಷಕ ಕ್ಷೇತ್ರವಾಗಿ ತೆರೆದುಕೊಳ್ಳುತ್ತದೆ. ಅನ್ನದಾತ ನೆಮ್ಮದಿಯಿಂದ ಬದುಕುತ್ತಾನೆ. ಇಷ್ಟಕ್ಕೂ ಈ ಒಂದು ಕೆಲಸ ಅಸಾಧ್ಯವಾದದ್ದೇ?

ಬೀದಿಯಲ್ಲಿ ಕುಳಿತು ಪಾಪ್ ಕಾರ್ನ್ ಮಾರುವವನಿಂದ ಹಿಡಿದು ಕಾರ್ಪೊರೇಟ್ ವ್ಯವಹಾರದ ತನಕ ಯಾವುದೇ ಕ್ಷೇತ್ರವನ್ನು ಗಮನಿಸಿ, ಅಲ್ಲಿ ಅವನ ಉತ್ಪನ್ನಕ್ಕೆ ತಾನೇ ಬೆಲೆ ನಿಗದಿ ಮಾಡುತ್ತಾನೆ. ವ್ಯಾಪಾರ ಆಗುವುದು ಬಿಡುವುದು ಮುಂದಿನ ವಿಚಾರ. ಅವರ ವ್ಯವಹಾರದಲ್ಲಿ ಅವನೇ ಉಸ್ತಾದ್. ಆದರೆ ರೈತನ ಉತ್ಪಾದನೆಗಳಿಗೆ ಹೀಗೆ ಆಗುವುದೇ ಇಲ್ಲ. ಎಪಿಎಂಸಿಯ ದಲ್ಲಾಳಿಗಳು ಇಲ್ಲಿ ಬೆಲೆ ನಿಗದಿಪಡಿಸಬೇಕು. ಅಲ್ಲಿ ಹರಾಜ್ ಕೂಗಿದರೆ ಉಂಟು, ಇಲ್ಲವಾದರೆ ಫಸಲು ಸಾಗಾಟದ




ಕೂಲಿಯೂ ದಕ್ಕದೆ ಕೈ ಒದರಿಕೊಂಡು ವಾಪಸ್ಸಾಗಬೇಕು. ಇದರ ಮಧ್ಯೆ ಸಾಲ ಕೊಟ್ಟ ಬ್ಯಾಂಕುಗಳು ನಕ್ಷತ್ರಿಕನ ಹಾಗೆ ಕಾಡೋಕೆ ಶುರು ಮಾಡುತ್ತವೆ. ನೋಟಿಸ್‌ನ ಮೇಲೆ ನೋಟಿಸ್ ಜಡಿದು, ಜಪ್ತಿ ಮಾಡುವ ಬೆದರಿಕೆ ಒಡ್ಡುತ್ತವೆ. ಆದರೆ ಹೂಡಿದ ಬೆಳೆಯಿಂದ ಹಣವೇ ವಾಪಸ್ಸಾಗದೆ ಆತನ ಸಾಲ ಮರುಪಾವತಿ ಹೇಗೆ ತಾನೆ ಮಾಡುತ್ತಾನೆ ಎಂಬ ಕಾಮನ್ ಸೆನ್ಸ್ ನಮ್ಮ ಆಳುವ ವರ್ಗಗಳಿಗೆ ಇಲ್ಲ. ಯಾವುದೇ ರೈತ ತನ್ನೆಲ್ಲಾ ಭಂಗಗಳಿಗೆ ಆಶ್ರಯಿಸೋದೆ ತನ್ನ ಫಸಲು ಮಾರಾಟದ ಹಣದ ಮೇಲೆಯೆ. ಮಂಡ್ಯ ಜಿಲ್ಲೆಯ ಯಾವುದೇ ರೈತನ ಮಾತನ್ನೇ ಕೇಳಿ, ಅದು ಮದುವೆಯಿರಲಿ, ಮಕ್ಕಳನ್ನು ಓದಿಸುವುದಾಗಲಿ, ಎಲ್ಲದಕ್ಕೂ ಕಬ್ಬಿನ ದುಡ್ಡೇ ಬರಬೇಕು. ಸಾಲ ಮರುಪಾವತಿಗೂ ಅಷ್ಟೆ. ಆ ದುಡ್ಡೆ ಬರದಿದ್ದರೆ? ಸಕ್ಕರೆ ಕಾರ್ಖಾನೆಗಳು ಎರಡೆರಡು ವರ್ಷಗಳಿಂದ ಕಬ್ಬು ಪೂರೈಕೆಯ ಹಣವನ್ನೇ ಪಾವತಿಸಿಲ್ಲ. ಅವನು ಸಾಲ ತೀರಿಸುವ ಮಾತು ಎಲ್ಲಿಂದ ಬರುತ್ತದೆ? ಯಾವುದೇ ಬೇರೆ ಆದಾಯದ ಮೂಲಗಳಿಲ್ಲದ ರೈತ ಇಲ್ಲಿಯವರೆಗೂ ಅನ್ನ ಉಂಡು ಬದುಕಿರುವುದೇ ಅತಿಶಯ. ಒಬ್ಬ ಸರ್ಕಾರಿ ನೌಕರ ಒಂದು ತಿಂಗಳು ಸಂಬಳ ಬರದಿದ್ದರೆ ತತ್ತರಿಸಿ ಹೋಗುತ್ತಾನೆ. ಇನ್ನು ಎರಡು ವರ್ಷಗಳ ಮಾತಂತೂ ದೂರವೇ ಉಳಿಯಿತು.

ಸರ್ಕಾರಿ ನೌಕರನಿಗೆ ಉಣ್ಣಲು ಸಂಬಳವನ್ನೆ ಕೊಡದೆ, ಈ ಹಿಂದೆ ಕೊಟ್ಟ ಸಾಲದ ಕಂತು ಮರುಪಾವತಿ ಮಾಡು ಎಂದು ನೋಟೀಸ್ ಕೊಟ್ಟರೆ ಎಷ್ಟರ ಮಟ್ಟಿಗೆ ಅಮಾನವೀಯ ಎನಿಸುತ್ತದೆಯೋ, ಇದು ಅದಕ್ಕಿಂತಲೂ ಘೋರವಾದದ್ದು. ನಿಜ, ಬ್ಯಾಂಕುಗಳು ವ್ಯವಹರಿಸುವುದಕ್ಕಾಗಿಯೇ ಇವೆ. ಹಾಗಂತ ಅಲ್ಲಿ ಮಾನವೀಯತೆ ಚಿಹ್ನೆ ಇರಬಾರದೆ? ಅವುಗಳನ್ನು ನಿಯಂತ್ರಿಸುವ ಸರ್ಕಾರಗಳು ಮನುಷ್ಯತ್ವವನ್ನು ಕಳೆದುಕೊಂಡಿವೆಯಾ? ಹಾಗಿದ್ದರೆ ಪ್ರಜಾಪ್ರಭುತ್ವಕ್ಕೆ ಅರ್ಥವಾದರೂ ಏನಿದೆ?

ಒಂದು ಪ್ರಗತಿಪರ ನಿಲುವು ತೆಗೆದುಕೊಳ್ಳಲು ಹೊರಟಾಗ ಸಹಜವಾಗಿಯೇ ಸರ್ಕಾರಕ್ಕೆ ಹಲವಾರು ಸವಾಲುಗಳು ಎದುರಾಗುತ್ತವೆ. ಕೇಂದ್ರೀಕೃತ ಮಾರಾಟ ವ್ಯವಸ್ಥೆ ಸಣ್ಣಪುಟ್ಟ ವರ್ತಕರು, ದಲ್ಲಾಳಿಗಳು ನಿರುದ್ಯೋಗಿಗಳಾಗುತ್ತಾರೆ, ಬೀದಿಗೆ ಬೀಳುತ್ತಾರೆ, ಪ್ರತಿಭಟನೆಗಳು ಜರುಗಬಹುದು. ಆದರೆ ಸರ್ಕಾರದ ಆದ್ಯತೆ ಯಾವತ್ತೂ ನೈತಿಕತೆಯ ಪರವಾಗಿರಬೇಕು. ಈ ಹಿಂದೆ ಸಾರಾಯಿ ನಿಷೇಧವಾದಾಗಲು ಇಂಥದ್ದೇ ಕೂಗುಗಳಿದ್ದವು. ಸಾರಾಯಿ ಮಾರಾಟಗಾರರು ಬೀದಿಗೆ ಬೀಳುತ್ತಾರೆ, ಅವರಿಗೆ ಪುನರ್ವಸತಿ ಕಲ್ಪಿಸಬೇಕು ಅಂತ ರಚ್ಚೆ ಹಿಡಿದರು. ಆದರೆ ಅವರು ಸಾರಾಯಿ ಮಾರಾಟದಿಂದ ಎಷ್ಟು ಸಂಸಾರಗಳು ಬೀದಿಗೆ ಬಂದವು ಎಂಬುದನ್ನು ಮಾತ್ರ ಅವರು ತೋರಿಸಿಕೊಳ್ಳುವುದಿಲ್ಲ. ಅವತ್ತು ಸರ್ಕಾರ ಅದಕ್ಕೆ ಬಗ್ಗದೇ ಸಾರಾಯಿ ನಿಷೇಧವನ್ನು ಕೈಗೊಂಡಿತು.

ಇಲ್ಲಿಯೂ ಸರ್ಕಾರ ಅಂಥದ್ದೇ ದಿಟ್ಟ ನಿರ್ಧಾರವನ್ನು ಕೈಗೊಳ್ಳಬೇಕು. ರೈತರ ರಕ್ತ ಹೀರಿ ಜಿಗಣೆ ಜಾತಿಯ ದಲ್ಲಾಳಿಗಳಿಗಿಂತ ಅನ್ನ ಕೊಡುವ ಅನ್ನದಾತನ ಹಿತಾಸಕ್ತಿಗಳೇ ಇಲ್ಲಿ ಮುಖ್ಯವಾಗಬೇಕು. ದಲ್ಲಾಳಿ ಮತ್ತು ರೈತನ ನಡುವಿನ ಆರ್ಥಿಕತೆಯನ್ನು ಹೋಲಿಕೆ ಮಾಡಿ ನೋಡಿ. ಅಲ್ಲಿ ಅಜಗಜಾಂತರ ವ್ಯತ್ಯಾಸಗಳು ಕಾಣುತ್ತವೆ. ಯಾವುದೇ ಉತ್ಪನ್ನದ ಎಪಿಎಂಸಿಯಲ್ಲಿ ಕಾಣುವಂತಹ ಚಿತ್ರಣಗಳು ಇವು.

ಅಲ್ಲಿನ ದಲ್ಲಾಳಿ ಹತ್ತೂ ಬೆರಳಿಗೆ ಉಂಗುರ ಹಾಕಿಕೊಂಡು, ಕೊರಳಿಗೆ ಹಗ್ಗದಂತಿರುವ ಚೈನ್ ಹಾಕಿಕೊಂಡು, ಕಂತೆ ಕಂತೆ ನೋಟು ಎಣಿಸುತ್ತಾ ಜಬರ್ದಸ್ ಮಾಡುತ್ತಾನೆ. ಅವನ ವ್ಯವಹಾರದ ಜೀವಾಳವೇ ರೈತ. ರೈತ ಅಲ್ಲಿಗೆ ಉತ್ಪನ್ನ ತರದಿದ್ದರೆ ಅವನ ಅಂಗಡಿ ಶಟರ್ ಎಳೆದು ಮನೆಯ ಕಡೆ ನಡೆಯಬೇಕಾಗುತ್ತದೆ. ಅಲ್ಲಿಗೆ ರೈತನೆ ಅಲ್ಲಿನ ಬಂಡವಾಳ. ಇಂಥ ಜೀವಾಳ ರೈತ ಅದೇ ವರ್ತಕನ ಎದುರಿಗೆ ಹಲ್ಲು ಕಿರಿದು ನಿಲ್ಲುತ್ತಾನೆ. ಚಿನ್ನ ಧರಿಸೊ ಮಾತು ಇರಲಿ, ಮಧ್ಯಾಹ್ನ ಒಂದು ಪ್ಲೇಟ್ ಅನ್ನ ಉಂಡರೆ, ಊರಿಗೆ ವಾಪಸ್ಸಾಗಲು ಕಾಸಿನ ಕೊರತೆ ಯಾಗುವ ಭೀತಿ ಅವನಿಗೆ. ಇಷ್ಟೊಂದು ತಾರತಮ್ಯದ ವ್ಯವಹಾರ ನಡೆಸುವ ವರ್ತಕರು ಈಗಾಗಲೆ ಸಾಕಷ್ಟು ದುಂಡಾಗಳಾಗಿದ್ದಾರೆ. ಇಡೀ ಎಪಿಎಂಸಿ ವ್ಯವಸ್ಥೆ ಬುಡ ಕತ್ತರಿಸಿದ ಬಾಳೆಯ ಹಾಗೆ ಮಲಗಿಕೊಂಡರೂ ಬೇರೆ ವ್ಯವಹಾರ ನೋಡಿಕೊಳ್ಳುವಷ್ಟು ಸ್ವಯಂಬಲ ಖಂಡಿತವಾಗಿಯೂ ನಮ್ಮ ರೈತರಲ್ಲಿದೆ. ಅವರಿಗೆ ಬೇಕಾಗಿರುವುದು ಸರ್ಕಾರದ ಕಣ್ಣೀರಲ್ಲ, ಅಥವಾ ಹೆಚ್. ಡಿ. ಕುಮಾರಸ್ವಾಮಿ, ಬಿ. ಎಸ್. ಯಡಿಯೂರಪ್ಪ ಹಾಗೂ ಸಿದ್ದರಾಮಯ್ಯನವರ ಕಣ್ಣೀರಲ್ಲ. ಅವರಿಗೆ ಉತ್ಪನ್ನದ ನಿಗದಿತ ಬೆಲೆಯ ಬೆಳೆಗೆ ತಕ್ಕ ಬೆಲೆ ಬೇಕು. ಅವರಿಗೆ ನ್ಯಾಯಕೊಡಿ, ಅವರ ಆರ್ಥಿಕ ಭದ್ರತೆಯನ್ನು ಅವರೆ ಮಾಡಿಕೊಳ್ಳುತ್ತಾರೆ.


**ಹಾರೋಹಳ್ಳಿ ರವೀಂದ್ರ**
ಹಾರೋಹಳ್ಳಿ ಗ್ರಾಮ ಮತ್ತು ಅಂಚೆ, ವರುಣಾ ಹೋಬಳಿ
ಮೈಸೂರು ತಾಲ್ಲೂಕು ಮತ್ತು ಜಿಲ್ಲೆ



'ಚೆ'ನ ಕೆಳಗೆ ಕೆಲಸ ಮಾಡಿದ ಟೊಮಾಸ್ ಆಲ್ಬ ಎಂಬ ಹೋರಾಟಗಾರ ಹೇಳುತ್ತಾನೆ; " 'ಚೆ' ಉಗ್ರ ಶಿಸ್ತಿನವನು, ನಮ್ಮಿಂದ ಮಿತಿಮೀರಿದ ಪ್ರಯತ್ನವನ್ನು ಅಪೇಕ್ಷಿಸುತ್ತಿದ್ದವನು. ಇಷ್ಟಾಗಿಯೂ ನಾವು ಅವನನ್ನು ಗಾಢವಾಗಿ ಪ್ರೀತಿಸುತ್ತಿದ್ದೆವು. ಅವಶ್ಯವಿದ್ದರೆ ಪ್ರಾಣವನ್ನೇ ಆತನಿಗಾಗಿ ಕೊಡಲು ಸಿದ್ಧರಿದ್ದೆವು."

# ಖಂಡಾಂತರ ಸ್ಫೂರ್ತಿಯ ಆಯುಧ – ಚೆ ಗೆವಾರ

ಬದುಕಿನ ಚೆಲುವೆಲ್ಲದರ ಪ್ರತೀಕವಾದ ಈ ಚೆ ಗೆವಾರ ಸತ್ತು ಐವತ್ತು ವರ್ಷಗಳೇ ಕಳೆದಿವೆ. ಆದರೆ ದಿನಗಳೆದಂತೆ ಅವನ ನೆನಪು ಆತ ತುಂಬ ಇಷ್ಟಪಡುತ್ತಿದ್ದ ವೈನ್ ಮದ್ಯದಂತೆಯೇ ಹೆಚ್ಚು ಸವಿಯಾಗುತ್ತಿದೆ, ಹೆಚ್ಚು ಕನಸು, ಕೆಚ್ಚುಗಳನ್ನು ಎದೆಯಲ್ಲಿ ಹೊತ್ತಿಸುತ್ತಿದೆ. ಇದೊಂದು ಜಗತ್ತನ್ನು ಆವರಿಸಿರುವ ವಿಸ್ಮಯ!

ಇದೀಗ ಬಂಡವಾಳಶಾಹಿ ಜಗತ್ತಿನ ಸರಕು ಮಾರಾಟಕ್ಕೂ ಚೆ ಗೆವಾರ ಪ್ರೇರಣೆಯಾಗಿರುವುದು ಮಾತ್ರ ಒಂದು ವಿಪರ್ಯಾಸ! ಆತನ ಹೆಸರಿನ ಟೀ ಶರ್ಟು, ಕ್ಯಾಪು, ಬ್ಯಾಗು ಎಲ್ಲವೂ ಮಾರುಕಟ್ಟೆಯಲ್ಲಿ ಹಲವು ಬಣ್ಣ, ವಿನ್ಯಾಸಗಳಲ್ಲಿ ಲಭ್ಯ. ಯುವ ಜನಾಂಗಕ್ಕೆ ಈತ ಅದೆಂಥ ಆಕರ್ಷಣೆಯೆಂದರೆ, ಮಾರುಕಟ್ಟೆ ಚೆ ಗೆವಾರನನ್ನು ಉಪೇಕ್ಷಿಸುವಂತಿಲ್ಲ. ಬಂಡವಾಳ ಮತ್ತು ಲಾಭಕ್ಕೆ ಗೋರಿ ತೋಡಿದ ಕಾರ್ಲ್ ಮಾರ್ಕ್ಸ್‌ರ ಪುಸ್ತಕಗಳನ್ನು ಮಾರಾಟ ಮಾಡಿಯೇ ಬಂಡವಾಳಗಾರರು ನೂರಾರು ಕೋಟಿ ಲೂಟಿ ಹೊಡೆಯುತ್ತಿಲ್ಲವೇ, ಹಾಗೆಯೇ ಇದು!

ಇಂಥ ವಿದ್ಯಮಾನವನ್ನು ನೋಡಿಯೇ ಲೆನಿನ್ ಒಮ್ಮೆ ಹೇಳಿದ್ದರು: "ಆಳುವ ವರ್ಗಗಳು ಒಬ್ಬ ಮಹಾನ್ ಕ್ರಾಂತಿಕಾರಿ ಬದುಕಿರುವವರೆಗೂ ಆತನ ಹೆಸರಿನ ಮೇಲೂ, ಆತನ ಚಿಂತನೆಯ ಮೇಲೂ ಕೆಸರೆರಚುತ್ತಾರೆ. ಆದರೆ ಸತ್ತ ಮೇಲೆ ಬೇಕಿದ್ದರೆ ಅವರನ್ನು ಅಪಾಯವಿಲ್ಲದ ಆರಾಧ್ಯ ದೈವಗಳನ್ನಾಗಿ ಮಾಡಲು ಯತ್ನಿಸುತ್ತಾರೆ. ಹೀಗೆ ಮಾಡುವುದರ ಮೂಲಕ ಅವರ ಬದುಕು ಹಾಗೂ ಚಿಂತನೆಗಳನ್ನು ವಿರೂಪಗೊಳಿಸುತ್ತಾರೆ. ಮತ್ತು ಅದೇ ಸಮಯದಲ್ಲಿ ತುಳಿತಕ್ಕೊಳಗಾದ ಜನರಿಗೆ ಒಂದಿಷ್ಟು 'ಸಾಂತ್ವನ' ಹೇಳಿ ಮೋಸಗೊಳಿಸುತ್ತಾರೆ." ಚೆ ಗೆವಾರ ಫ್ಯಾಷನ್ ಬಗ್ಗೆ ಆಳುವ ವರ್ಗದ ನಿಲುವಿರುವುದು ಹಾಗೆ. ಆತನನ್ನು ಒಬ್ಬ ರಮ್ಯವಾದಿ 'ತಾರೆ'ಯ ಪಟ್ಟಕ್ಕೇರಿಸಿ, ಸರಕುಗಳನ್ನೂ ಮಾರಾಟಮಾಡಿಕೊಂಡು ಆತನ ಸ್ಫೂರ್ತಿಯನ್ನು 'ಠುಸ್' ಎನ್ನಿಸುವುದು!

ಹೀಗಾಗಿಯೇ ಚೆ ಗೆವಾರರ ನೆನಪಿನಿಂದ ನಾವು ಕಲಿಯಬೇಕಾದದ್ದೇನು, ಪಡೆಯಬೇಕಾದದ್ದೇನು ಎಂಬುದನ್ನು ಈ ಹೊತ್ತು ಸ್ಪಷ್ಟಪಡಿಸಿಕೊಳ್ಳಬೇಕಾದದ್ದು ತೀರಾ ಅಗತ್ಯವಾಗಿದೆ.

**ಲ್ಯಾಟಿನ್ ಅಮೆರಿಕಾ ಎಂಬ ಕುಲುಮೆ**

ಅಮೆರಿಕಾ ಖಂಡಗಳ ಮಧ್ಯಭಾಗ ಮತ್ತು ದಕ್ಷಿಣ ಅಮೆರಿಕಾ ಅತ್ಯಂತ ಶ್ರೀಮಂತವಾದ ಭೂಭಾಗಗಳು. ಜಗತ್ತಿನಲ್ಲಿ ಎಲ್ಲೂ ಕಾಣದ ಸಸ್ಯಗಳು, ಪ್ರಾಣಿಗಳು ಇಲ್ಲಿವೆ. ಆಸಕ್ತರು ಬಿ.ಜಿ.ಎಲ್. ಸ್ವಾಮಿಯವರ ಪುಸ್ತಕ 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ'ವನ್ನು ನೆನಪಿಸಿಕೊಳ್ಳಬಹುದು. ಅತ್ಯಂತ ದಟ್ಟವೂ, ತನ್ನೊಳಗೆ ಅನೇಕ ಕೌತುಕಗಳನ್ನು ಅಡಗಿಸಿಕೊಂಡಿರುವಂಥದ್ದೂ ಆದ ಅಮೆಜಾನ್ ಕೊಳ್ಳ ಮತ್ತು ಅರಣ್ಯ ಇಲ್ಲಿಯದೇ ತಾನೆ. ಮನೋಹರವಾದ ಆ್ಯಂಡಿಸ್ ಪರ್ವತ, ಸುಂದರ ಜಲಪಾತಗಳು ಈ ಖಂಡದ ವೈಶಿಷ್ಟ್ಯ. ತಾಮ್ರ, ಗಂಧಕ, ಬೆಳ್ಳಿ, ಬಂಗಾರ, ಕಬ್ಬಿಣ ಹೀಗೆ ಇಲ್ಲಿ ಸಿಗದ ಅದಿರು ಯಾವುದು! ಅತ್ಯಂತ ಶ್ರೀಮಂತವೂ, ಪುರಾತನವೂ ಆದ ಇಂಕಾ ಮತ್ತು ಮಾಯಾ ನಾಗರಿಕತೆಗಳು ಇಲ್ಲಿನ ಇತಿಹಾಸ. ಸ್ಪೇನ್ ಮತ್ತು ಪೋರ್ಚುಗಲ್ ದೇಶದ ವಸಾಹತುಶಾಹಿ ದರೋಡೆಕಾರರು ಇವುಗಳನ್ನು ಶತಮಾನಗಳ ಕಾಲ ಲೂಟಿ ಹೊಡೆದರು. ನಾಗರಿಕತೆಗಳ ಶ್ರೇಷ್ಠ ಕಟ್ಟಡಗಳನ್ನು ಅಟವಿಕರಿಗಿಂತ ಕೆಟ್ಟ ರೀತಿಯಲ್ಲಿ ಧ್ವಂಸ ಮಾಡಿದರು.

**ಒಂದು ಹೋರಾಟದ ಪರಂಪರೆ**

ಲ್ಯಾಟಿನ್ ಅಮೆರಿಕಾವನ್ನು ಶೋಷಿಸಿದ್ದು ಕೇವಲ ಯುರೋಪಿನ ವಸಾಹತುಶಾಹಿ ರಾಷ್ಟ್ರಗಳಲ್ಲ. ಅಮೆರಿಕಾದ ಸಂಯುಕ್ತ ಸಂಸ್ಥಾನಗಳು (ಯು.ಎಸ್.ಎ.) ಎಲ್ಲ ರಾಷ್ಟ್ರಗಳನ್ನೂ ತಮ್ಮ ಸಾಮ್ರಾಜ್ಯಶಾಹಿ ಕಬಂಧಬಾಹುಗಳಲ್ಲಿ ಸಿಲುಕಿಸಿಕೊಂಡು ಹಿಂಡಿಬಿಟ್ಟಿವೆ. ಲೋಹದ ಅದಿರಿನ ಕಂಪೆನಿಗಳು, ಹಣ್ಣಿನ ಕಂಪೆನಿಗಳು ಎಲ್ಲವೂ ಕೊಳ್ಳೆ ಹೊಡೆಯಲು ಸಾಲುಸಾಲಾಗಿ ನಿಂತವು. ಹಾಗಾಗಿ ಅತ್ಯಂತ ಶ್ರೀಮಂತವಾದ ಈ ರಾಷ್ಟ್ರಗಳ ಜನತೆ ವಿಪರೀತ ಬಡವರಾಗೇ ಉಳಿದರು. ಇಂದಿಗೂ ಸಹ ಬ್ರೆಜಿಲ್, ಅರ್ಜೆಂಟೈನಾ ಮತ್ತು ಚಿಲಿಯಂಥ ಸಾಪೇಕ್ಷವಾಗಿ ದೊಡ್ಡದಾದ ರಾಷ್ಟ್ರಗಳಲ್ಲಿ ಸಹ ಸಾವಿರ ಸಾವಿರ ಸ್ಲಮ್ಮುಗಳಿವೆ. ಇಲ್ಲೆಲ್ಲಾ ಬೀದಿಮಕ್ಕಳು ತುಂಬಿ ತುಳುಕಾಡುತ್ತಿದ್ದಾರೆ. ವೇಶ್ಯಾವಾಟಿಕೆ, ಮಾದಕ ದ್ರವ್ಯದ ಮಾರಾಟ, ಪಾತಕಗಳು ಹೇರಳವಾಗಿರುವ ಈ ದೇಶಗಳು ಸಹಜವಾಗಿಯೇ ಸ್ವರ್ಗದಂತೆ ಅರಳಿಕೊಳ್ಳಬೇಕಾಗಿದ್ದ ಇವು ಇಂದು ನರಕಕೂಪಗಳಾಗಿವೆ. ಎಲ್ಲ ದೇಶಗಳಲ್ಲೂ ಒಂದು ಶ್ರೀಮಂತರ ಕೆನೆಪದರವಿದ್ದು, ಅದು ಸದಾ ಅಧಿಕಾರದಲ್ಲಿದ್ದು ಅಮೆರಿಕನ್ ಸಾಮ್ರಾಜ್ಯಶಾಹಿಗಳೊಂದಿಗೆ ಶಾಮೀಲಾಗಿ ವರ್ತಿಸುತ್ತಿದೆ.

ಇದೇ ಸಮಯದಲ್ಲಿ ಇಲ್ಲಿ ಅಸಂಖ್ಯಾತ ಹೋರಾಟಗಳು ನಡೆದಿವೆ. ಧೀರೋದಾತ್ತ ನಾಯಕರು ತಮ್ಮ ತ್ಯಾಗ ಬಲಿದಾನಗಳಿಂದ ಉಜ್ವಲವಾಗಿ ಉರಿದು ಹೋಗಿದ್ದಾರೆ. ಜೋಸೆ ಮಾರ್ಟಿ, ಬೊಲಿವಾರ್, ಸ್ಯಾಂಡಿನ್, ಪಾಂಚೋ ವಿಲ್ಲಾ, ಝಪಾಟಾ ಈ ಹೆಸರುಗಳೇ ರೋಮಾಂಚಕಾರಿ. ಇವರೆಲ್ಲರೂ ಅಸಾಮಾನ್ಯ ಗೆರಿಲ್ಲಾ ಸಶಸ್ತ್ರ ಹೋರಾಟದ ನೇತಾರರೂ ಹೌದು. ಲ್ಯಾಟಿನ್ ಅಮೆರಿಕಾದ ರಕ್ತದಲ್ಲೇ ಬಂಡಾಯ ಬೆರೆತುಹೋಗಿದೆಯೇನೋ ಎಂಬಂಥ ವೀರೋಚಿತ ಸಂಗ್ರಾಮದ ದಂತಕಥೆಗಳು ಗಾಳಿಯಲ್ಲೆ ತುಂಬಿಹೋಗಿವೆ.

**ಇಡೀ ಖಂಡಕ್ಕೆ ಸೇರಿದ ಕ್ರಾಂತಿಕಾರಿ 'ಚೆ'**

ಇಂಥ ಹಿನ್ನೆಲೆಯಲ್ಲಿ ಮೂಡಿಬಂದ ಇನ್ನೊಬ್ಬ ಸಿಡಿಮದ್ದಿನಂಥ ಸಾಹಸಿ ಹೋರಾಟಗಾರನೇ ಚೆ ಗೆವಾರ. ಒಂದಿಷ್ಟು ಬಾಸ್ಕ್ ರಕ್ತ, ಒಂದಿಷ್ಟು ಐರಿಷ್ ರಕ್ತ ಬೆರೆತು ಸ್ಫೋಟಕಾರಿಯಾದ ಹಿನ್ನೆಲೆಯನ್ನೇ ಹೊಂದಿದ್ದದ್ದು ಈತನ ವಂಶಾವಳಿ. ಅಷ್ಟೇನೂ ಬಡತನದ ಸಂಕಷ್ಟಗಳನ್ನು ಅರಿಯದೇ ಬೆಳೆದವನು ಅರ್ನೆಸ್ಟೋ ಗೆವಾರ. 'ಚೆ' ಎಂಬ ಅಡ್ಡಹೆಸರು ನಂತರ ಆತನೊಂದಿಗೆ ತಳಕು ಹಾಕಿಕೊಂಡಿತು.

ಡಾ॥ ಬಿ. ಆರ್. ಮಂಜುನಾಥ

ವಿದ್ಯಾಭ್ಯಾಸದಲ್ಲಿ ತೀರಾ ಚುರುಕಾಗಿದ್ದ ಈ ಬಾಲಕ ವೈದ್ಯವೃತ್ತಿಯನ್ನು ಆಯ್ಕೆ ಮಾಡಿಕೊಂಡ. ಈ ಆಯ್ಕೆಯ ಹಿಂದೆಯೂ ಆತನಲ್ಲಿ ಸುಪ್ತವಾಗಿದ್ದ ಸಾಮಾಜಿಕ ಕಳಕಳಿಯೇ ಕೆಲಸಮಾಡುತ್ತಿತ್ತು. ಚರ್ಮರೋಗತಜ್ಞನಾದ ಗೆವಾರನಿಗೆ ಮೊದಮೊದಲು ತಾನು ಜನರ ಸಂಕಷ್ಟವನ್ನು ತೀರಿಸಬಲ್ಲ ಯಾವುದಾದರೂ ಸಂಶೋಧನೆಯನ್ನು ಮಾಡಬೇಕೆಂಬ ಮಹತ್ವಾಕಾಂಕ್ಷೆಯೂ ಇತ್ತಂತೆ. ಓದಿದ್ದನ್ನೆಲ್ಲಾ ಗ್ರಹಿಸಬಲ್ಲ, ಸದಾ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ಉತ್ತರವನ್ನು ಹುಡುಕಿಕೊಳ್ಳುತ್ತಿದ್ದ ಈ ಯುವಕನಿಗೆ ಕ್ರಮೇಣ ತಾನು ಚಿಕಿತ್ಸೆ ನೀಡಬೇಕಾಗಿರುವುದು ಕೆಲವು ರೋಗಿಗಳಿಗೆ ಮಾತ್ರವಲ್ಲ, ಒಂದು ಇಡಿಯ ರೋಗಗ್ರಸ್ತ ಸಮಾಜವನ್ನು ಗುಣಪಡಿಸಬೇಕಾಗಿದೆ ಎಂಬ ಆಶಯ ಹುಟ್ಟಲು ತಡವಾಗಲಿಲ್ಲ.

ಈತನಲ್ಲಿ ಸುಪ್ತವಾಗಿದ್ದ ಇನ್ನೊಂದು ಗುಣವೆಂದರೆ ಒಂದು ರೀತಿಯ ಅಲೆಮಾರಿ ಪ್ರವೃತ್ತಿ. ನಿಂತಲ್ಲಿ ನಿಲ್ಲಲಾರದೆ, ಕೂತಲ್ಲಿ ಕೂರಲಾರದೆ ಪ್ರಯಾಣ ಮಾಡುತ್ತಲೇ ಇರಬೇಕೆನ್ನುವಂಥ ತೃಷೆ ಅವನನ್ನು ಕಾಡಿತ್ತು. ಊರಿಂದೂರಿಗೆ ಅಲೆಯುತ್ತಾ ಹೋಗುವ ಸಾಹಸಯಾತ್ರೆಯನ್ನು ಅವನು ತಾರುಣ್ಯಕ್ಕೆ ಬಂದ ಮೇಲೆ ಅನೇಕ ಬಾರಿ ಮಾಡಿದ. ಇದರಲ್ಲೆಲ್ಲಾ ಅತ್ಯಂತ ಮುಖ್ಯವಾದದ್ದೆಂದರೆ ಗೆಳೆಯ ಆಲ್ಬರ್ಟೊನೊಂದಿಗೆ ಮಾಡಿದ ಮೋಟರ್ ಸೈಕಲ್ ಯಾತ್ರೆ. ಅರ್ಜೆಂಟೈನಾ, ಚಿಲಿ, ಬ್ರೆಜಿಲ್, ಬೊಲಿವಿಯಾ, ಪೆರು, ಗ್ವಾಟೆಮಾಲಾ ಮತ್ತು ಮೆಕ್ಸಿಕೊಗಳಲ್ಲಿ ಈ ತರುಣ ಸಾಹಸಿಗಳು ಪ್ರಯಾಣ ಮಾಡಿದರು. ಕಾಡುವ ಹಸಿವು, ಚಳಿ, ಮರುಭೂಮಿ ಪ್ರಯಾಣ ಎಲ್ಲವನ್ನೂ ಈ ತರುಣರು ಹೇಗೆ ನಗುತ್ತಾ ನಗುತ್ತಾ ಅನುಭವಿಸಿದರು ಎಂಬುದು ಒಂದು ರೋಚಕ ಕತೆ. ಆದರೆ ಇದೊಂದು ರಮ್ಯವಾದ ಸಾಹಸಗಾಥೆ ಮಾತ್ರವಲ್ಲ, ಅದು ಅವರಿಗೆ ವಿಸ್ತಾರ ಕಲಿಕೆಯ ವಿಶ್ವವಿದ್ಯಾಲಯವಾಯಿತು ಎಂಬುದೂ ಅಷ್ಟೇ ಸತ್ಯ. ಅವರು ಬಡತನವನ್ನು, ಕಾರ್ಮಿಕರ ಹೋರಾಟಗಳನ್ನು ಹತ್ತಿರದಿಂದ ಕಂಡುಕೊಂಡರು. ಕುಷ್ಠರೋಗಿಗಳ ಕಾಲೋನಿಗಳ ಕರುಣಾಜನಕ ದೃಶ್ಯಗಳನ್ನು ಹತ್ತಿರದಿಂದ ನೋಡಿದರು. ಲ್ಯಾಟಿನ್ ಅಮೆರಿಕಾ ಎಂಥಾ ದುಃಸ್ಥಿತಿಯಲ್ಲಿದೆ, ಅದರ ಕಾರಣ ಬಂಡವಾಳಶಾಹಿ – ಸಾಮ್ರಾಜ್ಯಶಾಹಿ ಶೋಷಣೆಯಲ್ಲಿದೆ ಎಂಬುದನ್ನು ಅವರು ಗ್ರಹಿಸಿದರು. ಈ ಯಾತ್ರೆಯ ನಂತರ ಚೆ ೧೯೫೦ರಲ್ಲಿ ಇನ್ನೊಂದು ಯಾತ್ರೆಯನ್ನು ಮಾಡುತ್ತಾರೆ. ಅಷ್ಟು ಹೊತ್ತಿಗೆ ಪದವೀಧರರಾಗಿದ್ದ 'ಚೆ' ಗ್ವಾಟೆಮಾಲಾದ ಕ್ರಾಂತಿಕಾರಿ ಹೋರಾಟಗಳಲ್ಲೂ ಭಾಗವಹಿಸಿದರು. ಅಲ್ಲೇ ಅವರಿಗೆ ಕಮ್ಯುನಿಸಮ್ಮಿನ ಪರಿಚಯವಾಯಿತು. ತಾನು ಕ್ರಾಂತಿಕಾರಿಯಾಗಬೇಕೆಂಬ ಹಂಬಲವೂ ಗೆವಾರನಲ್ಲಿ ಬಲವಾಗುತ್ತಾ ಹೋಯಿತು. ಹಾಗೆಯೇ ಮೆಕ್ಸಿಕೊಗೆ ಹೋದಾಗ ದೇಶಾಂತರವಾಸದಲ್ಲಿದ್ದ ಕ್ಯೂಬಾ ದೇಶದ ಕ್ರಾಂತಿಕಾರಿಗಳ ಪರಿಚಯವೂ ಆತನಿಗಾಯಿತು. ಅಲ್ಲಿ ಪೆರು ದೇಶದ ಹಿಲ್ಡಾ ಗೆಡಿಯಾ ಎಂಬುವರನ್ನು ಅವರು ಮದುವೆಯಾದರು.

## ಉಷಾರಾಣಿಗೆ ಅಭಿನಂದನೆ



೧೮ನೇ ಏಷ್ಯನ್ ಗೇಮ್ಸ್‌ನಲ್ಲಿ ಭಾರತದ ಕಬಡ್ಡಿ ತಂಡವನ್ನು ಮುನ್ನಡೆಸಿ ಬೆಳ್ಳಿ ಪದಕ ಪಡೆಯಲು ಕಾರಣಳಾದವಳು ಕನ್ನಡತಿಯಾದ ಉಷಾರಾಣಿ. ತನ್ನ ಕ್ರೀಡಾ ಪ್ರತಿಭೆಯಿಂದಲೇ ವಿಶೇಷ ಗಮನ ಸೆಳೆದು ಪ್ರಸ್ತುತ ಪೊಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಇವರು ಭಾರತಕ್ಕಾಗಿ ಕಬಡ್ಡಿ ಆಡಲು ಸದಾಸಿದ್ಧ. ಬೆಂಗಳೂರಿನ ಯಶವಂತಪುರದ ಸುಬೇದಾರ್ ಪಾಳ್ಯದಲ್ಲಿ ಸಾಮಾನ್ಯ ಕುಟುಂಬದಲ್ಲಿ ಜನಿಸಿದ ಉಷಾ, ಯಶವಂತಪುರದ ಎಂ. ಎಸ್. ಕೃಷ್ಣನ್ ಟ್ರಸ್ಟ್‌ನ ಆದರ್ಶ ಶಿಕ್ಷಣ ಸಂಸ್ಥೆಯಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿ ಪಿ.ಯು.ಸಿ. ಓದುವಾಗಲೇ ಕಬಡ್ಡಿ ಮೈದಾನಕ್ಕಿಳಿದ ನಮ್ಮ ನಾಡಿನ ಈ ಬಾಲೆ ಭಾರತದ ಕಬಡ್ಡಿ ತಂಡವನ್ನು ಮುನ್ನಡೆಸಿ ದೇಶದ ಕ್ರೀಡಾ ಪ್ರೇಮಿಗಳ ಬೆಳ್ಳಿ ಬೆಳಕಾಗಿದ್ದಾಳೆ. ಉಷಾರಾಣಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು. –ಸಂ.

### ಬಹುಮುಖಿ ವ್ಯಕ್ತಿತ್ವ

**'ಚೆ' ಕೇವಲ ಪ್ರಖರ ಧೀಮಂತನಲ್ಲ, ಆತ ನಮ್ಮ ಕಾಲದ ಅತ್ಯಂತ ಪರಿಪೂರ್ಣ ಮನುಷ್ಯ – ನಮ್ಮ ಯುಗದ ಪರಿಪೂರ್ಣ ವ್ಯಕ್ತಿ – ಜೀನ್ ಪಾಲ್ ಸಾರ್ತ್ರೆ**

ಗೆರಿಲ್ಲಾ ಹೋರಾಟಗಾರನಾಗಿ, ಕಠೋರ ಶಿಸ್ತು ಪರಿಪಾಲಕನಾಗಿ, ನಿಷ್ಠುರ ಸತ್ಯವಾದಿಯಾಗಿದ್ದ ಗೆವಾರಾನ ಎಳೆಯ ವಯಸ್ಸಿನ ವ್ಯಕ್ತಿತ್ವದಲ್ಲಿ ಅಪಾರ ತುಂಟತನ ತುಂಬಿಕೊಂಡಿತ್ತು. ಆತನ 'ಮೋಟರ್ ಸೈಕಲ್ ಡೈರೀಸ್' ಪುಸ್ತಕವನ್ನು ಓದಿದ ಯಾರಿಗಾದರೂ ಅನೇಕ ಕಡೆ ನಗು ಉಕ್ಕುಕ್ಕಿ ಬರುತ್ತದೆ. ಓದಿನ ಆಚೆ ಆತ ಒಳ್ಳೆಯ ಕ್ರೀಡಾಪಟು ಸಹ. ಫುಟ್‌ಬಾಲ್, ಸೈಕ್ಲಿಂಗ್, ಈಜುವುದು ಮತ್ತು ಚದುರಂಗ ಅವನು ಮಿಂಚುತ್ತಿದ್ದ ಕೆಲವು ಆಟಗಳು. ಫುಟ್‌ಬಾಲ್ ದಕ್ಷಿಣ ಅಮೆರಿಕಾದಲ್ಲಿ ಸಮೂಹ ಸನ್ನಿಯನ್ನೇ ಸೃಷ್ಟಿಸುವಂಥ ಆಟ. ಈ ಆಟವನ್ನು ಚೆನ್ನಾಗಿ ಆಡುತ್ತಿದ್ದರಿಂದಲೇ ಅರ್ನೆಸ್ಟೋ ಮತ್ತು ಆಲ್ಬರ್ಟೋ ತಮ್ಮ ಸಾಹಸ ಯಾತ್ರೆಯಲ್ಲಿ ಅನೇಕ ಸೌಲಭ್ಯಗಳನ್ನು ಗಿಟ್ಟಿಸಿ ಕೊಂಡದ್ದೂ ಉಂಟು!



ಅವನು ಒಳ್ಳೆಯ ಸಾಹಿತ್ಯದ ಓದುಗನೂ ಹೌದು. ಜೂಲ್ಸ್ ವರ್ನ್, ಅಲೆಗ್ಸಾಂಡರ್ ಡ್ಯೂಮಾ, ವಿಕ್ಟರ್ ಹ್ಯೂಗೋ, ಜಾಕ್ ಲಂಡನ್, ಸರ್ವಾಂಟೆಸ್‌ರನ್ನು ಅವನು ಚೆನ್ನಾಗಿಯೇ ಓದಿ ಅರಗಿಸಿಕೊಂಡಿದ್ದ. ನೆರುಡಾ, ಕೀಟ್ಸ್ ಮೊದಲಾದ ಕವಿಗಳನ್ನು ಮೆಚ್ಚಿಕೊಂಡಿದ್ದ. ಮಾಡರ್ನ್ ಆರ್ಟ್ (ನವ್ಯಕಲೆ)ಅನ್ನು ಇಷ್ಟಪಡದಿದ್ದರೂ ಜಲವರ್ಣ ಕೃತಿಗಳ ರಚನೆಯಲ್ಲಿ ನುರಿತಿದ್ದ. ಒಂದಿಷ್ಟು ಕವಿತೆಗಳನ್ನೂ ಬರೆದ 'ಚೆ' ತನ್ನನ್ನು ಅಯಶಸ್ವಿ ಕವಿ ಎಂದು ಕರೆದುಕೊಂಡಿದ್ದಾನೆ.

ಎಲ್ಲರ ಕಾಲೆಳೆಯುತ್ತಿದ್ದ ಈ ವಿನೋದಶೀಲ ವ್ಯಕ್ತಿ ತನ್ನನ್ನೂ ನಿರ್ದಯವಾಗಿ ತಮಾಷೆಗೆ ಒಡ್ಡಿಕೊಳ್ಳುತ್ತಿದ್ದ. ಕಠಿಣವಾದ ಆತ್ಮವಿಮರ್ಶೆಯೂ ಆತನ ಮುಖ್ಯ ಧನಾತ್ಮಕ ಗುಣಗಳಲ್ಲಿ ಒಂದು. ಅತ್ಯಂತ ಕಠೋರ ದೈಹಿಕ ಶ್ರಮಕ್ಕೆ ಒಡ್ಡಿಕೊಳ್ಳುವುದು ಅವನಿಗೆ ಸಹಜವಾಗಿತ್ತು. ತನ್ನನ್ನು ಚಿಕ್ಕಂದಿನಿಂದ ಕಾಡುತ್ತಿದ್ದ ಆಸ್ತಮಾ ಕಾಯಿಲೆಯನ್ನು ಮೆಟ್ಟನಿಲ್ಲಲೂ ಸಹ ಅವನು ಪ್ರಾಯಶಃ ಹೀಗೆ ಮಾಡುತ್ತಿದ್ದಿರಬೇಕು. ಒಮ್ಮೆ ಜೀವನದ ಎಲ್ಲಾ ಸುಖಗಳನ್ನೂ ಅಪ್ಪಿಕೊಳ್ಳುತ್ತಿದ್ದ 'ಚೆ' ಇನ್ನೊಮ್ಮೆ ತ್ಯಾಗಶೀಲ ಸಂತನಂತೆಯೂ ಇದ್ದುಬಿಡುತ್ತಿದ್ದ. ಆತ ಕ್ಯೂಬಾ ದೇಶದಲ್ಲಿ ಮಂತ್ರಿಯಾದಾಗ ವಿವಿಧ ದೇಶಗಳಿಗೆ ಭೇಟಿ ನೀಡಬೇಕಾಗುತ್ತಿತ್ತು. ಅಲ್ಲಿ ಬಂದ ಬೆಲೆಬಾಳುವ ಉಡುಗೊರೆಗಳನ್ನೆಲ್ಲಾ ಅವನು ಜನರಿಗೆ ಕೊಟ್ಟುಬಿಡುತ್ತಿದ್ದ. ಆ ಕಾಲದಲ್ಲಿ ತೀರಾ ಅಪರೂಪದ ಲಕ್ಸೂರಿ ಎನಿಸಿದ್ದ ಕಲರ್ ಟಿವಿಯನ್ನು ಕಾರ್ಮಿಕನೊಬ್ಬನಿಗೆ ಕೊಟ್ಟುಬಿಟ್ಟ. ಅವನು ತುಂಬ ಇಷ್ಟಪಡುತ್ತಿದ್ದ ವೈನ್‌ನ ಪೀಪಾಯಿಯನ್ನೇ ಸೈನಿಕರಿಗೆ ಕೊಡಲು ಹೆಂಡತಿಗೆ ಹೇಳಿಬಿಟ್ಟ. ಕೀರ್ತಿ, ಪ್ರತಿಷ್ಠೆ, ಅಧಿಕಾರ, ಹಣ, ಪ್ರೀತಿಪಾತ್ರರ ಒಲವಿನ ಬಂಧನ ಎಲ್ಲವೂ ಏನೂ ಅಲ್ಲ ಎಂಬಂತೆ ಹೊರಟ ಚೆ ಗೆವಾರ ಸಚಿವ ಪದವಿ ತ್ಯಜಿಸಿ ದೇಶದಿಂದ ದೇಶಕ್ಕೆ ಕ್ರಾಂತಿಕಾರ್ಯಕ್ಕಾಗಿ ಅಲೆಯುತ್ತಾ ಜೀವವನ್ನೇ ತ್ಯಾಗಮಾಡಿಬಿಟ್ಟ!

'ಚೆ'ನ ಕೆಳಗೆ ಕೆಲಸ ಮಾಡಿದ ಟೊಮಾಸ್ ಆಲ್ಬ ಎಂಬ ಹೋರಾಟಗಾರ ಹೇಳುತ್ತಾನೆ; " 'ಚೆ' ಉಗ್ರ ಶಿಸ್ತಿನವನು, ನಮ್ಮಿಂದ ಮಿತಿಮೀರಿದ ಪ್ರಯತ್ನವನ್ನು ಅಪೇಕ್ಷಿಸುತ್ತಿದ್ದವನು. ಇಷ್ಟಾಗಿಯೂ ನಾವು ಅವನನ್ನು ಗಾಢವಾಗಿ ಪ್ರೀತಿಸುತ್ತಿದ್ದೆವು. ಅವಶ್ಯವಿದ್ದರೆ ಪ್ರಾಣವನ್ನೇ ಆತನಿಗಾಗಿ ಕೊಡಲು ಸಿದ್ಧರಿದ್ದೆವು."

### ಅಜ್ಜಮ್ಮನಂಥ ಹಡಗಿನಲ್ಲಿ

ಮೆಕ್ಸಿಕೊದಲ್ಲಿ ಕ್ಯೂಬಾದ ಕ್ರಾಂತಿಕಾರಿಗಳಿಗೆ ಪರಿಚಿತನಾಗಿದ್ದ ಅರ್ನೆಸ್ಟೊ ಗೆವಾರ ಫಿಡೆಲ್



ಕ್ಯಾಸ್ಟ್ರೋರ ಸೋದರ ರಾವುಲ್‌ರ ಸ್ನೇಹಿತನಾದ. ಅವರಿಂದ ಫಿಡೆಲ್ ಕ್ಯಾಸ್ಟ್ರೋಗೆ ಪರಿಚಯಿಸಲ್ಪಟ್ಟ. ಆ ದಿನವೇ ಇಡೀ ರಾತ್ರಿ ಅವರೊಂದಿಗೆ ಚರ್ಚಿಸಿದ. ಕ್ಯೂಬಾದಲ್ಲಿ ಸಾಮ್ರಾಜ್ಯಶಾಹಿ ಏಜೆಂಟನಾಗಿ ಸರ್ವಾಧಿಕಾರಿಯಾಗಿದ್ದ ಬಾಟಿಸ್ಟಾನನ್ನು ಕಿತ್ತೊಗೆಯಲು ಹಿಂದಿನ ಪ್ರಯತ್ನಗಳಲ್ಲಿ ವಿಫಲರಾಗಿದ್ದ ಫಿಡೆಲ್ ಈಗ ಮತ್ತೊಮ್ಮೆ ದಂಡಯಾತ್ರೆಗೆ ಹೊರಟಿದ್ದರು. ಅವರ ಅದಮ್ಯ ಆಶಾವಾದ, ನಾಯಕತ್ವದ ಗುಣಗಳು ಗೆವಾರನನ್ನು ಆಕರ್ಷಿಸಿದವು. ಕ್ಯಾಸ್ಟ್ರೋ 'ಗ್ರಾನ್ಮಾ' (ಅಜ್ಜಮ್ಮ) ಎಂಬ ಹಳೆಯ ಪುಟ್ಟ ಹಡಗಿನಲ್ಲಿ ದಿಗ್ವಿಜಯಕ್ಕೆ ಹೊರಟಿದ್ದರು. ಗೆವಾರ ಆ ತಂಡದಲ್ಲಿ ವೈದ್ಯನಾಗಿ ಸೇರಿಕೊಂಡ. ಚಿಕ್ಕವಯಸ್ಸಿನ ಹೆಂಡತಿ, ಮಗು ಎಲ್ಲರನ್ನು ಬಿಟ್ಟು ಹೊರಟ.

"ಮಡದಿ, ಮಗು, ಮನೆ ಮಾರು ರಾಜ್ಯಗೀಜ್ಯ
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ"

ಎಂಬ ಕವಿವಾಣಿಯಂತೆ ಹೊರಟಿದ್ದ. 'ಸಾಹಸಿಯ ಗೊತ್ತುಗುರಿ ಅವಗೇ ಗೊತ್ತು'

ಕ್ಯೂಬನ್ ಕ್ರಾಂತಿಕಾರಿಗಳು, ಸಾಮಾನ್ಯವಾಗಿ ಅರ್ಜೆಂಟೈನಾ ದೇಶವಾಸಿಯರನ್ನು ಕರೆಯುತ್ತಿದ್ದಂತೆ ಇವನನ್ನು 'ಚೆ' ಎಂದರು. ಅದೇ ಅವನ ಹೆಸರಾಗಿ ಬಿಟ್ಟಿತು! ಈ ಹಡಗೋ ವಾಸ್ತವದಲ್ಲಿ ಒಂದು ದೊಡ್ಡ ದೋಣಿ ಅಷ್ಟೇ. ಎಂಟರಿಂದ ಹನ್ನೆರಡು ಜನ ಮಾತ್ರ ಪ್ರಯಾಣಮಾಡಲು ಸಾಧ್ಯವಾಗುವಂತಹ ನಾವೆಯಲ್ಲಿ ಎಂಭತ್ತೆರಡು ಜನ ಸೇರಿಕೊಂಡಿದ್ದರು. ಜೊತೆಗೆ ಶಸ್ತ್ರಾಸ್ತ್ರಗಳು, ಆಹಾರ ಸಾಮಗ್ರಿ, ಬಟ್ಟೆಗಳು, ಔಷಧಿಗಳು ಎಲ್ಲಾ ಸೇರಿ ವಿಪರೀತ ಇಕ್ಕಟ್ಟು. ಸಮುದ್ರಯಾನದ ಅಭ್ಯಾಸವೂ ಸಹ ಬಹುತೇಕ ಯಾರಿಗೂ ಇರಲಿಲ್ಲ. ಹೀಗಾಗಿ ಸಮುದ್ರಯಾನದ ಬೇನೆಯಿಂದ ನರಳುವಂತಾಯಿತು. ಆದರೂ ಉತ್ಸಾಹ ಬತ್ತಿರಲಿಲ್ಲ.

ಕ್ಯೂಬಾದ ತೀರ ಹತ್ತಿರವಾದಂತೆ ಅವರ ನಾವೆ ನೆಲಕಚ್ಚುತ್ತಿತ್ತು. ಕೆಟ್ಟು ಕೂರುತ್ತಿತ್ತು. ಕಡೆಗೊಮ್ಮೆ ಜೌಗು ಪ್ರದೇಶವೊಂದರಲ್ಲಿ ತಂಗಿದ್ದಾಗ ಇವರ ಬರುವಿಕೆಯ ಸೂಚನೆಯಿದ್ದ ಕ್ಯೂಬಾದ ಸರ್ವಾಧಿಕಾರಿ ಬಾಟಿಸ್ಟಾನ ದಳಗಳು ಅವರ ಮೇಲೆ ಗುಂಡಿನ ಮಳೆಗರೆದರು. ಎಲ್ಲರೂ ಕಾಡಿನಲ್ಲಿ, ಕಬ್ಬಿನ ಗದ್ದೆಗಳಲ್ಲಿ ಬಚ್ಚಿಟ್ಟುಕೊಳ್ಳಬೇಕಾಯಿತು. ಊಟ, ನಿದ್ದೆ ಇಲ್ಲ. ಸೊಳ್ಳೆಕಾಟ ಬೇರೆ. ಮೈತುಂಬ ಗಾಯಗಳು. ಅನೇಕರು ಗುಂಡೇಟು ತಿಂದು ಸತ್ತುಹೋಗಿದ್ದರು ಕೂಡ.

ನಿಜಕ್ಕೂ ಅವರೆಲ್ಲಾ ಚೆನ್ನಾಗಿ ತರಬೇತಿ ಹೊಂದಿದ್ದ ಸೈನಿಕರಲ್ಲ. ವರ್ಷಗಟ್ಟಲೆ ಕವಾಯತುಮಾಡಿ, ತರಬೇತಿ ಹೊಂದಿ, ಆಯುಧಗಳನ್ನು ಉಪಯೋಗಿಸಲು ಕಲಿತ ಸೈನಿಕರೇ ಕಷ್ಟ ತಡೆಯಲಾರದಂತಹ ಭಯಂಕರ ಪರಿಸ್ಥಿತಿ ಅದು. ಆದರೂ ಅವರಿಗೆ ಫಿಡೆಲ್ ಕ್ಯಾಸ್ಟ್ರೋ ಹುಡುಕಿ ಹುಡುಕಿ ಕರ್ನಲ್ ಬೇಯೋ ಎಂಬ ತಜ್ಞನನ್ನು ಕರೆತಂದು ಗೆರಿಲ್ಲಾ ತರಬೇತಿ ಕೊಡಿಸಿದ್ದರು. ಆ ತರಬೇತಿಯಲ್ಲಿ ಚೆ ಗೆವಾರ ಎಲ್ಲರ ಮೆಚ್ಚುಗೆಗೆ ಪಾತ್ರರಾಗುವಷ್ಟು ವೇಗದಲ್ಲಿ ಶಸ್ತ್ರವಿದ್ಯೆಯನ್ನು ಕಲಿತಿದ್ದರು ಮತ್ತು ಅವರ ಕಷ್ಟ ಸಹಿಷ್ಣುತೆಯೂ ಅಸಾಧಾರಣವಾಗಿತ್ತು.

ಹೀಗಾಗಿ ಅವರು ಅಂಥ ದುರ್ಭರ ಪರಿಸ್ಥಿತಿಯಲ್ಲೂ ತಮ್ಮನ್ನು ತಾವು ಸುಧಾರಿಸಿಕೊಂಡು ಬೇರೆಯವರಿಗೆ ವೈದ್ಯಕೀಯ ನೆರವನ್ನು ನೀಡಿದರು. ಅವರನ್ನು ಯಾವತ್ತು ಕಾಡುತ್ತಿದ್ದ ಆಸ್ತಮಾ ರೋಗ ನೌಕಾ ಪ್ರಯಾಣದ ಕಾಲದಲ್ಲಿಯೇ ಉಲ್ಬಣಗೊಂಡು, ಇದೀಗ ವಿಪರೀತಕ್ಕಿಟ್ಟುಕೊಂಡು ಆರೋಗ್ಯಕ್ಕೆ ಏಟೂ ಬಿದ್ದಿತ್ತು. ಆದರೆ ಆತನ ಅಸಾಧಾರಣ ಹೋರಾಟದ ಗುಣಗಳು ಈಗ ಬೆಳಕಿಗೆ ಬಂದವು.

ಆತನನ್ನು ಹತ್ತಿರದಿಂದ ನೋಡಿದವರು ಹೇಳುತ್ತಾರೆ 'ಚೆ' ತನ್ನ ಆರೋಗ್ಯದ ಬಗ್ಗೆ ದೂರುತ್ತಿರಲಿಲ್ಲ, ಶಪಿಸುತ್ತಿರಲಿಲ್ಲ. ತೀರ ಕಷ್ಟವಾದರೂ ಒಂದು ಶಬ್ದವೂ ಬಾಯಿಂದ ಹೊರಗೆ ಬರುತ್ತಿರಲಿಲ್ಲ. ತನಗಾಗಿ ಬೇರೆಯವರು ಕನಿಕರ ತೋರಿಸುತ್ತಿರುವುದನ್ನು ಕಂಡರೆ ಅವರು ಸಿಡಿಮಿಡಿಗೊಳ್ಳುತ್ತಿದ್ದರು. ಕಷ್ಟದಲ್ಲೂ ನಗೆಚಟಾಕಿ ಹಾರಿಸುತ್ತಾ, ಮಾನಸಿಕ ಬೇಗುದಿಯನ್ನು ಒತ್ತಡವನ್ನು ಕಳೆದುಕೊಳ್ಳುತ್ತಿದ್ದರು. ಆದರೆ ಇದಕ್ಕೆ ಭಿನ್ನವಾಗಿ ಆತ ಬೇರೆಯವರಿಗಾಗಿ ಮರುಗುತ್ತಿದ್ದರು ಮತ್ತು ಕೂಡಲೇ ಸಹಾಯ ನೀಡಲು ಧಾವಿಸುತ್ತಿದ್ದರು. ಹೀಗಿರುವಾಗ ಒಂದು ದಿನ ಇವರಿದ್ದ ಜಾಗದ ಮೇಲೆ ಶತ್ರುಗಳು ತೀವ್ರವಾದ ದಾಳಿ ನಡೆಸಿದರು. ಈಗ ತೀರಾ ಚಿಕ್ಕ ಲಗೇಜ್‌ನೊಂದಿಗೆ ಅಲ್ಲಿಂದ ಕಾಲ್ತೆಗೆದು ಓಡಬೇಕು. ಚೆ ಗೆವಾರರ ಕಾಲಿನ ಒಂದು ಪಕ್ಕದಲ್ಲಿ ಔಷಧಗಳ ಚೀಲ ಬಿದ್ದಿದ್ದರೆ, ಇನ್ನೊಂದು ಕಡೆ ಶಸ್ತ್ರಾಸ್ತ್ರಗಳ ಗಂಟು ಬಿದ್ದಿತ್ತು. ಯಾವುದಾದರೂ ಒಂದನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲು ಸಾಧ್ಯವಿತ್ತು. 'ಚೆ' ಕೂಡಲೇ ಶಸ್ತ್ರಾಸ್ತ್ರಗಳ ಗಂಟನ್ನು ಎತ್ತಿಕೊಂಡು ಓಡಿದರು. ಅವರೇ ಹೇಳುವಂತೆ ಅದು ಅವರ ಬದುಕಿನ ನಿರ್ಣಾಯಕ ಘಟ್ಟ. ಅವರು ಸರಿಯಾದ ತೀರ್ಮಾನವನ್ನೇ ಮಾಡಿದ್ದರು! ಇದನ್ನು ಕ್ಯಾಸ್ಟ್ರೋ ಕೂಡ ನೆನಪಿಸಿಕೊಂಡಿದ್ದಾರೆ.

ಅನೇಕ ಸಂಗಾತಿಗಳನ್ನು ಕಳೆದುಕೊಂಡ ಕ್ರಾಂತಿಕಾರಿ ದಳವು ದುರ್ಗಮವಾದ ಸಿಯೆರಾ ಮೇಸ್ತ್ರಾ ಎಂಬ ಪರ್ವತ ಪ್ರದೇಶದಲ್ಲಿ ಬಚ್ಚಿಟ್ಟುಕೊಳ್ಳಬೇಕಾಯಿತು.

**ಸಿಯೆರಾ ಮೇಸ್ತ್ರಾ – ಪುನರ್ ಸಂಘಟನೆಯ ಪರ್ವ**

ಈ ಎಲ್ಲಾ ಸಂದರ್ಭಗಳಲ್ಲಿ ಫಿಡೆಲ್ ಕ್ಯಾಸ್ಟ್ರೋರವರ ಅಸಾಧಾರಣ ನಾಯಕತ್ವದ ಗುಣಗಳು ಮುನ್ನೆಲೆಗೆ ಬಂದವು. ಧೈರ್ಯ, ಕಷ್ಟಸಹಿಷ್ಣುತೆ, ಅದಮ್ಯ ಆಶಾವಾದ, ಮಿಲಿಟರಿ ಕೌಶಲ್ಯ, ಮನುಷ್ಯರನ್ನು ಅರ್ಥಮಾಡಿಕೊಂಡು ಅವರಿಗೆ ಸರಿಯಾದ ಬೆಲೆಕಟ್ಟುವುದು, ಪ್ರತಿಭೆಗೆ ತಕ್ಕಂತಹ ಜವಾಬ್ದಾರಿ ನೀಡುವುದು, ಸಂಗಡಿಗರ ಕುರಿತಾದ ಮಮತೆ ಮತ್ತು ಕಾಳಜಿ ಇವೆಲ್ಲಾ ಕ್ಯಾಸ್ಟ್ರೋರಲ್ಲಿ ಹರಳುಗಟ್ಟಿದ್ದ ಗುಣಗಳು. ಆತ ಜನರಲ್ಲಿ ಇರಿಸಿದ್ದ ನಂಬಿಕೆಯೂ ಆಳವಾದದ್ದು.

ಗುಡ್ಡಗಾಡಿನ ಗ್ರಾಮೀಣ ಪ್ರದೇಶದ ಜನರು ಕ್ರಾಂತಿಕಾರಿಗಳ ಕುರಿತು ಅಸಾಧಾರಣ ಅಂತಃಕರಣವನ್ನು ತೋರಿದರು. ಅವರು ಕೂಡಲೇ ಬಂಡುಕೋರರ ಸೈನ್ಯವನ್ನು ಸೇರಲಿಲ್ಲ ನಿಜ. ಆದರೆ ಅವರಿಗೆ ಬೇಕಾದ ಎಲ್ಲ ನೆರವನ್ನೂ ನೀಡಿದರು. ಕ್ರಾಂತಿಕಾರಿಗಳು ಸಹ ಅವರೊಂದಿಗೆ ಬೆರೆಯುತ್ತಾ, ಅವರಿಗೆ ಅಗತ್ಯ ನೆರವು ನೀಡುತ್ತಾ ಹತ್ತಿರವಾದರು.

ಕ್ರಮೇಣ ಕ್ರಾಂತಿಕಾರಿಗಳು ಕ್ಯೂಬಾದಲ್ಲೇ ಮುಂಚಿನಿಂದ ಇದ್ದ ಉಳಿದ ಕ್ರಾಂತಿಕಾರಿ ಗುಂಪುಗಳನ್ನು ಸಂಪರ್ಕಿಸಿದರು. ಅವರಲ್ಲಿ ಅನೇಕರು ಸಿಯೆರಾ ಮೇಸ್ತ್ರಾಗೆ ಬಂದು ಇವರನ್ನು ಕೂಡಿಕೊಂಡರು. ಇನ್ನೊಂದು ಕಡೆ ನಗರಗಳಲ್ಲಿ ಬಲಿಷ್ಠವಾಗಿದ್ದು ಆದರೆ ಕ್ರಾಂತಿಕಾರಿ ಮುಂದೊಡಗಿಲ್ಲದೆ ನಲುಗಿಹೋಗಿದ್ದ ಪಾಪ್ಯುಲರ್ ಸೋಷಲಿಸ್ಟ್ ಫ್ರಂಟ್ ಮತ್ತು ಇನ್ನೂ ಅನೇಕ ಶಕ್ತಿಗಳು ಕ್ಯಾಸ್ಟ್ರೋರವರ ಪ್ರಯತ್ನದೊಂದಿಗೆ ಒಂದಾದರು.

ಕ್ಯಾಸ್ಟ್ರೋ ತಾವೇ ಹೇಳಿಕೊಂಡಿರುವಂತೆ ಅವರು ಕ್ರಾಂತಿಕಾರಿ ಹೋರಾಟದ ಪ್ರಕ್ರಿಯೆಯಲ್ಲಿ ಕಮ್ಯುನಿಸಂಗೆ ಹತ್ತಿರವಾದರು. ಆದರೆ ಚೆ ಗೆವಾರ ನಿಜಕ್ಕೂ ಸೈದ್ಧಾಂತಿಕವಾಗಿ ಎಲ್ಲರಿಗಿಂತ ಮುಂದಿದ್ದರು. ಉಳಿದವರಿಗೆ ಮಾರ್ಕ್ಸ್‌ವಾದದ ಪಾಠಗಳನ್ನು ಹೇಳುತ್ತಿದ್ದರು. ಇದನ್ನು ಫಿಡೆಲ್ ಕ್ಯಾಸ್ಟ್ರೋ ಗುರುತಿಸಿ 'ಚೆ'ಗೆ ಗೌರವ ಸಲ್ಲಿಸಿದ್ದಾರೆ.

**ಗೆಲುವು ಮತ್ತು ಸರ್ಕಾರದಲ್ಲಿ ಪಾತ್ರ**

ಸಿಯೆರಾ ಮೇಸ್ತ್ರಾದಿಂದ ಕ್ರಾಂತಿಕಾರಿಗಳು ಅನೇಕ ಗೆಲುವುಗಳನ್ನು ಸಾಧಿಸಲು ಶುರು ಮಾಡಿದರು. ಬಾಟಿಸ್ಟಾನ ಪಡೆಗಳು ದಿಕ್ಕುಗೆಟ್ಟವು. ಒಂದು ಹೊಸ ಉತ್ಸಾಹದ ಅಲೆ ಇಡಿಯ ಕ್ಯೂಬಾದಾದ್ಯಂತ ಹರಡಿಕೊಂಡಿತು. ಗೆರಿಲ್ಲಾ ಸೇನೆಗಳು ರಾಜಧಾನಿ ಹವಾನಾದತ್ತ ಮುನ್ನಡೆದವು. ಅದರಲ್ಲಿ ಒಂದು ಮುಖ್ಯ ದಳಕ್ಕೆ ಚೆ ಗೆವಾರ ಕಮಾಂಡರ್ ಆಗಿದ್ದರು. ಕ್ಯಾಸ್ಟ್ರೋ ಅತ್ಯಂತ ಕಠಿಣ ಸನ್ನಿವೇಶಗಳನ್ನು ಎದುರಿಸಲು ಈ ದಳವನ್ನೇ ಕಳಿಸುತ್ತಿದ್ದರು. ಹೀಗೆ ವೈದ್ಯನಾಗಬೇಕಾಗಿದ್ದ ಈ ತರುಣ ಮಹಾನ್ ಗೆರಿಲ್ಲಾ ಸೇನಾಧಿಪತಿಯಾಗಿ ಮಾರ್ಪಟ್ಟರು.

ದಾರಿಯುದ್ದಕ್ಕೂ ಗೆಲ್ಲುತ್ತಾ ಹೋದ ಗೆರಿಲ್ಲಾ ಸೇನೆ ೧೯೫೯ರ ಜನವರಿ ೨ರಂದು ಹವಾನಾವನ್ನು ಆಕ್ರಮಿಸಿತು. ಪ್ರತಿಗಾಮಿಗಳು ಊರನ್ನು ತೊರೆದು ಓಡಿಹೋದರು. ಹೊಸ ಕ್ರಾಂತಿಕಾರಿ ಸರ್ಕಾರ ಅಸ್ತಿತ್ವಕ್ಕೆ ಬಂತು. ಕ್ರಾಂತಿಕಾರಿ ಭೂಸುಧಾರಣೆ ಉತ್ಪಾದನಾ ಸಾಮಗ್ರಿಗಳ ಮೇಲೆ ಸಾಮೂಹಿಕ ಒಡೆತನ, ಭ್ರಷ್ಟಾಚಾರದ ಸಂಪೂರ್ಣ ನಿರ್ಮೂಲನೆ, ಎಲ್ಲರಿಗೂ ಶಿಕ್ಷಣ, ಉದ್ಯೋಗ ಮತ್ತು



ಆರೋಗ್ಯಗಳನ್ನು ಖಾತ್ರಿಪಡಿಸುವುದು, ಎಲ್ಲಾ ವಿದೇಶಿ ಕಂಪೆನಿಗಳ ಆಸ್ತಿಯನ್ನು ರಾಷ್ಟ್ರೀಕರಿಸುವುದು ಮುಂತಾದ ಕ್ರಾಂತಿಕಾರಿ ಸಾಮಾಜಿಕ ನೀತಿಗಳನ್ನು ಸರ್ಕಾರ ಜಾರಿಗೊಳಿಸಲಾರಂಭಿಸಿತು.

**ಹೊಸ ಜವಾಬ್ದಾರಿಗಳು**

ಕ್ರಾಂತಿಕಾರಿ ಸರ್ಕಾರದಲ್ಲಿ ಅರ್ನೆಸ್ಟೊ ಚೆ ಗೆವಾರ ಅನೇಕ ಮುಖ್ಯ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಯಿತು. ಅವರು ಮೊದಲು ಕೃಷಿ ಸುಧಾರಣಾ ಸಂಸ್ಥೆಯ ಮುಖ್ಯಸ್ಥರಾದರು. ನಂತರ ಕ್ಯೂಬಾದ ರಾಷ್ಟ್ರೀಯ ಬ್ಯಾಂಕ್‌ನ ಅಧ್ಯಕ್ಷರಾದರು. ಈಗಲೂ ಕ್ಯೂಬಾ ದೇಶದ ಕರೆನ್ಸಿ ನೋಟುಗಳ ಮೇಲೆ ಅವರ 'ಚೆ' ಎಂಬ ಹಸ್ತಾಕ್ಷರವಿರುತ್ತದೆ. ಆ ನಂತರ ಅವರು ಹೊಸದಾಗಿ ಶುರುವಾದ ಕೈಗಾರಿಕಾ ಖಾತೆಯ ನೇತೃತ್ವವನ್ನು ವಹಿಸಿಕೊಂಡರು.

ಸಮಾಜವಾದದ ಯಶಸ್ಸಿಗೆ ತೀರಾ ಮುಖ್ಯವಾಗಿದ್ದ ಆ ಖಾತೆಗೆ ಅದರ ಆರಂಭಕಾಲಘಟ್ಟದಲ್ಲಿ ಬೇಕಾಗಿದ್ದ ವಿವೇಕಯುತವಾದ, ಕ್ರಾಂತಿಕಾರಿಯಾದ ನೀತಿನಿರೂಪಣೆಯನ್ನು ಸೃಷ್ಟಿಸಿದ ಕೀರ್ತಿ ಅವರದ್ದು. ಹಾಗೆಯೇ ಅವರು ಸರ್ಕಾರಿ ನಿಯೋಗದ ಮುಖಂಡರಾಗಿ ರಷ್ಯಾ, ಜರ್ಮನಿ, ಉರುಗ್ವೆ, ಚೀನಾ, ಉತ್ತರ ಕೊರಿಯಾ ಮುಂತಾದ ಅನೇಕ ದೇಶಗಳಿಗೆ ಭೇಟಿ ನೀಡಿದರು.

ಅವರು ಕ್ಯೂಬಾದಲ್ಲಿದ್ದ ಕಾಲದಲ್ಲಿ ಮತ್ತೊಮ್ಮೆ ಮದುವೆಯಾದರು. ಆದರೆ ಅವರ ವೈಯಕ್ತಿಕ ಬದುಕಿನ ನೋವು ನಲಿವುಗಳು ಎಂದಿಗೂ ಅವರ ಕ್ರಾಂತಿಕಾರಿ ಕೆಲಸಗಳಿಗೆ ಅಡ್ಡಿಬರುತ್ತಿರಲಿಲ್ಲವಾದ್ದರಿಂದ ಅವರ ದಣಿವರಿಯದ ಕಾರ್ಯವೈಖರಿ ಮುಂದುವರೆದಿತ್ತು. ಹೀಗೆಯೇ ಕ್ಯೂಬಾದಲ್ಲಿ ಮುಂದುವರೆದು ಸಮಾಜವಾದವನ್ನು ಭದ್ರಪಡಿಸುವ ಕಾರ್ಯದಲ್ಲಿ 'ಚೆ' ನೆಮ್ಮದಿಯಾಗಿರಬಹುದಿತ್ತು. ಆದರೆ ಇಡಿಯ ಲ್ಯಾಟಿನ್ ಅಮೆರಿಕಾವನ್ನು ಆವರಿಸಿದ್ದ ಶೋಷಣೆ, ದುಃಖದಾರಿದ್ರ್ಯಗಳು ಅವರನ್ನು ಸುಮ್ಮನಿರಲು ಬಿಡಲಿಲ್ಲ. ಅವರ ಸೂಕ್ಷ್ಮವಾದ ಅಂತರರಾಷ್ಟ್ರೀಯ ಸ್ಫೂರ್ತಿಯಿದ್ದ ಮನಸ್ಸು ಆಫ್ರಿಕಾದ ಬಿಡುಗಡೆಗೂ ಹಂಬಲಿಸುತ್ತಿತ್ತು. ೧೯೬೫ರಲ್ಲಿ ಅವರು ಕಾಂಗೋಗೆ ಭೇಟಿಕೊಟ್ಟು ಅಲ್ಲಿನ ಕ್ರಾಂತಿಕಾರಿ ಪ್ಯಾಟ್ರೆಸ್ ಲುಮುಂಬಾನನ್ನು ಹುರಿದುಂಬಿಸಿದರು. ನಂತರ ಕ್ಯೂಬಾಗೆ ಹಿಂದಿರುಗಿ ಚಳುವಳಿಗಳು ಬೆಳೆಯುತ್ತಿದ್ದ ಬೊಲಿವಿಯಾದ ಬಿಡುಗಡೆಗಾಗಿ ಯೋಜನೆ ರೂಪಿಸಿದರು. ಕಡೆಗೊಂದು ದಿನ ನಾಯಕರಿಗೆ ಮಾತ್ರ ತಮ್ಮ ನಿರ್ಧಾರವನ್ನು ತಿಳಿಸಿ ಅತ್ಯಂತ ಗೋಪ್ಯವಾಗಿ ಬೊಲಿವಿಯಾಗೆ ಪ್ರಯಾಣ ಮಾಡಿದರು.

ಬೊಲಿವಿಯಾದಲ್ಲಿ ಆರಂಭದಲ್ಲಿ ಅವರು ಅನೇಕ ಗೆಲುವುಗಳನ್ನು ಸಾಧಿಸಿದರು. ಆದರೆ ಅಮೆರಿಕಾ ಸರ್ಕಾರ ಮತ್ತು ಅದರ ಗುಪ್ತಚಾರ ಸಂಸ್ಥೆಯಾದ ಸಿಐಎ ಮತ್ತೊಂದು ಕ್ಯೂಬಾ ಹುಟ್ಟುವುದನ್ನು ಒಪ್ಪಲು ತಯಾರಿರಲಿಲ್ಲ. ಅವರು ಬಂಡಾಯವನ್ನು ಹತ್ತಿಕ್ಕಲು, ಚೆ ಗೆವಾರರನ್ನು ಮುಗಿಸಲು ದೊಡ್ಡ ಯೋಜನೆಯನ್ನು ರೂಪಿಸಿದ್ದರು. ಕಡೆಗೂ ಚೆ ಗೆವಾರರನ್ನು ಹಿಡಿದು ನಿರ್ದಯವಾಗಿ ಕೊಂದುಬಿಟ್ಟರು.

ಹೀಗೆ ಅರ್ಜೆಂಟೈನಾದಲ್ಲಿ ಹುಟ್ಟಿ, ಅನೇಕ ದೇಶಗಳಲ್ಲಿ ಕೆಲಸ ಮಾಡಿ, ಕ್ಯೂಬಾ ಕ್ರಾಂತಿಯಲ್ಲಿ ನೇತೃತ್ವವಹಿಸಿದ ಮಹಾನ್ ಕ್ರಾಂತಿಕಾರಿ ಬೊಲಿವಿಯಾದ ಕ್ರಾಂತಿಕಾರಿ ಹೋರಾಟದಲ್ಲಿ ಹುತಾತ್ಮರಾದರು. ಮರಣವಪ್ಪುತ್ತಲೇ ಕೋಟ್ಯಂತರ ಮನಸ್ಸುಗಳಲ್ಲಿ ಕಿಡಿಹೊತ್ತಿಸಿದ. ದೇಶದೇಶಗಳ ಕ್ರಾಂತಿಕಾರಿಗಳು ಈತ ತಮ್ಮವನೇ ಎಂದು ಭಾವಿಸುವ ಧೀರೋದಾತ್ತನಾಯಕ – 'ಚೆ' !

**ಜಾಗತಿಕ ಕ್ರಾಂತಿ ಗೆಲ್ಲುತ್ತದೆ!**

ಕ್ಯೂಬಾದ ಕ್ರಾಂತಿ ಮತ್ತು ಚೆ ಗೆವಾರ ಅವರ ವೀರೋಚಿತ ಬದುಕು ನಮಗೆಲ್ಲಾ ಎಂದೆಂದಿಗೂ ಸ್ಫೂರ್ತಿಯ ಚಿಲುಮೆಯಾಗಿರುತ್ತದೆ. ಆದರೆ ಕ್ಯೂಬಾದ ಕ್ರಾಂತಿಯಿಂದ ಅಥವಾ ಚೆ ಗೆವಾರರವರ ಪ್ರಯತ್ನಗಳಿಂದ ನಾವು ತಪ್ಪಾದ ತೀರ್ಮಾನಕ್ಕೆ ಬರಬಾರದು. ಅದು ಕ್ರಾಂತಿಗೆ ದೀರ್ಘಕಾಲೀನ ನಷ್ಟಗಳನ್ನು ಉಂಟುಮಾಡುತ್ತದೆ. ಹೋರಾಟವು ಅನಗತ್ಯ ಅಪಾಯಗಳಿಗೆ, ಎಡವಟ್ಟುಗಳಿಗೆ ಸಿಕ್ಕಿಹಾಕಿಕೊಳ್ಳಬಹುದು.

ಉದಾಹರಣೆಗೆ ರೈತರೇ ಕ್ರಾಂತಿಯ ನಿರ್ಣಾಯಕಶಕ್ತಿ, ನೇತೃತ್ವದ ವರ್ಗ ಎಂದು ಭಾವಿಸಬಾರದು. ನಗರಗಳಲ್ಲಿ ಕಾರ್ಮಿಕವರ್ಗದ ಶಕ್ತಿಯನ್ನು ಅಲ್ಲಗಳೆಯಬಾರದು ಮತ್ತು ಗೆರಿಲ್ಲಾ ಹೋರಾಟವೇ ಕ್ರಾಂತಿಕಾರಿ ಆಂದೋಲನದ ಸರ್ವಸ್ವ ಎಂದು ಭಾವಿಸಬಾರದು. ಹಾಗೆಯೇ ಕ್ರಾಂತಿಯನ್ನು ದೇಶದಿಂದ ದೇಶಕ್ಕೆ ರಫ್ತು ಮಾಡಲು ಸಾಧ್ಯ ಎಂದು ಕಲ್ಪಿಸಿಕೊಳ್ಳಬಾರದು.

ನೈಜ ಮಾರ್ಕ್ಸ್‌ವಾದಿ ತಿಳಿವಳಿಕೆಯೆಂದರೆ ಸಮಾಜವಾದಿ ಕ್ರಾಂತಿಯನ್ನು ನೆರವೇರಿಸಲು ಕಾರ್ಮಿಕ ವರ್ಗವೇ ಅತ್ಯಂತ ಮುಂದುವರೆದ ನೇತಾರ ವರ್ಗ. ಎಷ್ಟೋ ಬಾರಿ ಕಾರ್ಮಿಕರ ಜೀವನ ಬಡರೈತರ ಜೀವನಕ್ಕಿಂತ ಉತ್ತಮವಾಗಿದ್ದರೂ, ಕಾರ್ಮಿಕವರ್ಗಕ್ಕೆ ಈ ಐತಿಹಾಸಿಕ ಪಾತ್ರ ಲಭ್ಯವಾಗುವುದು ಅದರ ವರ್ಗಸ್ಥಾನದಿಂದ. ಕಾರ್ಮಿಕರು ಖಾಸಗಿ ಆಸ್ತಿಯೊಂದಿಗೆ ಸಂಬಂಧವನ್ನು ತುಂಡರಿಸಿಕೊಂಡ ಜನ. ಆದರೆ ರೈತರು ಎಷ್ಟೇ ಬಡವರಾಗಿದ್ದರೂ ತುಂಡು ನೆಲಕ್ಕಾಗಿ ಹಂಬಲಿಸುವ ವರ್ಗ. ಇದಲ್ಲದೆ ಕೈಗಾರಿಕಾ ಉತ್ಪಾದನೆಯಲ್ಲಿ ಒಟ್ಟಾಗಿ ದುಡಿದು, ಸೆಣೆಸಾಡುವ ಕಾರ್ಮಿಕರು ಸಹಜವಾಗಿ ಸಾಮೂಹಿಕವಾದದ ಪಾಠಗಳನ್ನು ಕಲಿತಿರುತ್ತಾರೆ. ಹಾಗೂ ಶಿಸ್ತು ಮತ್ತು ಸಂಘಟನೆಯ ಪ್ರಜ್ಞೆಯನ್ನು ಪಡೆದು ಮುಂದುವರೆದ ವರ್ಗವಾಗಿರುತ್ತಾರೆ.

ಹಾಗೆಯೇ ಯಾವುದೇ ಕ್ರಾಂತಿಗೆ ದೀರ್ಘಾವಧಿ ತಯಾರಿ ಬೇಕು. ಎಷ್ಟೋ ಬಾರಿ 'ಶಾಂತಿ' ಸಮಯದ ಹೋರಾಟವೇ ಕಠಿಣವಾಗಿರುತ್ತದೆ. ಕ್ಯೂಬಾದ ಕ್ರಾಂತಿಯ ಸಂದರ್ಭದಲ್ಲೂ ದೇಶದಲ್ಲಿ ರೈತರಿದ್ದದ್ದು ಕೇವಲ ಶೇಕಡಾ ನಲವತ್ತು ಭಾಗ. ಕಾರ್ಮಿಕರು ಶೇಕಡಾ ನಲವತ್ತನ್ನು ಮೀರಿದ್ದರು ಮತ್ತು ನಗರ ಪ್ರದೇಶದ ಇನ್ನುಳಿದ ದುಡಿಯುವ ಜನ ಶೇಕಡಾ ಇಪ್ಪತ್ತರಷ್ಟಿದ್ದರು. ಮೇಲೆ ಹೇಳಿದ ಕಡೆಯ ಎರಡು ವರ್ಗಗಳು ಸಾರ್ವತ್ರಿಕ ರಾಜಕೀಯ ಮುಷ್ಕರವೂ ಸೇರಿದಂತೆ ಅನೇಕ ಹೋರಾಟಗಳ ಮೂಲಕ ಕ್ರಾಂತಿಗೆ ಬಲ ತುಂಬಿದರು. ನಗರಪ್ರದೇಶದ ಗೆರಿಲ್ಲಾ ಹೋರಾಟವನ್ನೂ ಯಶಸ್ವಿಯಾಗಿ ನಿರ್ವಹಿಸಿದರು. ಹೀಗಾಗಿ ದೀರ್ಘಾವಧಿ ಸಿದ್ಧತೆ, ಕಾರ್ಮಿಕ ವರ್ಗದ ಮುಂದಾಳ್ತನ ಇಲ್ಲದೆ ಯಾವ ಕ್ರಾಂತಿಯೂ ಸಾಧ್ಯವಾಗದು ಎಂಬುದನ್ನು ನಾವು ಗಮನಿಸಬೇಕು. ಗೆರಿಲ್ಲಾ ಹೋರಾಟ ಎಂಬ 'ಕಿಡಿ'ಯಿಂದ ಕ್ರಾಂತಿಕಾರಿ ಕಾಳ್ಗಿಚ್ಚು ಆರಂಭವಾಗಿ ಸಮಾಜವಾದ ಬಂದುಬಿಡುತ್ತದೆ ಎಂಬುದು ವೈಜ್ಞಾನಿಕ ತೀರ್ಮಾನವಲ್ಲ.

ಈ ಎಲ್ಲ ಪಾಠಗಳನ್ನು ಮನನ ಮಾಡಿಕೊಂಡು ಚೆ ಗೆವಾರ, ಕ್ಯಾಸ್ಟ್ರೋರ ಹೋರಾಟದ ಸ್ಫೂರ್ತಿಯಿಂದ ಪ್ರೇರಿತರಾಗಿ ಇಂದಿನ ತರುಣ ಜನಾಂಗ ಜಗತ್ತಿನಾದ್ಯಂತ ಕ್ರಾಂತಿಯನ್ನು ನೆರವೇರಿಸಲು, ಶೋಷಣೆ, ನಿರುದ್ಯೋಗ, ಯುದ್ಧಗಳು, ಅನಾರೋಗ್ಯ, ಅಸಮಾನತೆ, ಮಹಿಳೆಯರ ಮೇಲಿನ ದೌರ್ಜನ್ಯ ಇಂಥ ಕಾಡುವ ಸಮಸ್ಯೆಗಳಿಂದ ಮುಕ್ತವಾದ ಸಮಾಜವಾದಿ ಸಮಾಜದ ನಿರ್ಮಾಣಕ್ಕೆ ಮುಂದಾಗಲಿ.

ಕ್ಯೂಬಾ ಮತ್ತು ವಿಯೆಟ್ನಾಂ ಕ್ರಾಂತಿಗಳ ನಂತರ ಯಾವುದೇ ಮುಖ್ಯ ಸಮಾಜವಾದಿ ಕ್ರಾಂತಿ ಘಟಿಸಿಲ್ಲ ನಿಜ. ಆದರೆ ಅತ್ಯಂತ ಅನಿರೀಕ್ಷಿತ ಸ್ಥಳಗಳಲ್ಲಿ ಸ್ಫೋಟವಾಗುವುದೇ ಕ್ರಾಂತಿಯ ವಿಶಿಷ್ಟ ಗುಣ! ಪ್ರತಿಬಾರಿ ಕಮ್ಯುನಿಸಮ್ಮಿನ ಕತೆ ಮುಗಿಯಿತು ಎಂದು ಶೋಷಕರು ನಿಟ್ಟುಸಿರುಬಿಟ್ಟಾಗಲೂ, ಅವರ ಕಾಲಡಿಯಿಂದಲೇ ಸಮತಾವಾದದ 'ಭೂತ'ವು ಗಟ್ಟಿಯಾಗಿ ಆರ್ಭಟಿಸುತ್ತಾ 'ನಾನಿನ್ನೂ ಜೀವಂತವಾಗಿದ್ದೇನೆ' ಎಂದು ಘೋಷಿಸಿದೆ.

'ಚೆ' ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ. ಖ್ಯಾತ ಸಾಹಿತಿ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಝ್‌ರ ಸುಪ್ರಸಿದ್ಧ ಹೇಳಿಕೆಯೊಂದಿಗೆ ಈ ಲೇಖನವನ್ನು ಮುಗಿಸೋಣ.

**"ಚೆ ಗೆವಾರನ ಬಗ್ಗೆ ನಾನು ಸಾವಿರಾರು ವರ್ಷ ಬರೆಯಬಲ್ಲೆ, ಲಕ್ಷಾಂತರ ಪುಟಗಳನ್ನು ತುಂಬಿಸಬಲ್ಲೆ."**

**ಡಾ|| ಬಿ. ಆರ್. ಮಂಜುನಾಥ**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕ ನಗರ
ಎನ್. ಆರ್. ಕಾಲೋನಿ ಹತ್ತಿರ, ಬೆಂಗಳೂರು – ೫೬೦ ೦೫೦




# ಅನ್ನಾ ಕರೆನಿನ ಕಾದಂಬರಿಯಲ್ಲಿ ವ್ಯಕ್ತವಾಗುವ ಮನುಷ್ಯ ಸಂಬಂಧಗಳ ಸ್ವರೂಪ

೧೯ನೇ ಶತಮಾನದ ರಷ್ಯನ್ ಬರಹಗಾರರಾದ ಪುಷ್ಕಿನ್, ಮ್ಯಾಕ್ಸಿಂ ಗಾರ್ಕಿ, ಇವಾನ್ ಟರ್ಗನೇವ್, ಟಾಲ್‌ಸ್ಟಾಯ್, ದಾಸ್ತೋವಸ್ಕಿ ತಮ್ಮ ಕೃತಿಗಳಲ್ಲಿ ಯೂರೋಪಿನ ಕೈಗಾರಿಕೀಕರಣದ ಪ್ರಭಾವ ಮತ್ತು ರಷ್ಯನ್ ಸಮಾಜದ ಪರಿಸ್ಥಿತಿಯನ್ನು ಚಿತ್ರಿಸಿದ್ದಾರೆ.

ಝಾರ್ ನಿರಂಕುಶತ್ವದಲ್ಲಿ ರೈತರು ಮತ್ತು ಕಾರ್ಮಿಕರ ಮೇಲೆ ಭೂಮಾಲೀಕರು ದಬ್ಬಾಳಿಕೆಯನ್ನು ನಡೆಸುತ್ತಿದ್ದರು. ೧೯೦೩ರವರೆಗೂ ರೈತರು ಕಂದಾಯವನ್ನು ಪಾವತಿಸದಿದ್ದರೆ ಚಾಟಿ ಏಟಿಗೆ ಗುರಿಯಾಗಬೇಕಿತ್ತು. ಕಾರ್ಮಿಕರು ತಮ್ಮ ಮೂಲಭೂತ ಸಮಸ್ಯೆಗಳಿಗೆ ಪರಿಹಾರವಾಗಿ ಮುಷ್ಕರ ಹೂಡಿದಾಗ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಹೀಗೆ ರೈತರು ಮತ್ತು ಕಾರ್ಮಿಕರಿಗೆ ಝಾರ್‌ನ ಆಡಳಿತ ಸಂದರ್ಭದಲ್ಲಿ ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯವಿರಲಿಲ್ಲ. ಝಾರ್ ಆಡಳಿತದಲ್ಲಿ ರಷ್ಯನ್ ಮತ್ತು ರಷ್ಯೇತರ ಭಾಷೆಗಳನ್ನು ತಿಳಿದಿದ್ದ ಜನಾಂಗಗಳಿದ್ದವು. ಈ ಜನಾಂಗಗಳು ತಮಗೆ ತಿಳಿದಿದ್ದ ರಷ್ಯೇತರ ಭಾಷೆಗಳನ್ನು ವ್ಯಾವಹಾರಿಕವಾಗಿ ಬಳಸುವಂತಿರಲಿಲ್ಲ. ಅಷ್ಟೇ ಅಲ್ಲದೆ ಮಕ್ಕಳ ಶಿಕ್ಷಣವು ಸಹ ಇದೇ ಗುಂಪಿಗೆ ಸೇರಿದ್ದಾಗಿತ್ತು. ಹೀಗೆ ಝಾರ್ ಸರ್ಕಾರವು ಒಂದು ಭಾಷೆಯ ಸಂಸ್ಕೃತಿಯನ್ನು ಬೆಳೆಯಲು ಬಿಡದೇ ತನ್ನದೇ ಆದ ಒಂದು ಮಾನದಂಡವನ್ನು ಹಾಕಿಕೊಂಡು ಅದೇ ಮಾರ್ಗದಲ್ಲಿ ಸಾಗಲು ಜನಸಾಮಾನ್ಯರಿಗೆ ಒತ್ತಡವನ್ನು ಹೇರಿತ್ತು.

ಝಾರ್ ಆಡಳಿತ ಭೂಮಾಲೀಕರ ಮತ್ತು ಉಳ್ಳವರ ಪರವಾಗಿತ್ತೆ ಹೊರತು ಸಾಮಾನ್ಯ ಜನರ ಪರವಾಗಿರಲಿಲ್ಲ. ಜನರನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳುವುದೇ ಒಂದು ಪ್ರತಿಷ್ಠೆಯ, ಪ್ರಭುತ್ವದ ಸಂಕೇತವೆಂದುಕೊಂಡಿತು. ಭೂಮಾಲೀಕರು ಜೀತದಾಳುಗಳಾಗಿ ರೈತರನ್ನು ತಮ್ಮ ಬಂಧನದಲ್ಲಿ ಇಟ್ಟುಕೊಂಡಿದ್ದರು. ನಂತರ ಇವರ ವಿರುದ್ಧ ರೈತರು ದಂಗೆ ಎದ್ದರು. ೧೮೬೧ರಲ್ಲಿ ಕ್ರಿಮಿಯಾ ಯುದ್ಧದಲ್ಲಿ ಸೋತು ಹೋದ ಝಾರ್ ಸರ್ಕಾರವು ಭೂಮಾಲೀಕರ ವಿರುದ್ಧ ರೈತರು ದಂಗೆಯೇಳುತ್ತಿರುವುದನ್ನು ಗಮನಿಸಿ ರೈತರನ್ನು ದಾಸ್ಯದಿಂದ ಬಿಡುಗಡೆ ಮಾಡಿತು.

ಸಾಮಾಜಿಕ ಸಂಘರ್ಷವು ರಷ್ಯನ್ ಸಮಾಜದಲ್ಲಿ ವರ್ಗ ತಾರತಮ್ಯದ ಹಿನ್ನೆಲೆಯಲ್ಲಿ ಕಂಡು ಬರುತ್ತದೆ. ಭೂಮಾಲೀಕರು ರೈತರನ್ನು ತಮ್ಮ ಜೀತದಾಳುಗಳಾಗಿ ಬಂಧನಕ್ಕೆ ಸಿಲುಕಿಸುತ್ತಿದ್ದರು. 'ಊಳಿಗಮಾನ್ಯ ಪದ್ಧತಿ'ಯನ್ನು ಏನೇ ಆದರೂ ಮುಂದುವರೆಸಿಕೊಂಡು ಹೋಗಬೇಕೆಂಬುದು ಉಳ್ಳವರ ದೃಢ ನಿರ್ಧಾರವಾಗಿತ್ತು. ರಷ್ಯದಲ್ಲಿ ಕೃಷಿಯು ಪ್ರಧಾನವಾಗಿತ್ತು. ರೈತರು ಕೃಷಿಯನ್ನು ಹೆಚ್ಚು ಅವಲಂಬಿಸಿದರೂ ಭೂಮಾಲೀಕರ ಭೂಮಿಯಲ್ಲಿ ವ್ಯವಸಾಯದ ಕೆಲಸವನ್ನು ಮಾಡುತ್ತಿದ್ದರು. ನಂತರ ಭೂಮಾಲೀಕರಿಂದ ಬಿಡುಗಡೆಗೊಂಡು ಸ್ವತಂತ್ರ ಜೀವನವನ್ನು ನಡೆಸಬೇಕೆಂದು ತೀರ್ಮಾನಿಸಿದರೂ ಅವರ ಸ್ಥಿತಿ ಉತ್ತಮಗೊಳ್ಳಲಿಲ್ಲ.

ಭೂಮಾಲೀಕರು ಮತ್ತು ರೈತರ ನಡುವಿನ ಸಂಘರ್ಷವು ಬಿಡುಗಡೆಯ ನಂತರ ಬೇರೆಯದೇ ಆದ ರೂಪವನ್ನು ಪಡೆಯಿತು.

ರೈತರು ಸಾಗುವಳಿ ಮಾಡುತ್ತಿದ್ದಂತಹ ಭೂಮಿಯನ್ನು ಅಥವಾ ಜಮೀನಿನ ಬಹುಭಾಗವನ್ನು ಭೂಮಾಲೀಕರು ಅನೇಕ ವಿಧಗಳಿಂದ ಕಸಿದುಕೊಂಡರು.

'ವಿಮೋಚನೆ' ಎಂಬ ಹೆಸರಿನಲ್ಲಿ ರೈತರು ಭೂಮಾಲೀಕರಿಗೆ ಹಣ ನೀಡಬೇಕಾಯಿತು.

ರೈತರು ಸಾಗುವಳಿ ಮಾಡುವುದಕ್ಕೆ ಭೂಮಾಲೀಕರ ಬಳಿ ಷರತ್ತುಗಳಿಗೆ ಅನುಗುಣವಾಗಿ ಭೂಮಿಯನ್ನು ಬಾಡಿಗೆಗೆ ಪಡೆಯಬೇಕಾಗಿತ್ತು.

ಕೆಲವು ಸಲ ರೈತರು ತಮ್ಮ ಕೃಷಿ ಸಾಧನಗಳನ್ನು ತೆಗೆದುಕೊಂಡು ಭೂಮಾಲೀಕರ ಭೂಮಿಯಲ್ಲಿ ಉಚಿತವಾಗಿ ಸಾಗುವಳಿ ಮಾಡಬೇಕಾಗಿತ್ತು.

ಭೂಮಾಲೀಕರಿಂದ ಗೇಣಿಗೆ ಪಡೆದಿದ್ದ ಜಮೀನಿನ ಉತ್ಪತ್ತಿಯಲ್ಲಿ ಅರ್ಧಭಾಗವನ್ನು ಕೊಡುವ ಪದ್ಧತಿಯೇ ಹೆಚ್ಚಾಗಿತ್ತು".

ಹೀಗೆ ರೈತರು ಭೂಮಾಲೀಕರಿಂದ ಬಿಡುಗಡೆಯನ್ನು ಪಡೆದು ಎಲ್ಲಿಗೆ ಬೇಕಾದರೂ ಹೋಗುವ ಸ್ವಾತಂತ್ರ್ಯವನ್ನು ಪಡೆದಿದ್ದರೇ ಹೊರತು ಅವರ ಆರ್ಥಿಕ ಸ್ಥಿತಿಯು ಮಾತ್ರ ಸುಧಾರಿಸಲಿಲ್ಲ. ಬಂಡವಾಳಶಾಹಿಗಳು, ಭೂಮಾಲೀಕರು, ಕಾರ್ಮಿಕರು ಮತ್ತು ರೈತರನ್ನು ದಬ್ಬಾಳಿಕೆಗೆ ಮತ್ತು ಶೋಷಣೆಗೆ ಗುರಿಪಡಿಸುತ್ತಿದ್ದರು. ಇವುಗಳ ವಿರುದ್ಧ ದನಿಯೆತ್ತಿದವರ ವಿರುದ್ಧ ಕಠಿಣ ಶಿಕ್ಷೆಯನ್ನು ವಿಧಿಸುತ್ತಿದ್ದರು. ೧೯ನೇ ಶತಮಾನದಲ್ಲಿ ರಷ್ಯನ್ ಸಮಾಜದಲ್ಲಿದ್ದಂತಹ ಸಾಮಾಜಿಕ ಸಮಸ್ಯೆಗಳಾದ ವರ್ಗ ಸಂಘರ್ಷ ಮತ್ತು ನಿರ್ಗತಿಕರ ಬದುಕಿನ ಸ್ಥಿತಿಯನ್ನು ಟಾಲ್‌ಸ್ಟಾಯ್ ತನ್ನ ಬರವಣಿಗೆಯ ಮೂಲಕ ವ್ಯಕ್ತಪಡಿಸಿದ್ದಾನೆ.

ಯೂರೋಪಿನಲ್ಲಿ ಉಂಟಾದ ಕೈಗಾರೀಕರಣದ ಪ್ರಭಾವವು ರಷ್ಯದ ಮೇಲೆ ಪರಿಣಾಮ ಬೀರಿತು. ೧೮೬೦ರ ಹಿಂದೆ ರಷ್ಯದಲ್ಲಿ ಕೈಗಾರಿಕೆಯು ಕಡಿಮೆಯಿತ್ತು. ಬ್ರಿಟನ್, ಫ್ರಾನ್ಸ್, ಜರ್ಮನಿಗಳಲ್ಲಿ ಬಂಡವಾಳಶಾಹಿಯ ನಂತರ ರಷ್ಯದ ಮೇಲೂ ಪ್ರಭಾವ ಬೀರಿತ್ತು. ಆ ಸಂದರ್ಭದಲ್ಲಿ ಶ್ರಮಜೀವಿ ವರ್ಗ ಹುಟ್ಟಿಕೊಂಡಿತ್ತು. ಯೂರೋಪಿನ ಕೈಗಾರೀಕರಣದಿಂದ ಕಾರ್ಮಿಕರ ಬದುಕಿನ ಸ್ಥಿತಿಯನ್ನು ಗಮನಿಸಿದಾಗ ಪ್ರತಿದಿನ ಹನ್ನೆರಡೂವರೆ ಗಂಟೆಗಳಿಗಿಂತ ಕಮ್ಮಿ ಇಲ್ಲದಂತೆ ಕೆಲಸ ಮಾಡಬೇಕಿತ್ತು. ಬಟ್ಟೆ ಗಿರಣಿಗಳಲ್ಲಿ ೧೪, ೧೫ ಗಂಟೆಗಳವರೆಗೂ ದುಡಿಯಬೇಕಾಗಿತ್ತು. ಹೆಂಗಸರು ಮತ್ತು ಮಕ್ಕಳು ಗಂಡಸರಷ್ಟೇ ಕೆಲಸ ಮಾಡಬೇಕಿತ್ತು. ಆದರೆ ಕಾರ್ಮಿಕರಿಗೆ ಕೂಲಿ ಮಾತ್ರ ಕಡಿಮೆಯಿತ್ತು. ಜುಲ್ಮಾನೆ ಹಾಕುವುದು, ಕಮ್ಮಿ ಕೂಲಿ ಕೊಡುವುದು ಮುಂತಾದ ಶೋಷಣೆ ನಡೆಯಿತು. ಇದು ಮಾಲೀಕರ ವಿರುದ್ಧ ಮುಷ್ಕರ ಹೂಡಲು ಮೊದಲ ಕಾರಣವಾಯಿತು.

**ಶ್ವೇತ ಜೆ.**

ಕಮ್ಯೂನಿಸಂ ಮತ್ತು ಸಮಾಜವಾದದ ಗುರಿಯು ರಷ್ಯದಲ್ಲಿ ರೈತರು ಮತ್ತು ಕಾರ್ಮಿಕರ ಮೇಲೆ ಉಂಟಾಗುವಂತಹ ದಬ್ಬಾಳಿಕೆ ಮತ್ತು ಶೋಷಣೆಯನ್ನು ಹೋಗಲಾಡಿಸುವುದಾಗಿತ್ತು. ಶ್ರಮಜೀವಿ ವರ್ಗಕ್ಕೆ ಕ್ರಾಂತಿಕಾರಿ ಸಮಾಜವಾದ ತತ್ವವನ್ನು ಮೊಟ್ಟ ಮೊದಲು ಬೋಧಿಸಿದವರು ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಏಂಗೆಲ್ಸ್. ಇವರುಗಳ ತತ್ವವನ್ನು ಆಧಾರವಾಗಿಟ್ಟುಕೊಂಡು ಕೆಲಸ ಮಾಡಲು ಹೊರಟಿದ್ದು ರಷ್ಯದ ಲೆನಿನ್ ನಾಯಕತ್ವದ ಕಮ್ಯುನಿಸ್ಟ್ ಪಕ್ಷ. ಕ್ರಾಂತಿಪೂರ್ವ ಮತ್ತು ನಂತರದ ಸಾಮಾಜಿಕ ಬದುಕನ್ನು ರಷ್ಯನ್ ಸಾಹಿತ್ಯ ಅಭಿವ್ಯಕ್ತಪಡಿಸಿತು.

ಪ್ರಭುತ್ವ, ಧರ್ಮ ಮತ್ತು ಸರ್ಕಾರವು ಜನಸಾಮಾನ್ಯರನ್ನು ಆದಷ್ಟು ಮಟ್ಟಿಗೆ ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದವು. ಏಕೆಂದರೆ ನಿಯಂತ್ರಣದಲ್ಲಿದಷ್ಟೂ ತಮಗೆ ಲಾಭವೆಂಬುದನ್ನು ತಿಳಿದಿದ್ದವು. ರಷ್ಯನ್ ಸಮಾಜದ ಕುಟುಂಬ, ಮದುವೆ, ಗಂಡು ಮತ್ತು ಹೆಣ್ಣು ಮಕ್ಕಳ ಸ್ಥಾನಮಾನ, ಬದುಕು ಇವುಗಳಿಗೆ ಇದ್ದಂತಹ ಚೌಕಟ್ಟುಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಬದುಕಿನ ದುರಂತಕ್ಕೆ ಕಾರಣವಾಗುತ್ತದೆ. ಆಧುನಿಕತೆಯ ಪ್ರಭಾವದಿಂದ ಒಂದು ಗ್ರಾಮ ನಗರಕ್ಕೆ ವಲಸೆ ಬಂದು ನಗರದ ಆಕರ್ಷಣೆಗೆ ಒಳಗಾಗಿ ಬದುಕಿನ ಮೌಲ್ಯಗಳನ್ನು ಕಡೆಗಣಿಸಿದ್ದು ಒಂದೆಡೆ ಕಂಡುಬಂದರೆ, ಮತ್ತೊಂದೆಡೆ ಆಧುನಿಕ ಶಿಕ್ಷಣದಿಂದಾಗಿ ಗಂಡಿನಂತೆ ಹೆಣ್ಣಿಗೂ ಆಯ್ಕೆಯ ಹಕ್ಕು ಸಿಕ್ಕಿದ್ದು, ಇದರಿಂದಾಗಿ ಕೌಟುಂಬಿಕ ಜೀವನದಲ್ಲಿ ಉಂಟಾದಂತಹ ದುರಂತಗಳನ್ನು ಕಾಣುತ್ತೇವೆ.

**ಅನ್ನಾ ಕರೆನಿನ ಕಾದಂಬರಿಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪ :**

ಆಧುನಿಕತೆಯ ಪ್ರಭಾವವು ಮನುಷ್ಯ ಸಂಬಂಧಗಳ ಮೇಲೂ ಆಯಿತು. ಟಾಲ್‌ಸ್ಟಾಯ್ "ಮನುಷ್ಯ ಸಂಬಂಧವು ನಂಬಿಕೆಯಿಂದ, ವಿಶ್ವಾಸದಿಂದ ಮುಂದುವರೆಯಬೇಕು" ಎಂದು ತನ್ನ ಬರವಣಿಗೆಯಲ್ಲಿ ವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ.

ರೈತರು, ಭೂಮಾಲೀಕರು, ಕ್ರಿಶ್ಚಿಯಾನಿಟಿಯ ಹಿನ್ನೆಲೆಯಲ್ಲಿ ಗಮನಿಸಿದಾಗ ಟಾಲ್‌ಸ್ಟಾಯ್ ತನ್ನ ಕೃತಿಯ ಪಾತ್ರದ ಮೂಲಕ ಭೂಮಾಲೀಕರು, ರೈತರನ್ನು ನೋಡುವ ದೃಷ್ಟಿಯು ಬದಲಾಗಬೇಕು, ಉತ್ತಮ ಬದುಕು ಸಿಗಬೇಕು ಎಂದು ಚಿಂತಿಸಿದವನು. ಧರ್ಮದ ತತ್ವಗಳಲ್ಲಿ ನಂಬಿಕೆ ಹೊಂದಿದ್ದ ಟಾಲ್‌ಸ್ಟಾಯ್ ಆಧುನಿಕ ಪ್ರಭಾವವು ರಷ್ಯನ್ ಸಾಮಾಜಿಕ ಬದುಕಿನಲ್ಲಿ ಉಂಟುಮಾಡಿದ ತಲ್ಲಣಗಳನ್ನು ಗಮನಿಸುತ್ತೇವೆ.

ವಿವಿಧ ಬಗೆಯ ಮನುಷ್ಯ ಪಾತ್ರಗಳಲ್ಲಿ ಆಧುನಿಕ ಕುಟುಂಬಕ್ಕೆ ಒಳಗಾದ ದಂಪತಿಗಳನ್ನು ನೋಡಬಹುದು. ಮೂರು ಮಾದರಿಯ ಹಿನ್ನೆಲೆಯಲ್ಲಿ ಮನುಷ್ಯ ಸಂಬಂಧದ ಸ್ವರೂಪವನ್ನು ನೋಡಲಾಗಿದೆ.

ಮಾಸ್ಕೊ ಆಡಳಿತ ಕಛೇರಿಯ ಮುಖ್ಯಸ್ಥನಾದ ಅಬ್ಲಾನ್‌ಸ್ಕಿ ರಷ್ಯನ್ ಸಮಾಜದ ಆಧುನಿಕತೆಯ ನಗರದ ಆಕರ್ಷಣೆಗೆ ಒಳಗಾದವನು. ನಾಗರಿಕ ವಲಯದ ಗೆಳೆತನ ಹೆಚ್ಚಾದಂತೆ ಔತಣಕೂಟ, ಸಂಗೀತ, ನೃತ್ಯದಲ್ಲಿ ಪಾಲ್ಗೊಳ್ಳುವುದು ಮತ್ತು ಉದಾರವಾದಿ ನಿಲುವು, ವರ್ತಮಾನ ಪತ್ರಿಕೆಯ ಓದಿನಿಂದ ಈತನ ಅಭಿಪ್ರಾಯಗಳು ಸಂದರ್ಭಕ್ಕನುಗುಣವಾಗಿ ಬದಲಾಗುತ್ತಿದ್ದವು. ಅಬ್ಲಾನ್‌ಸ್ಕಿ ಆಧುನಿಕತೆಯ ಮಹತ್ವಾಕಾಂಕ್ಷೆ ಬೆನ್ನೇರಿ ಸ್ವಾರ್ಥಿಯಾಗುತ್ತಾನೆ. ತನ್ನ ಹಿಂದಿನ ಫ್ರೆಂಚ್ ಉಪಾಧ್ಯಾಯಿನಿಯೊಡನೆ ಪ್ರೇಮಕ್ಕೆ ಸಿಲುಕುತ್ತಾನೆ. ಈ ಸಂಬಂಧದಿಂದ ಅಬ್ಲಾನ್‌ಸ್ಕಿ ಮತ್ತು ಡಾಲಿಯ ಸಂಸಾರದಲ್ಲಿ ವಿರಸ ಉಂಟಾಗುತ್ತದೆ. ಪರಿಸ್ಥಿತಿಯ ಅಸಹಾಯಕತೆ, ತಪ್ಪಿನ ತೀವ್ರತೆ ಅಬ್ಲಾನ್‌ಸ್ಕಿಯಲ್ಲಿ ಸುಳಿದಾಡಿ ಮಾನಸಿಕ ವಿಪತ್ತಿಗೆ ಒಳಗಾಗಿದ್ದರೂ ಭೌತಿಕವಾಗಿ ಸಂತೋಷವಾಗಿದ್ದನು. ಈತ "ಬದುಕನ್ನು ಮನೋರಂಜನೆಯ ಕಡೆಗೆ ಕೊಂಡೊಯ್ಯುವುದು ನಾಗರಿಕತೆಯ ಉದ್ದೇಶ" ಎಂದು ಭಾವಿಸಿದನು. ವಾಸ್ತವಿಕ ಕುಟುಂಬ ಜೀವನದಲ್ಲಿ ಗಮನ ಕೊಡದೆ ಕನಸಿನ ಜೀವನದ ಒಲವನ್ನು ಪಡೆದವನು. ಬಾಲ್ಯದ ಗೆಳೆಯ ಲೆವಿನ್ ಅಬ್ಲಾನ್‌ಸ್ಕಿಯ ನಡವಳಿಕೆಯನ್ನು ವಿರೋಧಿಸಿದಾಗ ಅದನ್ನು ಒಪ್ಪಿಕೊಳ್ಳುವ ಮನಃಸ್ಥಿತಿಯಿರಲಿಲ್ಲ. ತನ್ನ ತಪ್ಪಿನ ಅರಿವು ಉಂಟಾದಾಗ ಕ್ರೈಸ್ತ ಧರ್ಮದ ಪ್ರಕಾರ ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವೇ ಪರಿಹಾರವೆಂಬಂತೆ ಅಬ್ಲಾನ್‌ಸ್ಕಿ ಕ್ಷಮೆಯಾಚಿಸುತ್ತಾನೆ. "ಡಾಲಿ ಎಂದವನು ಗದ್ಗದ ಧ್ವನಿಯಲ್ಲಿ ಗೋಣಗಿದ್ದನು. ದೇವರ ಹೆಸರಿನಲ್ಲಾದರೂ ಈ ಮಕ್ಕಳ ಬಗ್ಗೆ ಯೋಚಿಸು. ಅವರು ತಪ್ಪಿತಸ್ಥರಲ್ಲ ನಾನು ತಪ್ಪಿತಸ್ಥ ನನ್ನನ್ನು ಶಿಕ್ಷಿಸು ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವಂತೆ ನನಗೆ ಆಜ್ಞೆ ಮಾಡು" ಎಂದು ಕೇಳಿಕೊಳ್ಳುತ್ತಾನೆ.



## ಋತು

ವಸಂತ ಋತು<br>
ಋತುಮತಿ ಆದಾಗ<br>
ಅರಳಿದ ಹೂವೆಲ್ಲ<br>
ಕೆಂಪೋ ಕೆಂಪು !<br>
ಚಿಟ್ಟೆ ಬಂದು ಕೂತದ್ದು<br>
ಪರಾಗಸ್ಪರ್ಶವಾದದ್ದು<br>
ಅನೃತವಲ್ಲ ಋತ !

**ಶ್ರೀನಿವಾಸ ಕುಂಡಂತಾಯ**<br>
ಬೆಂಗಳೂರು – ೫೬೦ ೦೯೪

ಆಧುನಿಕತೆಯ ಪ್ರಭಾವಕ್ಕೆ ಒಳಗಾದ ರಷ್ಯನ್ ಸಮಾಜದಲ್ಲಿ ಹೆಣ್ಣಿಗೆ ಬದುಕಿನ ಆಯ್ಕೆಯಿದ್ದರೂ ಡಾಲಿಗೆ ದಾಂಪತ್ಯದ ಸಂಬಂಧದಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಡಾಲಿಗೆ ಆಸೆ, ಆಕಾಂಕ್ಷೆಗಳು ಇದ್ದರೂ ಕುಟುಂಬದೊಳಗೆ ತನ್ನ ಬದುಕನ್ನು ಮತ್ತು ಸಂಬಂಧವನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಾಳೆ ತನ್ನ ಮಕ್ಕಳು ಮತ್ತು ಅವರ ಭವಿಷ್ಯಕ್ಕಾಗಿ. ಎಲ್. ಎಸ್. ಶೇಷಗಿರಿರಾವ್‌ರವರು ಟಾಲ್‌ಸ್ಟಾಯ್ ಸಾಹಿತ್ಯದ ಮಾದರಿಯನ್ನು ಹೀಗೆ ಹೇಳುತ್ತಾರೆ: "ಯೂರೋಪಿನ ಕಾದಂಬರಿಗಳು ಮನಸ್ಸಿನ ವ್ಯಾಪಾರದ ಚಿತ್ರಣದಲ್ಲಿ ವಿಶಿಷ್ಟ ವಾಸ್ತವಿಕತೆ ಕಂಡುಬರುತ್ತದೆ" ಎನ್ನುತ್ತಾರೆ.

ಯೂರೋಪಿನ ಆಧುನಿಕತೆಯ ಬಾಹ್ಯ ಜಗತ್ತಿಗೆ ಒಳಗಾಗಿ ಮನುಷ್ಯ ಸಂಬಂಧವನ್ನು ದುರುಪಯೋಗಪಡಿಸಿಕೊಳ್ಳುವುದು ಕಂಡುಬರುತ್ತದೆ. ಗಂಡನ ನಡವಳಿಕೆಯಿಂದ ಬೇಸತ್ತು ಬಿಡುಗಡೆಯ ಹಂಬಲವಿದ್ದರೂ, ಪರಿಸ್ಥಿತಿಯೊಂದಿಗೆ ಬದುಕನ್ನು ನಡೆಸುವ ನಿರ್ಧಾರವನ್ನು ಡಾಲಿಯು ಮಾಡುವಳು. ತನ್ನ ನಾದಿನಿ ಅನ್ನಾಳಲ್ಲಿ ತನ್ನ ಪರಿಸ್ಥಿತಿಯನ್ನು ಹೇಳಿಕೊಳ್ಳುವ ಯೋಚನೆ ಮಾಡಿ, ತಕ್ಷಣವೇ ತನ್ನ ಆತ್ಮಗೌರವಕ್ಕೆ ಧಕ್ಕೆ ತರುವ ವಿಷಯವೆಂದು ಸುಮ್ಮನಾಗುವಳು. ಮನುಷ್ಯ ಸಂಬಂಧದ ತಳಹದಿ ನಂಬಿಕೆ. ಅಬ್ಲಾನ್‌ಸ್ಕಿಯ ತಂಗಿ ಅನ್ನಾ, ಡಾಲಿಯ ಜೊತೆಗೆ ಆಕೆಯ ಮನಃಸ್ಥಿತಿ ಮತ್ತು ಕುಟುಂಬದ ಪರಿಸ್ಥಿತಿಯನ್ನು ಚರ್ಚಿಸಿ ಡಾಲಿಯ ಮನಪರಿವರ್ತನೆ ಮಾಡುತ್ತಾಳೆ. ಡಾಲಿಯು ತನ್ನ ಮಹತ್ವಾಕಾಂಕ್ಷೆಗಳನ್ನು ನಿಯಂತ್ರಣದಲ್ಲಿಟ್ಟುಕೊಂಡು ಅನ್ಯೋನ್ಯತೆಯ ಸಂಬಂಧದ ಕಡೆಗೆ ಚಲಿಸುತ್ತಾಳೆ. ಡಾಲಿಯು ಆಧುನಿಕ ರಷ್ಯನ್ ಸಮಾಜದ ಆಕರ್ಷಣೆಗೆ, ಜೀವನ ಶೈಲಿಗೆ ಒಳಗಾಗದೆ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಸಂಬಂಧದಲ್ಲಿ ಹೋರಾಟ ಮಾಡುತ್ತಾಳೆ.

ಪೀಟರ್ಸ್‌ಬರ್ಗ್‌ನ ಶ್ರೀಮಂತ ವರ್ಗಕ್ಕೆ ಸೇರಿದ ಕರೆನಿನ್ ಗೌರವ, ಪ್ರತಿಷ್ಠೆ, ಸ್ಥಾನಮಾನ, ಮೆಚ್ಚುಗೆಯ ಹಂಬಲವುಳ್ಳವನು. ಕುಟುಂಬಕ್ಕಿಂತ ಸಾಮಾಜಿಕವಾಗಿ ತನ್ನನ್ನು ಹೆಚ್ಚಾಗಿ ಗುರುತಿಸಿಕೊಂಡವನು. ಈತನ ವರ್ತನೆಯಿಂದ ಬೇಸತ್ತ ಹೆಂಡತಿ ಅನ್ನಾ ಆಕಸ್ಮಿಕವಾಗಿ ಭೇಟಿಯಾದ ವ್ರಾನ್ಸ್ಕಿಯ ಪ್ರೇಮಕ್ಕೆ ಸಿಲುಕುತ್ತಾಳೆ. ವ್ರಾನ್ಸ್ಕಿಯ ಮೊದಲ ಭೇಟಿಯಲ್ಲಿ ಅನ್ನಾ ತನ್ನ ಭಾವನೆಗಳನ್ನು ನಿಯಂತ್ರಣದಲ್ಲಿಡಲು ಎಷ್ಟೇ ಪ್ರಯತ್ನಿಸಿದರೂ ತೀವ್ರತೆಯು ಪ್ರವಾಹದ ಹಾಗೆ ಹೆಚ್ಚಾಗುತ್ತದೆ. ಅನ್ನಾ ತನ್ನ ಅತ್ತಿಗೆ ಡಾಲಿಯ ಮನಃಪರಿವರ್ತನೆ ಮಾಡಿ ಗಂಡ ಮತ್ತು ಹೆಂಡತಿಯರ ನಡುವಿನ ಸಂಬಂಧವನ್ನು ಬೆಸೆಯುವುದರಲ್ಲಿ ಯಶಸ್ವಿಯಾಗುತ್ತಾಳೆ. ಆದರೆ ತನ್ನ ಬದುಕಿನಲ್ಲಿ ಉಂಟಾದ ದ್ವಂದ್ವಗಳಿಗೆ ಉತ್ತರ ತಿಳಿಯುವುದರಲ್ಲಿ ವಿಫಲಳಾಗುತ್ತಾಳೆ. ಸೈನಿಕನಾಗಿದ್ದ ವ್ರಾನ್ಸ್ಕಿಗೆ ಕೌಟುಂಬಿಕ ಬದುಕಿನ ಅರಿವಿರಲಿಲ್ಲ. ಸಾಮಾಜಿಕ ಪ್ರತಿಷ್ಠೆಯುಳ್ಳ ಅನ್ನಾಳೊಂದಿಗೆ ಬಾಂಧವ್ಯ ಬೆಳೆಸುವುದು ಹೆಮ್ಮೆಯಾಗಿತ್ತು. ರೈಲು ನಿಲ್ದಾಣವು ಅನ್ನಾ ಮತ್ತು ವ್ರಾನ್ಸ್ಕಿಯ ಪ್ರೇಮದ ಚಿಲುಮೆಗೆ, ಬದುಕಿನ ತಿರುವುಗಳಿಗೆ

ಸಂಕೇತವಾಗಿದೆ. ಅನ್ನಾ ತನ್ನ ಮನಸ್ಸಿನ ಭಾವನೆಗಳಿಗೆ ಉತ್ತರವಾಗಿ ವ್ರಾನ್ಸ್ಕಿಯ ಪ್ರೀತಿಯಲ್ಲಿ ಕಂಡುಕೊಳ್ಳುತ್ತಾಳೆ.

ಅನ್ನಾಳ ವರ್ತನೆ ತಿಳಿದ ಕರೆನಿನ್ ಸಾಮಾಜಿಕ ಪರಿಸ್ಥಿತಿ, ಮದುವೆ, ಕುಟುಂಬದ ಬಗೆಗಿನ ತಾತ್ವಿಕ ವಿಚಾರಗಳನ್ನು ಹೇಳಿದರೂ ಅನ್ನಾ ವ್ರಾನ್ಸ್ಕಿಯ ಮೋಹದಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಈಕೆ ಆಧುನಿಕ ಮಹಿಳೆಯ ಪ್ರತಿನಿಧಿಯಾಗಿದ್ದಾಳೆ. ರಷ್ಯನ್ ಸಮಾಜದ ಸಂಪ್ರದಾಯವನ್ನು ಧಿಕ್ಕರಿಸಿ ತನಗೆ ಬೇಕಾದ ಬದುಕನ್ನು ಆಯ್ಕೆ ಮಾಡಿಕೊಳ್ಳುತ್ತಾಳೆ. ಇವರಿಬ್ಬರು ಸಮಾಜವನ್ನು ಬಿಟ್ಟು ತಮ್ಮದೇ ಒಂಟಿತನದ ಜೀವನವನ್ನು ನಡೆಸಿದರೂ ಸಹ ಸಮಾಜದ ದೂರುಗಳಿಗೆ ಗುರಿಯಾಗಬೇಕಾಗುತ್ತದೆ. ಇವರಿಬ್ಬರ ಪ್ರೀತಿ ಕ್ರಮೇಣ ಅನುಮಾನ, ಗೊಂದಲಗಳಿಗೆ ಸಿಲುಕುತ್ತದೆ. ವ್ರಾನ್ಸ್ಕಿ ಅನ್ನಾಳ ಪ್ರೀತಿಯಿಂದ ಹೊರಬಂದಾಗ ಈಕೆ ಮಾನಸಿಕ ತೊಳಲಾಟಕ್ಕೆ ಗುರಿಯಾಗುತ್ತಾಳೆ. "ಕರೆನಿನ್ ಮತ್ತು ವ್ರಾನ್ಸ್ಕಿ ಇಬ್ಬರೂ ತನ್ನ ಮೇಲೆ ಆಸೆಪಟ್ಟರೂ, ತನ್ನನ್ನು ಪಡೆಯಬೇಕೆಂದುಕೊಂಡರೇ ಹೊರತು, ತನ್ನ ಮನಸ್ಸನ್ನು ಅರ್ಥಮಾಡಿಕೊಳ್ಳಲಿಲ್ಲ, ತನ್ನ ಪರಿಸ್ಥಿತಿಯನ್ನು ಯಾರೂ ಅರಿಯಲು ಸಾಧ್ಯವಾಗಲಿಲ್ಲ" ಎಂದು ಖಿನ್ನತೆಗೆ ಒಳಗಾಗುತ್ತಾಳೆ. ಮನಸ್ಸಿನ ದ್ವಂದ್ವ ಯೋಚನೆಯಲ್ಲಿ ರೈಲಿಗೆ ಸಿಲುಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಧುನಿಕತೆಯ ಪ್ರಭಾವದ ವಿವೇಚನೆ ಇಲ್ಲದೆ ಹೆಣ್ಣು ಹೇಗೆ ದುರಂತವನ್ನು ಕಾಣುತ್ತಾಳೆ ಎಂಬ ಪ್ರತಿನಿಧಿಯಂತೆ ಅನ್ನಾಳ ಪಾತ್ರವು ಕಂಡುಬರುತ್ತದೆ. ಅವಳು ಬದುಕಿನ ಸಂಬಂಧದ ಆಯ್ಕೆಯಲ್ಲಿ ಸಂಕಷ್ಟಗಳಿಗೆ ಸಿಲುಕಿ ಎಲ್ಲೂ ನೆಲೆ ಕಾಣಲು ಸಾಧ್ಯವಾಗದಿರುವುದನ್ನು ಕಾಣುತ್ತೇವೆ.

ಲೆವಿನ್ ಸಮಾಜ ಸುಧಾರಕನಾಗಿ ಮತ್ತು ಮನುಷ್ಯ ಸಂಬಂಧಗಳ ಆದರ್ಶ ಜೀವನದ ಕಡೆಗೆ ಒಲವನ್ನು ಪಡೆದವನು. ಈತ ತನ್ನ ಸಹಚರರೊಂದಿಗೆ ರಷ್ಯನ್ ಸಾಮಾಜಿಕ, ರಾಜಕೀಯ, ಕಾರ್ಮಿಕರ ಪರಿಸ್ಥಿತಿಯನ್ನು ಕುರಿತು ಚರ್ಚಿಸುವ ಮನೋಧರ್ಮದವನು. ರೈತಪರ ಕಾಳಜಿಯಿಂದ ವರ್ಗ ತಾರತಮ್ಯವನ್ನು ಹೋಗಲಾಡಿಸಬೇಕೆಂಬ ಹಂಬಲವುಳ್ಳವನು. ಮಾಸ್ಕೊ ಮತ್ತು ಪೀಟರ್ಸ್ ಬರ್ಗ್ ನಗರಗಳಿಗೆ ಕೆಲವೊಮ್ಮೆ ಬಂದಾಗ ಭಾವೋದ್ವೇಗಕ್ಕೆ ಒಳಗಾಗುತ್ತಿದ್ದನು. ಸರಳ ವ್ಯಕ್ತಿತ್ವ, ಶ್ರಮಜೀವಿಯಾದ ಈತ ಹಳ್ಳಿಯ ಬದುಕಿಗೆ ಬೆಲೆ ಕೊಡುವವನು. ಅವನು ಆಧುನಿಕ ರಷ್ಯನ್ ಸಮಾಜದ ವೈಭವೀಕರಣಕ್ಕೆ ಒಳಗಾಗಿರಲಿಲ್ಲ. ಒಮ್ಮೆ ದೂರದ ಹಳ್ಳಿಯೊಂದರ ರೈತನೊಡನೆ ಮಾತಾಡುವಾಗ "ನಾನೀಗ ಕೆಲಸ ಮಾಡುವ ಅಗತ್ಯತೆಯಿದೆ, ದುಡಿಯಲು ಸಾಕಷ್ಟು ಕಾರಣವಿದೆ, ನಾನು ದುಡಿಯಬೇಕಾದ್ದು ನನಗಾಗಿ ಅಲ್ಲ ಸಮಾಜದ ಕಲ್ಯಾಣಕ್ಕಾಗಿ ಬೇಸಾಯದಲ್ಲಿ ಸಂಪೂರ್ಣ ಬದಲಾವಣೆ ಆಗುವುದು ಅತ್ಯವಶ್ಯವಾಗಿದೆ. ಜನತೆಯ ಮೂಲಭೂತ ಸ್ಥಿತಿಗತಿಗಳಲ್ಲಿ ಪರಿವರ್ತನೆ ಆಗಬೇಕಾಗಿದೆ" ಎಂದು ಹೇಳುತ್ತಾನೆ. ತಾನು ರೂಪಿಸಿಕೊಂಡ ಆದರ್ಶ ಬದುಕಿನ ನಿಲುವುಗಳು ಮತ್ತು ಶ್ರಮಜೀವಿಯ ಬದುಕು ಸಮಾಜದಲ್ಲಿ ರೂಪಿತವಾಗಬೇಕೆಂದು ಬಯಸುತ್ತಾನೆ. ಯಂತ್ರಗಾರಿಕೆ, ಬಂಡವಾಳ ಪದ್ಧತಿ, ಭೂಮಾಲೀಕರು, ಶ್ರೀಮಂತರ ದಬ್ಬಾಳಿಕೆ ಮತ್ತು ವರ್ಗತಾರತಮ್ಯದಿಂದ ಉಂಟಾದ ಸಮಸ್ಯೆಗಳನ್ನು ತಮ್ಮ ನಿಕೊಲಾಯ್‌ಯೊಂದಿಗೆ ಚರ್ಚಿಸುತ್ತಾನೆ.

ಕಿಟ್ಟಿಯು ಮೊದಲು ವ್ರಾನ್ಸ್ಕಿಯ ಮೋಹದ ಆಕರ್ಷಣೆಗೆ ಒಳಗಾಗಿ ಲೆವಿನ್‌ನ ಪ್ರೀತಿಯನ್ನು ನಿರಾಕರಿಸುತ್ತಾಳೆ. ಕೆಲವೊಮ್ಮೆ ಲೆವಿನ್‌ನ ಪ್ರೀತಿಯನ್ನು ಒಪ್ಪುವ ನಿಲುವಿದ್ದರೂ ಈಕೆಯ ಮನಸ್ಸು ಆಕರ್ಷಣೆಯ ಬದುಕಿನ ಕಡೆಗೆ ಚಲಿಸುವ ಕಾರಣ ದ್ವಂದ್ವತೆಗೆ ಸಿಲುಕಿ ನಿರಾಕರಿಸುತ್ತಾಳೆ. ಕಿಟ್ಟಿ ಆಧುನಿಕ ಸ್ತ್ರೀಯಂತೆ ಕಂಡುಬಂದರೂ



ಪಾಪ.. ಮಗು ಕೇಳ್ತಿದೆ.. ಅದೇನೋ ರಾಜ್ಯೋತ್ಸವ ಪ್ರಶಸ್ತಿಯಂತೆ.. ಒಂದು ಕೊಡಿಸಬಾರದೇನ್ರೀ..?!

ಆಕೆಯ ಆಲೋಚನೆ ಸಂಪ್ರದಾಯವಾದಿ ನಿಲುವುಗಳಿಗೆ ಒಳಗಾಗುತ್ತದೆ. ಈಕೆ ವೈಭವದ ಜೀವನವನ್ನು ಆಯ್ಕೆ ಮಾಡಿಕೊಳ್ಳದೆ ವಾಸ್ತವಿಕ ಜೀವನದಲ್ಲಿ ಲೆವಿನ್‌ನನ್ನು ಮದುವೆಯಾಗಿ ಗಂಡ, ಮಗು, ಕುಟುಂಬದ ಆದರ್ಶದ ಸಂಬಂಧದಲ್ಲಿ ಬದುಕನ್ನು ಕಟ್ಟಿಕೊಳ್ಳುವ ರೀತಿಯನ್ನು ಕಾಣುತ್ತೇವೆ. ಕಿಟ್ಟಿಯ ಸ್ವಭಾವದಲ್ಲಿ ಸಂಕೋಚ, ಅನುಮಾನ, ದ್ವಂದ್ವಗಳು ಬದುಕಿನಲ್ಲಿ ಉಂಟಾಗುತ್ತಿರುತ್ತದೆ. ಲೆವಿನ್ ಮತ್ತು ಕಿಟ್ಟಿಯ ಸಂಬಂಧವು ಪ್ರೀತಿ, ವಿಶ್ವಾಸ, ನಂಬಿಕೆಗಳಿಂದ ಒಂದು ಆದರ್ಶದ ಪ್ರತೀಕದಂತೆ ಕಂಡುಬರುತ್ತದೆ.

ಒಟ್ಟಾರೆಯಾಗಿ 'ಅನ್ನಾ ಕರೆನಿನ' ಕಾದಂಬರಿಯಲ್ಲಿ ಮನುಷ್ಯ ಸಂಬಂಧಗಳ ಸ್ವರೂಪವು ರಷ್ಯನ್ ಸಮಾಜದ ವಾಸ್ತವಿಕ ಸಂಗತಿಗಳ ವಿವಿಧ ಆಯಾಮಗಳ ಚರ್ಚೆ ಮತ್ತು ಆಧುನೀಕರಣಕ್ಕೆ ಒಳಗಾದ ವ್ಯಕ್ತಿಯು ತನ್ನ ಅಸ್ತಿತ್ವವನ್ನು ಹುಡುಕುವ ನೆಲೆಗಟ್ಟಿನಲ್ಲಿ ಸಾಗುವುದನ್ನು ಕಾಣಬಹುದಾಗಿದೆ. ಆಧುನಿಕ ಪ್ರಭಾವ ಹಾಗೂ ನಗರದ ಆಕರ್ಷಣೆಗೆ ಒಳಗಾಗಿ ತನ್ನ ಬದುಕನ್ನು ದುರಂತಕ್ಕೆ ಗುರಿಮಾಡಿಕೊಳ್ಳುವ ರೀತಿ ಮತ್ತು ಕುಟುಂಬದ ಸಂಬಂಧದಲ್ಲಿ ಉಂಟಾಗುವಂತಹ ವೈಪರೀತ್ಯವನ್ನು ಗುರುತಿಸಬಹುದಾಗಿದೆ. ಗಂಡು ಮತ್ತು ಹೆಣ್ಣಿನ ಸಂಬಂಧವು ಪರಸ್ಪರ ನಂಬಿಕೆಯಿಂದ ಸಾಗುವ ಪರ್ಯಾಯವನ್ನು ಟಾಲ್‌ಸ್ಟಾಯ್ ಹುಡುಕುವ ಮಾದರಿಯನ್ನು ತಿಳಿಯಬಹುದಾಗಿದೆ.

**ಶ್ವೇತ ಜೆ.**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ ಆವರಣ, ಬೆಂಗಳೂರು – ೫೬೦ ೦೫೬

## ಗಜಲ್..

ವಿರಹದಲಿ ನಿನ್ನ ನೆನಪಿನ ಭಾರ ಎಷ್ಟಂತ ಸಹಿಸಲಿ
ಕರುಳ ಹಿಂಡುವ ಒಲುಮೆಯ ಕಂಬನಿಯ ಎಷ್ಟಂತ ತಡಿಯಲಿ

ಒಬ್ಬರಿಗೊಬ್ಬರು ಒಂದೊಂದು ಮುತ್ತಿಗೂ ಗುರುತಿಟ್ಟು
ಅಮವಾಸೆಯ ಕತ್ತಲಲ್ಲಿ ಆಕಾಶದ ಚುಕ್ಕಿಗಳನ್ನ ಎಷ್ಟಂತ ಎಣಿಸಲಿ

ಪ್ರೀತಿಯ ದೀಪ ಹಚ್ಚಿ ಬೆಳಕ ಬಿತ್ತಬೇಕೆಂದು
ವಿಷದ ತುತ್ತುಗಳಂತಿರುವ ನಿನ್ನ ಅಮಲಿನ ದಿನಗಳನ್ನ ಎಷ್ಟಂತ ಕಳಿಯಲಿ

ಉದ್ಧಾನಿ ಹಿಡಿದು ತಿರುಗುತ್ತಿದ್ದೇನೆ ಜಾಗ ಪವಿತ್ರಗೊಳಿಸಲು
ನಾನು ನೀನು ಕೂಡಿ ಜಗತ್ತನ್ನು ಮರೆತ ಜಾಗದ ಮುಂದೆ ಎಷ್ಟಂತ ದೂವಾ ಮಾಡಲಿ

ಹೊಳೆದಂಡಿ ಮ್ಯಾಲೆ ನಾನು ನೀನು ನಡೆದ ಹೆಜ್ಜೆಗಳಿಗೆ
ಕಲ್ಲು ಮುಳ್ಳು ಬೀಳದಂತೆ ಎಷ್ಟಂತ ತಡಿಯಲಿ

ನಿನ್ನ ಮರಿಬೇಕಂತ ಮರಿಯೋದನ್ನೆ ಜಪಿಸುವ ಮನಸು
ಒಲವಿನ ಪೂಜೆಗೆ ಕುಳಿತ ಶರೀಫ್ ನ ಧ್ಯಾನಕ್ಕೆ ಎಷ್ಟಂತ ಧೈರ್ಯ ಹೇಳಲಿ.

**ಶರೀಫ್ ಹಸಮಕಲ್**
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಶೃಂ**ಗಸಭೆಗಳು ಈಗ ಸರದಿಯಾಗಿಬಿಟ್ಟಿವೆ. ಒಂದು ಕಾಲದಲ್ಲಿ ಅದು ಅಪರೂಪದ್ದಾಗಿತ್ತು. ಶೀತಯುದ್ಧದ ಕಾಲದಲ್ಲಿ ಅದು ಪ್ರಾಮುಖ್ಯತೆ ಪಡೆದಿತ್ತು. ಶೃಂಗಸಭೆಗಳಲ್ಲಿನ ತೀರ್ಮಾನಗಳು, ಜಂಟಿ ಹೇಳಿಕೆಗಳು, ಪತ್ರಿಕಾಗೋಷ್ಠಿಗಳು ಮಾಧ್ಯಮಗಳಲ್ಲಿ ತಿಂಗಳುಗಟ್ಟಲೆ ಚರ್ಚೆಗೆ ಗ್ರಾಸವಾಗುತ್ತಿತ್ತು. ಇತ್ತೀಚೆಗೆ ನಡೆದ ಶೃಂಗ ಸಭೆಗಳಲ್ಲಿ ಮುಖ್ಯವೆನಿಸಿದ್ದು ಅಮೆರಿಕ ಮತ್ತು ಉತ್ತರ ಕೊರಿಯದ ನಾಯಕರ ಭೇಟಿ.

ದೆಹಲಿಗೆ ಎರಡು ದಿನಗಳ ಭೇಟಿ ನೀಡಿದ್ದ ರಷ್ಯಾದ ಅಧಿಪತಿ ವ್ಲಾದಿಮಿರ್ ಪುಟಿನ್ ಭೇಟಿ ಭಾರತ–ರಷ್ಯ ನಡುವಿನ ಬಾಂಧವ್ಯವನ್ನು ಮತ್ತೊಮ್ಮೆ ದೃಢಪಡಿಸಿದೆ. ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಅಮೆರಿಕದ ಜೊತೆ ಸಂಬಂಧಗಳನ್ನು ಹೆಚ್ಚಿಸಲು, ಮೆಚ್ಚಿಸಲು ಸತತವಾದ ಪ್ರಯತ್ನ ನಡೆದಿತ್ತು. ಪರಂಪರಾಗತವಾಗಿ ಬೆಳೆದುಬಂದಿದ್ದ ಭಾರತ–ರಷ್ಯ ಬಾಂಧವ್ಯವನ್ನು ಮೀರಿಸಿ ಅಮೆರಿಕದೊಂದಿಗೆ ಮೋದಿ ಸರಕಾರ 'ವ್ಯೂಹಾತ್ಮಕ ಪಾಲುದಾರಿಕೆ' (ಸ್ಟ್ರಾಟೆಜಿ ಪಾರ್ಟನರ್‌ಷಿಪ್) ಹೊಸೆದಿತ್ತು. ಅಮೆರಿಕದಿಂದ ಅಧಿಕವಾಗಿ ರಕ್ಷಣಾ ಸಾಮಗ್ರಿಯನ್ನು ಖರೀದಿಸತೊಡಗಿತ್ತು. ಭಯೋತ್ಪಾದನೆಯ ವಿರುದ್ಧವಾಗಿ ಜಂಟಿ ಸಮರದಲ್ಲಿ ಪಾಕಿಸ್ತಾನ–ಅಮೆರಿಕ ಸ್ನೇಹಸಂಬಂಧಗಳನ್ನು ಕುಂದಿಸುವ




# ರಷ್ಯ – ಭಾರತ ಮೈತ್ರಿ ದೃಢಗೊಳಿಸಿದ ಶೃಂಗಸಭೆ

ಗುರಿಗೆ ಆದ್ಯತೆ ನೀಡಿತ್ತು. ಎರಡು ವರ್ಷಗಳ ಹಿಂದೆ ಗೋವಾದಲ್ಲಿ ಪುಟಿನ್–ಮೋದಿ ಭೇಟಿಯಾಗಿದ್ದರು. ಈ ವರ್ಷ ಮೇ ತಿಂಗಳಲ್ಲಿ ಪ್ರಧಾನಿ ಮೋದಿ ರಷ್ಯದ ಅಧ್ಯಕ್ಷ ಪುಟಿನ್‌ರನ್ನು ಭೇಟಿಯಾಗಲು ರಷ್ಯದ ರಿಸಾರ್ಟ್ ಸೋಚಿಗೆ ಹೋಗಿದ್ದಾಗ ಅಮೆರಿಕದ ಅಧಿಕಾರಿಗಳು ರಷ್ಯದಿಂದ ಎಸ್–೪೦೦ ಕ್ಷಿಪಣಿಗಳನ್ನು ಖರೀದಿಸಿದರೆ ಆರ್ಥಿಕ ದಿಗ್ಬಂಧನವನ್ನು ಎದರಿಸಬೇಕಾದೀತು ಎಂದು ಎಚ್ಚರಿಸಿದ್ದರು. ಭಾರತಕ್ಕೆ ಈಚೆಗೆ ಭೇಟಿ ನೀಡಿದ್ದ ಅಮೆರಿಕದ ಕಾಂಗ್ರೆಸ್ ಸದನದ ನಿಯೋಗ ಕೂಡ ಅದನ್ನೇ ಕುರಿತು ಎಚ್ಚರಿಸಿತ್ತು. ಭಾರತದಲ್ಲಿ ಈಚೆಗೆ ನಡೆದ ೨+೨ರ ಸಭೆಯಲ್ಲೂ, ಅಂದರೆ ಭಾರತ–ಅಮೆರಿಕ ವಿದೇಶಾಂಗ ಸಚಿವರು ಮತ್ತು ರಕ್ಷಣಾ ಸಚಿವರ ಸಭೆಯಲ್ಲಿ ಮಿಸೈಲ್ ಖರೀದಿ ವಿಷಯ ಪ್ರಸ್ತಾಪವಾದರೂ ಇತ್ಯರ್ಥವಾಗಲಿಲ್ಲ. ಚೀಣಾದ ಕಂಪೆನಿಯೊಂದು ರಷ್ಯದಿಂದ ಎಸ್–೪೦೦ ಕ್ಷಿಪಣಿಗಳನ್ನು ಖರೀದಿಸಿದ ನಂತರ ಅಮೆರಿಕ ಆರ್ಥಿಕ ದಿಗ್ಬಂಧನ ಹೇರಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅಮೆರಿಕದ ಒತ್ತಡದ ಪರಿ ಎಂಥದ್ದು ಎಂಬುದರ ಅನುಭವ ಪ್ರಪಂಚದ ಹಲವು ದೇಶಗಳಿಗೆ ಅರಿವಾಗಿದೆ. ಬಂಗ್ಲಾದೇಶ ವಿಮೋಚನೆಯ ಸಂದರ್ಭದಲ್ಲಿ ಭಾರತ–ರಷ್ಯ ಒಪ್ಪಂದವಾದಾಗ ಅಮೆರಿಕ ತಳೆದ ನಿಲುವನ್ನು ಭಾರತ ಅನುಭವಿಸಿದೆ.





ಅಮೆರಿಕದಿಂದ ಒತ್ತಡವಿದ್ದಾಗ್ಯೂ ಲೆಕ್ಕಿಸದೆ ರಷ್ಯದಿಂದ ಎಸ್–೪೦೦ ಕ್ಷಿಪಣಿಗಳನ್ನು ಖರೀದಿಸಲು ಒಪ್ಪಂದವಾಗಿರುವುದು ಮತ್ತೊಮ್ಮೆ ಎರಡೂ ದೇಶಗಳ ಸಂಬಂಧಗಳನ್ನು ದೃಢಪಡಿಸಿದೆ. ಸುಮಾರು ಐದು ಬಿಲಿಯ ಡಾಲರುಗಳ ಈ ಒಪ್ಪಂದ ಅಮೆರಿಕದಿಂದ ದಿಗ್ಬಂಧನವನ್ನು ಎದುರಿಸಬೇಕಾದೀತು. ಜಂಟಿ ಹೇಳಿಕೆಯಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಲಿಲ್ಲ ಎಂಬುದು ಗಮನಾರ್ಹ. ಪ್ರಧಾನಿ ಮೋದಿ ಪತ್ರಿಕಾ ಹೇಳಿಕೆಯಲ್ಲಿ ರಕ್ಷಣಾ ಕ್ಷೇತ್ರದಲ್ಲಿ ರಷ್ಯದೊಂದಿಗೆ ಸಹಕರಿಸುವ ಪ್ರಸ್ತಾಪವೇ ಇರಲಿಲ್ಲ. ಉಳಿದಂತೆ ಎಲ್ಲವೂ ಮಾಮೂಲಿ. ಅಂತರರಾಷ್ಟ್ರೀಯ ಪ್ರಶ್ನೆಗಳನ್ನು ಕುರಿತು ವಿವರವಾದ ಚರ್ಚೆ ನಡೆದಿತ್ತು. ಆಫ್ಘಾನಿಸ್ತಾನದ ವಿಚಾರದಲ್ಲಿ ಮಾಸ್ಕೋದ ನಿಲುವಿಗೆ ಭಾರತ ಬೆಂಬಲ ನೀಡಿದೆ. ತಾಲಿಬಾನ್‌ಅನ್ನು ಪ್ರಾದೇಶಿಕ ಹಾಗೂ ಪ್ರಮುಖ ಶಕ್ತ ರಾಷ್ಟ್ರಗಳ ಜೊತೆ ಸಂಧಾನಕ್ಕೆ ತರುವ ವಿಚಾರದಲ್ಲಿ ಅಮೆರಿಕ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದೆ. ತಾಲಿಬಾನ್ ಜೊತೆ ಪ್ರತ್ಯೇಕವಾದ ಮಾತುಕತೆಗಳನ್ನು ನಡೆಸುವುದು ಅಮೆರಿಕದ ಇರಾದೆ.

ಮತ್ತೆ ಕುದುರಿದ ಭಾರತ–ರಷ್ಯ ಸಂಬಂಧಗಳು ಅಮೆರಿಕದ ಕಣ್ಣು ಕೆಂಪಾಗಿಸಿವೆ. ಎಸ್–೪೦೦ ಕ್ಷಿಪಣಿ ಖರೀದಿ ಒಪ್ಪಂದದ ಜೊತೆಗೆ ರಷ್ಯದೊಂದಿಗಿನ ಪ್ರತಿಯೊಂದು ರಕ್ಷಣಾ ವಹಿವಾಟು ಕೂಡ ಅಮೆರಿಕದ ದಿಗ್ಬಂಧನದ ಭೀತಿ ಆಕರ್ಷಿಸುತ್ತದೆ. ಎರಡು ದೋಣಿಗಳಲ್ಲಿ ಕಾಲಿರಿಸಿರುವ ಪ್ರಧಾನಿ ಮೋದಿ ಅಮೆರಿಕ ಮತ್ತು ರಷ್ಯದೊಂದಿಗೆ ಸಂಬಂಧಗಳನ್ನು ಹೇಗೆ ನಿಭಾಯಿಸುವರೆಂಬುದನ್ನು ನೋಡಬೇಕಾಗಿದೆ. ರಷ್ಯ ಯಾವತ್ತೂ ಭಾರತಕ್ಕೆ ಬೆಂಬಲ ಸೂಚಿಸಿದೆ. ಕಾಶ್ಮೀರದ ಪ್ರಶ್ನೆ ವಿಶ್ವಸಂಸ್ಥೆಯಲ್ಲಿ ಬಂದಾಗಲೆಲ್ಲ ರಷ್ಯಾದ ವೀಟೋ ಶ್ರೀರಕ್ಷೆಯಾಗಿತ್ತು ಎಂಬುದನ್ನು ಮರೆಯುವಂತಿಲ್ಲ. ಹಾಗೆಯೇ ಭಾರತದ ಪಂಚವಾರ್ಷಿಕ ಯೋಜನೆಗಳಿಗೆ, ಮುಖ್ಯವಾಗಿ ಉಕ್ಕಿನ ಕಾರ್ಖಾನೆ ಸ್ಥಾಪನೆಗೆ ರಷ್ಯಾದ ಕೊಡುಗೆ ಸ್ಮರಣೀಯ. ಹಾಗಾಗಿ ರಷ್ಯ ಭಾರತದ ನಂಬಿಕಾರ್ಹವಾದ ಮಿತ್ರವಾಗಿದೆ. ಅಂತೂ ಭಾರತಕ್ಕೆ ರಷ್ಯಾದ ಅಧ್ಯಕ್ಷ ವ್ಲಾದಿಮಿರ್ ಪುಟಿನ್ ಭೇಟಿ ಭಾರತ–ರಷ್ಯ ಸಂಬಂಧಗಳಿಗೆ ಪುನಶ್ಚೇತನ ನೀಡಿದೆ.

**ಸೀಯಾರ್ಕೆ**
"ಸೂರ್ಯ ರೆಸಿಡೆನ್ಸಿ", ಫ್ಲಾಟ್–೧, # ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಹಂತ, ಬೆಂಗಳೂರು – ೫೬೦ ೦೮೫

# ಮನೆ ಕೆಲಸ ಗೌರವಾನ್ವಿತವಾಗಿ

**ನೂತನ ಎಂ. ದೋಶೆಟ್ಟಿ**

ನನ್ನ ಬಂಗಾರದ ಬಳೆ ಕಳೆದುಹೋಗಿದ್ದು ನನಗೆ ತಿಳಿದದ್ದೇ ೫-೬ ದಿನಗಳ ನಂತರ. ಅದೊಂದು ಶನಿವಾರ ಅದನ್ನು ತೆಗೆದು ಬಚ್ಚಲಲ್ಲಿ ಇಟ್ಟ ನೆನಪು. ಆಮೇಲೆ ಅದರ ನೆನಪಾದದ್ದೇ ಮುಂದಿನ ಗುರುವಾರ ಬೆಳಿಗ್ಗೆ. ಬಳೆ ಹಾಕಿಕೊಳ್ಳಲು ಕರಡಿಗೆ ತೆಗೆದಾಗ ಅದರಲ್ಲಿ ಇರದದ್ದನ್ನು ಕಂಡು ಗಾಬರಿಯಾಯಿತು. ಹಾಗೆಂದು ಅಧೀರಳಾಗದೆ ನಿಧಾನವಾಗಿ ಕಳೆದ ವಾರದಲ್ಲಿ ನಡೆದ ಘಟನಾವಳಿಗಳನ್ನು ಮೆಲುಕು ಹಾಕಿದೆ. ಆ ನೆನಪು ಕಳೆದ ಶನಿವಾರಕ್ಕೆ ಬಂದು ನಿಂತಿತು. ಆದರೂ ಮನೆಯ ಇಂಚಿಂಚನ್ನೂ ಬಿಡದಂತೆ ಹುಡುಕಿದೆ. ಇನ್ನು ಅದು ಇರಬಹುದಾದ ಯಾವ ಜಾಗವೂ ಉಳಿದಿರಲಿಲ್ಲ ಹಾಗೂ ಅದನ್ನು ತೆಗೆದುಕೊಂಡವಳು ನಮ್ಮ ಮನೆಯ ಕೆಲಸದವಳೇ ಎಂಬುದೂ ಖಾತ್ರಿಯಾಯಿತು. ಅವಳನ್ನು ಕೇಳುವುದು ಹೇಗೆ? ಅನೇಕ ವರ್ಷಗಳಿಂದ ನಿಯತ್ತಾಗಿ ಕೆಲಸ ಮಾಡುತ್ತಿರುವ ಅವಳನ್ನು ತಪ್ಪಿತಸ್ಥಳನ್ನಾಗಿ ನೋಡುವುದು ನನ್ನಿಂದ ಆಗಲಿಲ್ಲ. ಈಗ ನಾನು ಸಂದಿಗ್ಧದಲ್ಲಿದ್ದೆ. ಕೇಳದೇ ಇದ್ದರೆ ಬೆಲೆಬಾಳುವ ವಸ್ತುವನ್ನು ಕಳೆದುಕೊಳ್ಳುತ್ತಿದ್ದೆ ಹಾಗೂ ಮುಂದಿನ ಅಪರಾಧಗಳಿಗೆ ಎಡೆಮಾಡಿಕೊಡುತ್ತಿದ್ದೆ. ಕೇಳಿದರೆ ಅವಳು ಕೋಪ ಮಾಡಿಕೊಳ್ಳಬಹುದು, ರಂಪ ಮಾಡಬಹುದು, ಇಬ್ಬರ ನಡುವೆ ಇದ್ದ ಇಷ್ಟು ವರ್ಷಗಳ ವಿಶ್ವಾಸ ಅರೆಕ್ಷಣದಲ್ಲಿ ಇಲ್ಲವಾಗಿಬಿಡಬಹುದು. ನನ್ನೆದುರು ಇದ್ದ ಈ ಎರಡು ಆಯ್ಕೆಗಳು ಸುಲಭದವಾಗಿರಲಿಲ್ಲ. ಆದ್ದರಿಂದ ಗೊಂದಲದಲ್ಲಿ ಒಂದಿಡೀ ಮಧ್ಯಾಹ್ನ ಕಳೆದೆ.

ಸಂಜೆ ಅವಳು ಬರುವ ಮುನ್ನ ಮನೆಯವರೊಂದಿಗೆ ಒಂದು ಸುತ್ತಿನ ರಿಹರ್ಸಲ್ ಕೂಡ ಮಾಡಿಕೊಂಡೆ. ಅವಳು ಎಂದಿನಂತೆ ನಗುತ್ತ ಬಂದಳು. ಎಲ್ಲ ಕೆಲಸಗಳನ್ನೂ ಮಾಡಿ ಹೊರಟು ನಿಂತಾಗ ಅವಳನ್ನು ಮಾತಿಗೆ ಎಳೆದೆ. ಮೊದಲು ಅವಳ ಮೊಮ್ಮಗುವಿಗೆ ನಾನು ತಂದಿದ್ದ ಬೆಳ್ಳಿಯ ಕಾಲ್ಬಳೆಯನ್ನು ತೋರಿಸಿದೆ. ಅವಳು ಬಹಳ ಖುಷಿಪಟ್ಟಳು. ಮಗಳನ್ನು ಮೊಮ್ಮಗುವಿನೊಂದಿಗೆ ಕರೆದುಕೊಂಡು ಬರುತ್ತೇನೆ. ಆಗ ಕೊಡು ಎಂದು ಹೇಳಿ ಸಂಭ್ರಮಿಸಿದಳು.

ಮರುಕ್ಷಣ ನನ್ನ ಕಳೆದ ಬಳೆಯ ವಿಚಾರ ಪ್ರಸ್ತಾಪಿಸಿದೆ. ಮೊದಲು ಅದರ ಬಗ್ಗೆ ತನಗೇನೂ ಗೊತ್ತಿಲ್ಲ; ಎಲ್ಲಿ ಇಟ್ಟಿದ್ದಿ? ಎಂದು ಮುಗ್ಧಳಾಗಿ ಕೇಳಿದಳು. 'ನನ್ನ ಮನೆಯಲ್ಲಿ ಅದು ಇಲ್ಲ ಎಂದರೆ ನಿನ್ನ ಮನೆಯಲ್ಲಿ ಇರಬೇಕು. ಇದರ ಬೆಲೆ ಹೆಚ್ಚಾದ್ದರಿಂದ ನಾನು ಕೇಳುತ್ತಿದ್ದೇನೆ. ನಿನ್ನನ್ನು ಪೊಲೀಸರ ಬಳಿ ಕರೆದುಕೊಂಡು ಹೋಗುವುದು ನನಗೆ ಇಷ್ಟವಿಲ್ಲ. ನಾನೀಗ ನಿನ್ನ ಜೊತೆ ನಿಮ್ಮ ಮನೆಗೆ ಬರುತ್ತೇನೆ. ಅದನ್ನು ಕೊಡು' ಎಂದು ಒಂದೊಂದೇ ಶಬ್ದಗಳನ್ನು ತೂಗಿ ಹೇಳಿ ಮುಗಿಸಿದೆ. ಅವಳು ಮಾತೇ ಇಲ್ಲದವಳಾದಳು. ಮುಂದಿನ ಹತ್ತು ನಿಮಿಷಗಳಲ್ಲಿ ವಾರದ ಹಿಂದೆ ಕಳೆದ ಬಳೆ ನನ್ನ ಕೈಯಲ್ಲಿತ್ತು. ಅವಳಿಂದ ಅದನ್ನು ತೆಗೆದುಕೊಳ್ಳುವಾಗ ನಾಳೆ ಕೆಲಸಕ್ಕೆ ಬಾ ಎಂದು ಮರೆಯದೇ ಹೇಳಿ ಬಂದೆ. ಇದೆಲ್ಲ ನಡೆದು ಈಗ ತಿಂಗಳುಗಳೇ ಕಳೆದಿವೆ. ಆಕೆ ಮೊದಲಿನಂತೆ ಕೆಲಸಕ್ಕೆ ಬರುತ್ತಿದ್ದಾಳೆ.

ಈ ಘಟನೆಯನ್ನು ನನ್ನ ಸ್ನೇಹಿತರ ಬಳಿ ಹಂಚಿಕೊಂಡಾಗ ಕೆಲವರು ಹೆದರಿದರೆ ಕೆಲವರು ಅವಳನ್ನೇ ಮತ್ತೆ ಕೆಲಸಕ್ಕೆ ಇಟ್ಟುಕೊಂಡಿದ್ದೀಯಾ ಹುಷಾರು ಎಂದು ಎಚ್ಚರಿಸಿದರು. ಆದರೆ ಎಲ್ಲರೂ ಆ ಬಳೆ ಮನೆಗೆ ವಾಪಸ್ ಹೇಗೆ ಬಂತು ಎಂದು ಸೋಜಿಗಪಟ್ಟವರೆ. ಈ ಘಟನೆ ನನ್ನನ್ನು ಬಹುವಾಗಿ ಕಾಡಿದೆ ಹಾಗೂ ಸಂದಿಗ್ಧದಲ್ಲಿ ಸಿಲುಕಿಸಿದೆ.

ಬಹುತೇಕವಾಗಿ ಮನೆಯಲ್ಲಿ ಏನೇ ಕಳೆದರೂ ಮೊದಲ ಆರೋಪಿ ಮನೆಯ ಕೆಲಸದವರೇ. ಬಡತನ ಅವರಿಂದ ಕಳ್ಳತನ ಮಾಡಿಸಿಬಿಡುತ್ತದೆ ಎಂಬುದು ಸಹಜವಾದ ಒಂದು ನಂಬಿಕೆ. ಇದು ಕೆಲವರ ಮಟ್ಟಿಗೆ ನಿಜವೂ ಇರಬಹುದು. ಕೆಲಸದ ಮನೆಗಳ ಮೂಲೆಮೂಲೆಯನ್ನು ಹೊಕ್ಕು ಬಲ್ಲ ಅವರು ಅಕಸ್ಮಾತ್ತಾಗಿ ಕಣ್ಣಿಗೆ ಬೀಳುವ ತಮಗೆ ಬೇಕಾದ, ಲಾಭದಾಯಕವಾದ, ತಮ್ಮ ಮಕ್ಕಳಿಗೆ ಬೇಕಾಗುವ ವಸ್ತುಗಳನ್ನೋ, ಚಿಲ್ಲರೆ ಹಣವನ್ನೋ, ಜೇಬಿನಿಂದ ನೋಟನ್ನೋ ತೆಗೆಯುವುದು ತೀರ ಅಪರೂಪವೇನಲ್ಲ. ಸಣ್ಣಪುಟ್ಟ ವಸ್ತುಗಳು, ಚಿಲ್ಲರೆ ಹಣ ಕಳೆದರೆ ಗಮನಕ್ಕೆ ಬರದೆಯೂ ಹೋಗಬಹುದು. ಒಂದೊಮ್ಮೆ ಗಮನಕ್ಕೆ ಬಂದರೂ ಮನೆಕೆಲಸದ ಹೊರೆ ಎಲ್ಲಿ ತಮ್ಮ ಮೈಮೇಲೆ ಬೀಳುತ್ತದೋ; ಹೇಗೋ ಮಾಡಿಕೊಂಡು ಹೋಗಲಿ. ಇನ್ನು ಮೇಲೆ ಹುಷಾರಾಗಿರಬೇಕು ಎಂಬ ವ್ಯಾವಹಾರಿಕತೆ ಅದನ್ನು ಕಡೆಗಣಿಸುವಂತೆ ಮಾಡಬಹುದು. ಆದರೆ ಬೆಲೆಬಾಳುವ ವಸ್ತುಗಳು, ಹಣ ಕಣ್ಮರೆಯಾದರೆ ಮಾತ್ರ ಮನೆಕೆಲಸದವರೇ 'ಟಾರ್ಗೆಟ್'.

ಇತ್ತೀಚೆಗೆ ಅಂಗನವಾಡಿ ನೌಕರರು ಸತ್ಯಾಗ್ರಹ ಮಾಡಿ ಸದ್ಯದ ಯಶಸ್ಸನ್ನು ಕಂಡಿದ್ದಾರೆ. ಇವರಂತೆ ಮನೆಕೆಲಸದವರೂ ಅಸಂಘಟಿತ ಕಾರ್ಮಿಕರೇ. ಬಹುಶಃ ಈ ದೇಶದಲ್ಲಿ ಅತಿ ಹೆಚ್ಚು ಕೆಲಸ ಮಾಡುವ, ತಾವು ಮಾಡುವ ಕೆಲಸಕ್ಕೆ ಸರಿಯಾದ ಸಂಬಳ ಪಡೆಯದ, ಬೇರೆಯವರಿಗೆ ನೆರವಾಗುವ ಕೆಲಸಗಳನ್ನು ಮಾಡಿಯೂ ಕಿಂಚಿತ್ತು ಗೌರವಕ್ಕೂ ಪಾತ್ರರಾಗದ, ಆದರೂ ತಮ್ಮ ತಮ್ಮ ಮನೆಗಳನ್ನು ಪೋಷಿಸುವ, ಮಕ್ಕಳನ್ನು ಪಾಲಿಸುವ ಅತಿದೊಡ್ಡ ಕಾರ್ಮಿಕ ವರ್ಗ ಈ ಮನೆಕೆಲಸದವರು. ಇವರೆಲ್ಲ ಮಹಿಳೆಯರು ಎಂಬುದನ್ನು ವಿಶೇಷವಾಗಿ ಗಮನಿಸಬೇಕು. ಇಂದು ಹಳ್ಳಿ, ಪಟ್ಟಣಗಳೆನ್ನದೇ ಅವರು ವ್ಯಾಪಿಸಿದ್ದಾರೆ. ಶಹರಗಳಲ್ಲಂತೂ ಅವರಿಲ್ಲದ ಜೀವನ ಸ್ತಬ್ಧವಾಗಿ ಬಿಡುತ್ತದೆ. ಹಾಗಿದ್ದೂ ಅವರ ಬಗ್ಗೆ ತಿರಸ್ಕಾರ ಮಾತ್ರ ಎಲ್ಲ ಕಡೆ ಸಾಮಾನ್ಯ.

ಈ ಮನೆಕೆಲಸದವರು ಬೇಕಾಗುವುದೇ ಬಹುತೇಕವಾಗಿ ಶಿಕ್ಷಿತ ಮಧ್ಯಮ ಹಾಗೂ ಮೇಲ್ಮಟ್ಟದ ವರ್ಗಕ್ಕೆ. ಇವರ ಅಗತ್ಯಕ್ಕೆ, ಗೌರವಕ್ಕೆ ಮನೆಕೆಲಸದ ಹೆಂಗಸರು ಬೇಕೇ ಬೇಕು. ತಾವು ಐದಂಕಿಯ ಸಂಬಳವನ್ನು ತೆಗೆದುಕೊಂಡರೂ ಮನೆಕೆಲಸದವರಿಗೆ ಕೊಡುವುದು ಮಾತ್ರ ೫೦೦ ರೂಪಾಯಿ! ಇಂದಿಗೂ ಅನೇಕ ಮಹಿಳೆಯರು ತಿಂಗಳು ಪೂರ್ತಿ ಮಾಡುವ ಕೆಲಸಕ್ಕೆ ಪಡೆಯುವ ಸಂಬಳ ಕೇವಲ ೫೦೦ ಎಂದರೆ ಸಂಕಟವಾಗುತ್ತದೆ. ತಮ್ಮ ಮನೆಯ ಕಸ ಮುಸುರೆಯನ್ನು



ಮಾಡಲು ತಮ್ಮ ಮೈ ಬಗ್ಗದಿದ್ದರೂ ಕೆಲಸದವರೊಂದಿಗೆ ಚೌಕಾಶಿಯನ್ನು ಮಾತ್ರ ಬಿಡುವುದಿಲ್ಲ. ಇದರರ್ಥ ಕೆಲಸದವರು ಕೇಳಿದಷ್ಟನ್ನು ಕೊಡಬೇಕೆಂದಲ್ಲ. ಆದರೆ ಅವರಿಗೆ ಗೌರವಯುತವಾಗಿ ಅವರ ಕೆಲಸಕ್ಕೆ ಸಲ್ಲಬೇಕಾದಷ್ಟಾದರೂ ಕೊಡುವ ಮನಸ್ಸು ಬೇಡವೇ?

ಮನೆಯ ಎಲ್ಲ ಕೆಲಸಗಳನ್ನು ಮಾಡಿಯೂ ಆ ಮನೆಯ ಕೆಲಸದಾಕೆ ಅವರ ಮನೆಯಲ್ಲಿ ತಿಂಡಿಯನ್ನು ನಿಂತೇ ತಿನ್ನಬೇಕು. ಇಲ್ಲವೇ ಮನೆಯ ಗಂಡಸರು ಹೆಚ್ಚು ಓಡಾಡದ ಮೂಲೆಯಲ್ಲಿ ಮುದುಡಿ ಕುಳಿತು ತಿನ್ನಬೇಕು. ಮನೆಯ ಎಲ್ಲ ಪಾತ್ರೆ ಪಗಡಗಳನ್ನು ತೊಳೆದರೂ ಆಕೆಗೆ ಕುಡಿಯಲು ಕೊಡುವ ಲೋಟ, ಆಕೆಯ ತಟ್ಟೆ ಬೇರೆಯೇ ಆಗಿ ಮನೆಯ ಮೂಲೆಯಲ್ಲಿ ಕುಳಿತುಕೊಳ್ಳುತ್ತದೆ. ಇನ್ನು ಆಕೆಗೆ ಕೊಡುವಾಗಲೂ ಕೈ ತುಂಬಿ, ಮನ ತುಂಬಿ ಕೊಡುವವರು ತೀರ ವಿರಳ. ಅವರನ್ನು ಮುಟ್ಟಿಸಿಕೊಂಡರೆ ಮೈಲಿಗೆಯಾಗುತ್ತದೆ ಎಂಬಂಥ ವರ್ತನೆ ಇನ್ನೂ ಅನೇಕ ಮನೆಗಳಲ್ಲಿದೆ. ಮನೆಯ ಎಲ್ಲ ಜಾಗಗಳನ್ನು ಅವರು ಗುಡಿಸಿದರೂ ದೇವರಕೋಣೆಯ ಎದುರು ಅವರು ಹಾಯಬಾರದು ಎಂಬ ಕಟ್ಟಪ್ಪಣೆ ತೀರ ಸಾಮಾನ್ಯ. ತಿಂಗಳ ಮೂರು ದಿನಗಳ ನೋವಿನಲ್ಲೂ ಅವರು ಕೆಲಸ ತಪ್ಪಿಸುವಂತಿಲ್ಲ. ಸ್ವಚ್ಛವಾಗಿಯೇ ಬರಬೇಕು ಎಂಬ ಆಗ್ರಹ. ಆದರೆ ಅವರು ಎಲ್ಲಿ, ಹೇಗೆ ವಾಸಿಸುತ್ತಿದ್ದಾರೆ? ನೀರಿನ ಸೌಕರ್ಯವಿದೆಯೇ ಎಂಬ ಸಾಮಾನ್ಯ ಕಾಳಜಿಯೂ ಮಾಲಿಕರಿಗೆ ಇರುವುದಿಲ್ಲ. ಹಾಗೆಂದು ಅವರು ತಮ್ಮ ಮನೆಯ ಬಾತ್‌ರೂಂ, ಟಾಯ್ಲೆಟ್‌ಗಳನ್ನು ಬಳಸಲು ಅನುಮತಿಯನ್ನು ನೀಡುವುದಿಲ್ಲ. ಅಂತಹ ಸನ್ನಿವೇಶಗಳಲ್ಲಿ ಮನೆಕೆಲಸದ ಈ ಮಹಿಳೆಯರು ತಮ್ಮ ಬಡತನ, ತಮ್ಮ ಜಾತಿ ಇತ್ಯಾದಿಗಳ ಬಗ್ಗೆ ಬಹಳ ನೊಂದುಕೊಳ್ಳುತ್ತಾರೆ. ಆದರೆ ಈ ಸೂಕ್ಷ್ಮ ವಿಷಯಗಳ ಕಡೆ ಮಾಲಿಕ ಹೆಂಗಸರ ದಿವ್ಯ ನಿರ್ಲಕ್ಷ್ಯ.

ಇಂದು ನಾವು ಸಾಂಘಿಕ ಹೋರಾಟಗಳ ಬಗ್ಗೆ ಸಾಕಷ್ಟು ಮಾತಾಡುತ್ತೇವೆ. ಅದರಲ್ಲೂ ಮಹಿಳೆಯರೇ ಕೆಲಸ ಮಾಡುವ ಕಾರ್ಮಿಕ ವಲಯಗಳು ಇಂದು ಸಾಕಷ್ಟಿವೆ. ಅಲ್ಲೆಲ್ಲ ಮಹಿಳೆ ಎದುರಿಸಬೇಕಾದ ಇಂತಹ ಸಂದಿಗ್ಧಗಳು ನೂರಾರು. ಈ ವಲಯಗಳಲ್ಲಿ 'ಮನೆಕೆಲಸ' ಬಹುದೊಡ್ಡ ಪಾಲು ಹೊಂದಿದೆ. ಇಲ್ಲಿನ ಕಾರ್ಮಿಕರಿಗೆ ಕನಿಷ್ಠ ಸಂಬಳ ನಿಗದಿಯಾಗಿದ್ದರೂ ವಾಸ್ತವದಲ್ಲಿ ಅದರ ಲಭ್ಯತೆ ಇಲ್ಲ. ಒಂದೊಮ್ಮೆ ಅವರು ತಮ್ಮ ಹಕ್ಕುಗಳ, ಸೌಲಭ್ಯಗಳ ಬಗ್ಗೆ ಮಾತಾಡಿದರೆ ಅವರ ಕೆಲಸಕ್ಕೆ, ಸಂಬಳಕ್ಕೇ ಸಂಚಕಾರ. ಅದರಿಂದಲೇ ತಮ್ಮ ಮನೆಯ ಎಲ್ಲ ಜವಾಬ್ದಾರಿಯನ್ನು ಹೆಗಲ ಮೇಲೆ ಹೊತ್ತ ಈ ಮನೆಕೆಲಸದ ಮಹಿಳೆಯರು ಮೌನವಾಗಿಯೇ ಎಲ್ಲ ಶೋಷಣೆಯನ್ನು ಸಹಿಸಿಕೊಂಡು ಹೋಗುತ್ತಿದ್ದಾರೆ.

ತನ್ನ ಪುಟ್ಟ ಪುಟ್ಟ ಎರಡು ಮಕ್ಕಳು ನಸುಕಿನಲ್ಲಿ ನಿದ್ದೆಯಿಂದ ಕಣ್ಣು ಬಿಡುವ ಮೊದಲೇ ಒಂದೆರಡು ಮನೆಯ ಕೆಲಸಗಳನ್ನು ಪೂರೈಸಿ ಆ ಮನೆಗಳಲ್ಲಿ ಕೊಡುವ ತಿಂಡಿಯಿಂದಲೇ ತಮ್ಮ ಮಕ್ಕಳ ಹೊಟ್ಟೆ ಹೊರೆದು ತಾನು ಹಸಿವೆಯಿಂದ ಬಳಲುವ ಗಂಗಮ್ಮ, ಕುಡುಕ ಗಂಡನ ಉಪಟಳವನ್ನು ಸಹಿಸಿಕೊಂಡು ತನ್ನ ದುಡಿಮೆಯನ್ನೇ ಆತ ತಿಂದು, ಗಡಂಗಿಗೆ ಹಾಕುತ್ತಿದ್ದರೂ



ತನ್ನ ಗಂಡ ಕೆಲಸಕ್ಕೆ ಹೋಗುತ್ತಾನೆ ಎಂದು ಹೇಳಿ ಕೆಲಸದ ಮನೆಗಳಲ್ಲಿ ತನ್ನ ಮಾನ ಕಾಪಾಡಿಕೊಳ್ಳುವ ಕಾವೇರಮ್ಮ, ಗಂಡ ಇನ್ನೊಬ್ಬಳೊಂದಿಗೆ ಓಡಿಹೋದರೂ ಅವನ ಮಕ್ಕಳನ್ನು, ಅವನ ತಂದೆತಾಯಿಯರನ್ನು ಪೊರೆಯುವ ಕೆಂಚಮ್ಮ.. ಇವರಂತಹ ಸಹಸ್ರಾರು ಮನೆಕೆಲಸದ ಹೆಂಗಳೆಯರ ಬದುಕ ಬವಣೆ ಯಾವ ತರ್ಕಕ್ಕೂ ನಿಲುಕದ್ದು. ಎಲ್ಲ ಸಾಂತ್ವನಕ್ಕೂ ಮೀರಿದ್ದು.

ಈ ಹಿನ್ನೆಲೆಯಲ್ಲಿ ಕಳೆದುಹೋಗಿದ್ದ ನನ್ನ ಬಂಗಾರದ ಬಳೆ ಮತ್ತೆ ಮಹತ್ವವನ್ನು ಪಡೆಯುತ್ತದೆ. ಮನೆ ಕೆಲಸದ ಲಕ್ಷ್ಮಿ ಅದನ್ನು ಕದ್ದಿರಲಿಲ್ಲ. ಅದನ್ನು ಮಾರಿ ತನ್ನ ಮುದ್ದಿನ ಮಗಳಿಗೆ, ಮೊಮ್ಮಗುವಿಗೆ ಏನನ್ನಾದರೂ ತೆಗೆದು ಕೊಡುವ ಹಂಬಲವೂ ಇದ್ದಿರಲಾರದು. ಆಕೆಯ ಮೊಮ್ಮಗ ಸೀಳುತುಟಿಯವನಾಗಿ ಹುಟ್ಟಿದ್ದು ಅವನಿಗೆ ತುರ್ತು ಶಸ್ತ್ರಚಿಕಿತ್ಸೆಯ ಅಗತ್ಯವಿತ್ತು. ಬಹುಶಃ ಅದಕ್ಕಾಗಿಯೇ ಅವಳು ಇಂತಹ ಅನರ್ಥಕ್ಕೆ ಮುಂದಾಗಿದ್ದಳು ಎಂದೇ ನನಗೆ ಅನ್ನಿಸಿತು. ಅವಳಿಗೊಂದು ಅವಕಾಶವನ್ನು ಅದಕ್ಕಾಗಿಯಾದರೂ ನೀಡಬೇಕು ಎಂಬ ನನ್ನ ನಿರ್ಧಾರ ಅದನ್ನು ನಾನು ಕಾರ್ಯಗತಗೊಳಿಸಿದ ರೀತಿ ನನ್ನನ್ನು ಹಗುರಾಗಿಸಿದ್ದಷ್ಟೇ ಅಲ್ಲ, ವ್ಯಕ್ತಿ ಗೌರವದ ಬಗೆಗೆ ನನ್ನ ನಿಲುವನ್ನು ನನಗೆ ಸ್ಪಷ್ಟಪಡಿಸಿತು. ನನ್ನ ಮನೆಯ, ಸ್ನೇಹಿತರ ಕಣ್ಣಲ್ಲಿ ನನ್ನ ಗೌರವ ಹೆಚ್ಚಿತು. ಅದು ನನಗೆ ಸಾಂಘಿಕ ಹೋರಾಟದ ಮೂಲ ಇರುವುದು ಹಾಗೂ ಫಲ ಕಾಣುವುದು ವೈಯಕ್ತಿಕ ನೆಲೆಯಲ್ಲಿ ಎಂಬುದನ್ನು ಮತ್ತೊಮ್ಮೆ ಸಾರಿ ಹೇಳಿತು.

ಮನೆಕೆಲಸದವರ ಗೌರವದ ಮಾತನ್ನು ಒಮ್ಮೆ ಪರಿಶೀಲಿಸೋಣ. ಒಂದು ಮನೆಯ ೩–೪ ಮಹಿಳೆಯರು ಅಂದರೆ ತಾಯಿ, ಆಕೆಯ ಹೆಣ್ಣು ಮಕ್ಕಳು ಸೇರಿ ಶಹರಗಳಲ್ಲಿ ಒಂದು ತಿಂಗಳಿಗೆ ಕನಿಷ್ಠ ೨೦ರಿಂದ ೨೫ ಸಾವಿರದಷ್ಟು , ಕೆಲವೊಮ್ಮೆ ಇನ್ನೂ ಹೆಚ್ಚು ಗಳಿಸುತ್ತಾರೆ. ಈ ಮೊತ್ತ ಯಾವುದೇ ಸಣ್ಣ ಅಥವಾ ಮಧ್ಯಮ ಗಾತ್ರದ ಕಂಪನಿಯ ನೌಕರಳಿಗೆ ಸಿಗಬಹುದಾದ ತಿಂಗಳ ಸಂಬಳದಷ್ಟೇ ಆಗಿರುತ್ತದೆ. ಇಷ್ಟು ಸಂಬಳ ಪಡೆಯುವ ಮನೆಗೆಲಸದ ಒಂದು ಕುಟುಂಬ ಬೆಂಗಳೂರು ಶಹರದಲ್ಲಿ ಸಿಂಗಲ್ ಬೆಡ್‌ರೂಂ ಮನೆಯಲ್ಲಿ ೪–೫ ಸಾವಿರ ಬಾಡಿಗೆ ಕೊಟ್ಟು, ನೀರು, ಕರೆಂಟ್ ಬಿಲ್ಲುಗಳನ್ನು ಹೆಚ್ಚುವರಿಯಾಗಿ ನೀಡಿ ಚೆನ್ನಾಗಿ ಸಂಸಾರ ನಡೆಸುತ್ತದೆ. ಮಾತ್ರವಲ್ಲದೆ, ಆ ಕುಟುಂಬದ ಹಿರಿಯ ಹೆಂಗಸು ತನ್ನ ಹೆಣ್ಣುಮಕ್ಕಳಿಗೆ ಒಡವೆ, ವಸ್ತು ನೀಡಿ ತಕ್ಕ ಮಟ್ಟಿಗೆ ಚೆನ್ನಾಗಿಯೇ ಮದುವೆ ಮಾಡಿಕೊಡುತ್ತಾಳೆ. ಅವಳ ಖರ್ಚು ವೆಚ್ಚಗಳು, ಆದಾಯ, ಊಟ, ಆಹಾರಗಳೆಲ್ಲ ಅವಳಷ್ಟೇ ಗಳಿಸುವ ಇತರ ನೌಕರಸ್ಥರಂತೇ ಇದ್ದರೂ ಅವಳಿಗಾಗಲೀ, ಅವಳ ಕುಟುಂಬಕ್ಕಾಗಲೀ ಅವಳ ಸುತ್ತಮುತ್ತಲ ಜನರಿಂದ ಸಿಗುವ ಗೌರವ ಮಾತ್ರ ಶೂನ್ಯ. ಕಛೇರಿಗಳಲ್ಲಿ ಮಾಡುವ ಕೆಲಸ ಮಾತ್ರ 'ದುಡಿಮೆ' ಎಂದು ಕರೆಸಿಕೊಳ್ಳುತ್ತದೆ. ಈ ವರ್ಗಕ್ಕೆ 'ಮನೆಕೆಲಸ' ಬಹುಶಃ ಎಂದೂ ಸೇರಲಾರದು.

ಈ ಬವಣೆ ಇಲ್ಲಿಗೇ ನಿಲ್ಲುವುದಿಲ್ಲ. ಕೆಲ ಮನೆಕೆಲಸದ ಹೆಂಗಸರು ಚೆನ್ನಾಗಿ ಡ್ರೆಸ್ ಮಾಡಿಕೊಂಡು, ಕೈಯಲ್ಲಿ ಒಂದು ವ್ಯಾನಿಟಿ ಪರ್ಸ್ ಹಿಡಿದು ಬರುತ್ತಾರೆ. ಅವರು ಹಾಗೆ ಬಂದರೆ ಮನೆಯೊಡತಿಗೇ ಇರುಸು ಮುರುಸಾಗುತ್ತದೆ. ಆ ಮನೆಕೆಲಸದವಳು 'ಧಿಮಾಕಿನವಳಾಗಿ' ಅವಳಿಗೆ ಕಾಣುತ್ತಾಳೆ. ಅವಳಿಗೆ 'ನೀನು ಕೆಲಸದವಳು' ಎಂಬುದನ್ನು ಬಾರಿಬಾರಿಯಾಗಿ ಸಾಬೀತುಪಡಿಸಲು ಅವಳು ಹರಸಾಹಸ ಪಡುತ್ತಾಳೆ. ಮನೆಯೊಡತಿಯನ್ನು ಅಪ್ಪಿತಪ್ಪಿಯೂ ಆಂಟಿ ಎಂದು ಕರೆಯುವಂತಿಲ್ಲ. ಇಂತಹ ನೂರಾರು ಕಿರಿಕಿರಿಗಳ ನಡುವೆಯೂ ಆಕೆ ಆ ಮನೆಯ ಮುಸುರೆ ತೊಳೆಯುತ್ತಾಳೆ. ಎಂಜಲು ಎತ್ತುತ್ತಾಳೆ. ದಿನನಿತ್ಯದ ಅಗತ್ಯಗಳಿಗೆ ತನ್ನ ಆತ್ಮಗೌರವವನ್ನು ಪಣಕ್ಕಿಡುತ್ತಾಳೆ.

ನಾವೀಗ ಡಿಜಿಟಲ್ ಯುಗದಲ್ಲಿದ್ದೇವೆ. ಕ್ಯಾಶ್‌ಲೆಸ್ ವ್ಯವಸ್ಥೆಯ ಭಾಗವಾಗಿದ್ದೇವೆ. ನಾಗರಿಕತೆಯ ಎಲ್ಲ ಔನ್ನತ್ಯಗಳನ್ನೂ ಮೈಗೂಡಿಸಿಕೊಂಡು ಅನಾಗರಿಕರಂತೆ ವರ್ತಿಸುತ್ತಿದ್ದೇವೆ. ಸಮಾಜದ ಅತ್ಯಂತ ಚಿಕ್ಕ ಘಟಕ ಒಂದು ಮನೆ. ಈ ಚಿಕ್ಕ ಘಟಕದ ಕೊಟ್ಟಕೊನೆಯ ಭಾಗವಾಗಿರುವಳು ಮನೆಕೆಲಸದವಳು. ಅವಳನ್ನು ಹೀನಾಯವಾಗಿ ನಡೆಸಿಕೊಳ್ಳುವುದೆಂದರೆ ಸಮಾನತೆಯ ತಳಹದಿಯ ಮೇಲೆ ನಿಂತಿರುವ ಈ ನಮ್ಮ ಸಾಮಾಜಿಕ ವ್ಯವಸ್ಥೆಯನ್ನೇ ಅಲ್ಲಗಳೆದಂತೆ. ಈ ವ್ಯವಸ್ಥೆಯ ಬಹುದೊಡ್ಡ ಭಾಗವಾಗಿರುವ 'ಮನೆಕೆಲಸದ' ಮಹಿಳೆಯರು ಕಿಂಚಿತ್ತು ಗೌರವವನ್ನು ಕಾಣುವಂತಾದರೆ, ಆತ್ಮಗೌರವದಿಂದ ಬದುಕಲು ಸಾಧ್ಯವಾದರೆ ಮಹಿಳಾ ಸಬಲೀಕರಣ, ಮಹಿಳಾ ಸಮಾನತೆ, ಆಧುನಿಕ ಮಹಿಳೆ ಮೊದಲಾದ ಪದಗಳಿಗೂ ಅರ್ಥ ಬಂದೀತು.

**ನೂತನ ಎಂ. ದೋಶೆಟ್ಟಿ**
ನಂ. ೮೦, ಸರ್ವಮಂಗಳ
೧೦ನೇ ಅಡ್ಡರಸ್ತೆ, ಭುವನೇಶ್ವರಿ ನಗರ, ಹೆಬ್ಬಾಳ
ಕೆಂಪಾಪುರ, ಬೆಂಗಳೂರು – ೨೪

# ಮಾನವ ಸಮಾಜದ ಪರಿಣಾಮ



## – ಕೊಡವಟಿಗಂಟಿ ಕುಟುಂಬಾರಾವ್

**ಮಾ**ನವ ಜೀವಿಗಳು ಕನಿಷ್ಠ ಐದು ಲಕ್ಷ ವರ್ಷಗಳಿಂದಲೂ ಭೂಮಿಯ ಮೇಲೆ ಬದುಕುತ್ತಾ ಬಂದಿದ್ದಾರೆ. ಈ ಐದು ಲಕ್ಷ ವರ್ಷಗಳ ಅವಧಿಯಲ್ಲಿ ಅವರು ಬೆಂಕಿಯನ್ನು ಕಂಡುಕೊಂಡು ಸ್ವಾಧೀನ ಮಾಡಿಕೊಂಡಂದಿನಿಂದ ಚಂದ್ರನ ಮೇಲೆ ನಡೆದಾಡುವವರೆಗೆ ಅಭಿವೃದ್ಧಿ ಹೊಂದಿದ್ದಾರೆ. ಈ ಮಧ್ಯಕಾಲದಲ್ಲಿ ತಮ್ಮ ಬದುಕಿಗೆ ಆಧಾರವಾದ ಪರಿಕರಗಳನ್ನು – ಕಲ್ಲಿನವು, ಎಲುಬಿನವು ಮತ್ತು ಬರು ಬರುತ್ತಾ ಲೋಹದವುಗಳನ್ನು – ಉಪಯೋಗಿಸುವುದನ್ನು ಕಲಿತುಕೊಂಡರು. ಭಾಷೆಯನ್ನು ಸೃಷ್ಟಿಸಿಕೊಂಡರು. ಆಹಾರವನ್ನು ಹುಡುಕಿಕೊಂಡು ತಿಂದರು. ಬಿಲ್ಲು – ಬಾಣಗಳಿಂದ ಬೇಟೆಯಾಡುವುದನ್ನು ಕಲಿತುಕೊಂಡರು. ಪಶುಪೋಷಣೆಯಿಂದಲೂ, ವ್ಯವಸಾಯದಿಂದಲೂ ಸ್ಥಿರವಾದ ವಾಸಸ್ಥಾನಗಳನ್ನು ಏರ್ಪಾಟು ಮಾಡಿಕೊಳ್ಳ ಬಲ್ಲವರಾದರು. ಜ್ಞಾನವನ್ನು ಬೆಳೆಸಿಕೊಂಡರು. ಸಾಹಿತ್ಯವನ್ನು ಸೃಷ್ಟಿಸಿದರು, ಧನವನ್ನು, ಆಸ್ತಿಗಳನ್ನು ಸೃಷ್ಟಿಸಿಕೊಂಡರು, ರಾಜ್ಯಪಾಲನೆಯ ವ್ಯವಸ್ಥೆ ಮಾಡಿಕೊಂಡರು. ಶಾಸ್ತ್ರಜ್ಞಾನವನ್ನು ಬೆಳೆಸಿಕೊಂಡರು. ವಿದ್ಯುಚ್ಛಕ್ತಿ, ಪ್ರಯಾಣ ಸಾಧನಗಳನ್ನು, ಯಂತ್ರಗಳನ್ನು, ನಾಗರಿಕತೆಯನ್ನು ಸೃಷ್ಟಿಸಿದರು. ಈ ಎಲ್ಲ ಪರಿಣಾಮಗಳು ಒಂದೇ ಸಾರಿ ಸಾಧ್ಯವಾದಂಥವಲ್ಲ. ಕಲ್ಲಿನ ಆಯುಧಗಳಿಂದ ಪ್ರಾರಂಭವಾದ ಮಾನವ ಸಂಸ್ಕೃತಿ ಅಣುಶಕ್ತಿಯನ್ನು ಸ್ವಾಧೀನಪಡಿಸಿಕೊಳ್ಳುವವರೆಗೆ ಮಾನವ ಸಮಾಜ ಅನೇಕ ಪರಿಣಾಮಗಳಿಗೆ ಒಳಗಾಗಿದೆ.

**ಪುರಾತತ್ವದ ಆಧಾರ**

ನಮ್ಮ ದೇಶದಲ್ಲಿ ಪ್ರಾಚೀನ ಕಾಲದ ಜನಜೀವನಕ್ಕೆ ಸಂಬಂಧಪಟ್ಟಂತೆ ನಮಗೆ ದೊರಕುವ ದಾಖಲೆಗಳೆಂದರೆ ವೇದಗಳು, ಉಪನಿಷತ್ತುಗಳು, ಇತಿಹಾಸಗಳು, ಪುರಾಣಗಳು. ಪುರಾತತ್ವ ಶೋಧನೆ ಬಹಳಷ್ಟು ಬೆಳೆದಿದೆ. ಚರಿತ್ರ ಪೂರ್ವದ ಅತ್ಯಂತ ಪ್ರಾಚೀನವಾದ ವಿಷಯಗಳು ಭೂಗರ್ಭದಲ್ಲಿ ದೊರಕಿವೆ. ಭೂಮಿಯನ್ನು ತೋಡುವುದರ ಮೂಲಕ ಅನೇಕ ರಹಸ್ಯಗಳು ಬಯಲಿಗೆ ಬಂದಿವೆ. ಹೀಗೆ ನೆಲವನ್ನು ಅಗೆಯುವುದರಿಂದ ಪ್ರಾಚೀನ ಮಾನವರ ನಿವಾಸಗಳ ಕುರುಹು ಅವರ ಅಸ್ಥಿಪಂಜರಗಳು, ಅವರು ಬಳಸುತ್ತಿದ್ದ ಪರಿಕರಗಳು ಹೊರಗೆ ಬಂದಿವೆ.

### ಡಾ॥ ವೃಷಭೇಂದ್ರಾಚಾರ್ ಅರ್ಕಸಾಲಿ

ಮಾನವರು ಎನ್ನಲಾಗದ ನರವಾನರರ ಅಸ್ಥಿಗಳು ದೊರಕಿವೆ. ಅತಿ ಪ್ರಾಚೀನ ಮಾನವರು ಕಲ್ಲುಗಳಿಂದ ತಮ್ಮ ಆಯುಧಗಳನ್ನು ಮಾಡಿಕೊಂಡಿದ್ದರೆ ಅವರ ಜ್ಞಾನ ಬೆಳೆದಂತೆಲ್ಲ ಕಂಚು, ಕಬ್ಬಿಣ ಅವರ ಸ್ವಾಧೀನವಾದವು. ಆದರೆ ಪ್ರಪಂಚದ ಮಾನವರೆಲ್ಲ ಒಂದೇ ರೀತಿಯ ಹಂತಗಳನ್ನು ಸಮಾನವಾಗಿ ಹೊಂದಿದ್ದರು ಎನ್ನಲಾಗದು.

**ಎತ್ನಾಲಜಿ**

ಮಾನವ ಚರಿತ್ರೆಯ ಅಧ್ಯಯನದ ಇನ್ನೊಂದು ಮುಖ್ಯವಾದ ಆಧಾರ ಎತ್ನಾಲಜಿ. ಮಾನವ ಜನಾಂಗದ ಸಂಶೋಧನೆಯ ಶಾಸ್ತ್ರವನ್ನು 'ಎತ್ನಾಲಜಿ' ಎಂದು ಕರೆಯುತ್ತಾರೆ. ಎತ್ನಾಲಜಿಸ್ಟರು ಮಾನವ ಜನಾಂಗದ ಪರಿಣಾಮ ದಶೆಗಳನ್ನು ೧. ಆಟವಿಕ ದಶೆ, ೨. ಬರ್ಬರ ದಶೆ ಮತ್ತು ೩. ನಾಗರಿಕ ದಶೆ ಎಂದು ಮೂರು ಹಂತಗಳಲ್ಲಿ ವಿಂಗಡಿಸುತ್ತಾರೆ.

೧) ಆಟವಿಕ ದಶೆಯ ಮೊದಲ ಹಂತದಲ್ಲಿ ಮಾನವರು ತಾವಿರುವ ತಾಣಗಳಿಗೆ ಸೀಮಿತರಾಗಿ ಹಣ್ಣುಕಾಯಿಗಳನ್ನು ಆರಿಸಿಕೊಂಡು ತಿನ್ನುತ್ತ ಭಾಷೆಯನ್ನು ರೂಪಿಸಿಕೊಂಡರು.

೨) ಮೀನು ಹಿಡಿದು ತಿನ್ನುವ ಮತ್ತು ಬೆಂಕಿಯನ್ನು ಕಂಡುಕೊಂಡ ಹಂತಕ್ಕೆ ಮೊದಲ ಅವಧಿ ಮುಗಿದರೆ, ಎರಡನೇ ಹಂತದಲ್ಲಿ ಆಟವಿಕ ಜನರಲ್ಲಿ ಸಂಚಾರಗಳು ಪ್ರಾರಂಭವಾದವು.

೩) ಮೂರನೇ ಹಂತದಲ್ಲಿ ಬಿಲ್ಲು – ಬಾಣಗಳನ್ನು ಉಪಯೋಗಿಸಲು ಕಲಿತದ್ದು, ಮಣ್ಣಿನ ಪಾತ್ರೆಗಳನ್ನು ಮಾಡಿ ಬಳಸುವುದನ್ನು ಕಲಿತದ್ದು ಮಾನವನ ಸಾಧನೆ.

೪) ಅನಾಗರಿಕ ಬರ್ಬರ ದಶೆಯಲ್ಲಿ ಗಡಿಗೆಗಳನ್ನು ಮಾಡುವುದರ ಜೊತೆಗೆ ಹಳ್ಳಿಗಳನ್ನು ಕಟ್ಟಿಕೊಂಡು ಜೀವಿಸುವುದು ಪ್ರಾರಂಭವಾಯಿತು.

೫) ಅನಾಗರಿಕ ದಶೆಯ ಎರಡನೇ ಹಂತದಲ್ಲಿ ಮೊದಲನೆಯದು ಪಶುಪಾಲನೆ. ಪಾತ್ರೆಗಳ ತಯಾರಿಕೆಯಲ್ಲಿ ಬಹಳ ಪರಿಣತಿ ಕಂಡುಬರುತ್ತದೆ.

೬) ಕಬ್ಬಿಣದ ಬಳಕೆಯನ್ನು ಕಂಡುಹಿಡಿದದ್ದು ಅನಾಗರಿಕ ದಶೆಯ ಕೊನೆಯ ಹಂತದ ಮಹತ್‌ಸಾಧನೆ. ಅಕ್ಷರ ಲಿಪಿ, ಸಾಹಿತ್ಯ ರಚನೆಗಳ ಪ್ರಾರಂಭವಾದದ್ದೂ ಈ ಹಂತದಲ್ಲೇ.

ಈ ಲೆಕ್ಕಾಚಾರದಂತೆ ಭಾರತದ ವೇದಯುಗವು ಅನಾಗರಿಕ ದಶೆಯ ಅಂತಿಮ ಹಂತದಲ್ಲೇ ಸೇರುತ್ತದೆ. ವೇದಗಳು ಕೇವಲ ಮೌಖಿಕವಾಗಿಯೇ ಹುಟ್ಟಿಬೆಳೆದವು. ಮಣ್ಣಿನ ಗಡಿಗೆ – ಮಡಿಕೆಗಳು ಆಟವಿಕ ದಶೆಯ ಮೈಲಿಗಲ್ಲಾಗಿರುವಂತೆ, ಲಿಪಿ – ಲೇಖನಗಳು ಅನಾಗರಿಕ ದಶೆಯ ಮುಕ್ತಾಯ ಹಂತವನ್ನು ಸೂಚಿಸುತ್ತವೆ.

ಮಾನವ ಸಮಾಜದ ವಿಕಾಸ ಯಾತ್ರೆಯಲ್ಲಿ ಆಹಾರ ಪದ್ಧತಿ ಬಹಳ ಮುಖ್ಯವಾದ ಪಾತ್ರ ವಹಿಸಿದೆ.







ಆದಿಮ ಮಾನವ ಉಳಿದ ಪ್ರಾಣಿಗಳಂತೆ ದೊರೆಯುವ ಪದಾರ್ಥಗಳನ್ನು ಹುಡುಕಾಡಿ ತಿನ್ನುತ್ತಿದ್ದ. ನಂತರ ಆಹಾರೋತ್ಪತ್ತಿ ಸಾಧನಗಳು ಕೈವಶವಾದಂತೆಲ್ಲ ಮಾನವ ಜಾತಿ ಅಪಾರ ಸಂಖ್ಯೆಯಲ್ಲಿ ಬೆಳೆಯುವಂತಾಯಿತು. ಮೀನು ತಿನ್ನಲು ಕಲಿತು, ಬೆಂಕಿಯಿಂದ ಬೇಯಿಸಿಕೊಂಡು ತಿನ್ನುವ ಪದ್ಧತಿಯನ್ನು ಕಲಿತು ಮಾನವರು ನದೀ ತೀರ, ಸಮುದ್ರ ತೀರಗಳಲ್ಲಿ ಹೆಚ್ಚು ವಾಸ ಮಾಡಿದ್ದಾರೆ. ಈ ಆಟವಿಕ, ಅನಾಗರಿಕ ದಶೆಯು ಬಹಳ ದೀರ್ಘವಾಗಿದ್ದಂತೆ ಕಂಡುಬರುತ್ತದೆ.

ಮಾನವನು ವ್ಯವಸಾಯ ಪದ್ಧತಿಯನ್ನು ಕಲಿತುಕೊಂಡ ಮೇಲೆ ನರಮಾಂಸ ಭಕ್ಷಣ, ಅಷ್ಟೇ ಏಕೆ ಮಾಂಸ ಭಕ್ಷಣವೂ ಅನಾಗರಿಕ ಎಂಬ ರೀತಿಯ ಬೆಳವಣಿಗೆಗಳಾದವು. ವ್ಯವಸಾಯದ ಸಂಶೋಧನೆಯಿಂದ ಮಾನವನ ಅನಾಗರಿಕ ದಶೆ ಕೊನೆಗೊಂಡಿತೆನ್ನಬಹುದು.

ಭಾರತದಲ್ಲಿ ಆರ್ಯರು ಮೊದಲು ಪಶುಪಾಲನೆಯನ್ನು ಅಳವಡಿಸಿಕೊಂಡು ಆನಂತರ ವ್ಯವಸಾಯ ಕ್ರಮವನ್ನು ಕಲಿತುಕೊಂಡಂತೆ ತಿಳಿದುಬರುತ್ತದೆ. ವೇದಗಳಲ್ಲಿ ಪಶುಗಳಿಗಿರುವ ಪ್ರಾಮುಖ್ಯತೆ ಧಾನ್ಯಗಳಿಗಿಲ್ಲ. ಗೋಧನ ಎಂಬುದು ಆ ಕಾಲದ ಮುಖ್ಯ ಸಂಪತ್ತು. ಗೋವುಗಳಿಗಾಗಿ ಯುದ್ಧಗಳೂ ನಡೆಯುತ್ತಿದ್ದವು.

**ಪ್ರಾಚೀನ ಭಾರತದ ನಮ್ಮ ಪೂರ್ವಜರು**

ನಮ್ಮ ಪೂರ್ವಜರು ಆಟವಿಕ ದಶೆಯಲ್ಲಿದ್ದಾಗ ಈಗಿನ ಅಡವಿ ಜನರಂತೆಯೇ ಬದುಕುತ್ತಿದ್ದರು. ನಮ್ಮ ದೇಶದ ಅತ್ಯಂತ ಪ್ರಾಚೀನ ದೇವರೆನ್ನಬಹುದಾದ ಶಿವನು ಚರ್ಮವನ್ನು ಧರಿಸಿದ್ದಾನೆ, ರುಂಡಮಾಲೆಯನ್ನು ಧರಿಸಿದ್ದಾನೆ. ನಮ್ಮ ಪುರಾಣಗಳಲ್ಲೂ ಚರ್ಮಗಳನ್ನು ಧರಿಸಿದ್ದ ಅನೇಕ ಋಷಿಗಳು ಕಂಡುಬರುತ್ತಾರೆ. ಇಂದಿನ ಬದುಕಿನಲ್ಲೂ ಅಂಥ ಅನಾಗರಿಕ ಲಕ್ಷಣಗಳಿವೆ. ನಮ್ಮ ಬದುಕಿನಲ್ಲಿ ಎಲ್ಲಿಯವರೆಗೆ ಭೌತಿಕ ದೃಷ್ಟಿ ಪ್ರವೇಶಿಸಿಲ್ಲವೋ ಅಲ್ಲಿಯವರೆಗೂ ನಾವು ಅನಾಗರಿಕರೇ. ನಿತ್ಯಜೀವನದಲ್ಲಿ ಎದುರಾಗುವ ಸಮಸ್ಯೆಗಳ ಪರಿಹಾರಕ್ಕೆ ಮಾನವನನ್ನು ಬಿಟ್ಟು ದೇವರ ಮೇಲೆ ಆಧಾರ ಪಡುವ ಯಾವ ಜನಾಂಗವಾದರೂ ಅದು ಅನಾಗರಿಕವೇ.

ಹಿಂದಿನ ಕಾಲದವರು ಅನಾಗರಿಕರಾಗಿದ್ದುದಕ್ಕೆ ಆಗಿನ ಪರಿಸರ ಪರಿಸ್ಥಿತಿಗಳು ಕಾರಣವಾಗಿದ್ದರೆ, ಇಂದಿನ ಮಾನವರೂ ಅನಾಗರಿಕರಾಗಿದ್ದಾರೆಂದರೆ ಅವರಿಗೆ ಸರಿಯಾದ ಜ್ಞಾನವಿಲ್ಲದಿರುವುದು, ವಿಶ್ವಾಸವಿಲ್ಲದಿರುವುದೇ ಆಗಿದೆ.

ಶಿಲಾಯುಗದ ಮನುಷ್ಯರು ಬಹಳ ಸಮರ್ಥರು. ೩, ೪ ಲಕ್ಷ ವರ್ಷಗಳ ಹಿಂದೆ ಬದುಕಿದ್ದ ಮಾನವರು ಎಂಟು ಅಡಿಗಳ ಎತ್ತರದ ಪ್ರಾಣಿಗಳನ್ನು ಬೇಟೆಯಾಡಿ



ಕೊಲ್ಲುತ್ತಿದ್ದರು. ಅದೂ ಕೂಡ ಕಲ್ಲಿನ ಆಯುಧಗಳಿಂದಲೇ. ಬೇಟೆಯಾಡಿ ಜೀವನ ಮಾಡುತ್ತಿದ್ದರು. ಜನರು ಸಣ್ಣ ಸಣ್ಣ ಸಮೂಹಗಳಲ್ಲಿ ಬದುಕುತ್ತಿದ್ದರು.

ಹತ್ತಿಪ್ಪತ್ತು ಮಂದಿಯ ತಂಡಗಳು ಸಂಚಾರ ಜೀವನವನ್ನು ನಡೆಸುವ ದಿನಗಳು ಹೋಗಿ ಅನೇಕ ಲಕ್ಷಗಳ ಮಂದಿ ಅನೇಕ ತಲೆಮಾರುಗಳವರೆಗೆ ಒಂದು ಕಡೆ ಜೀವಿಸುವ ನಾಗರಿಕತೆ ಬಂದಿತು. ಪ್ರಾಚೀನ ಮಾನವರು ಗಣಗಳ ಜೀವನದಲ್ಲಿ ಒಂದು ಧರ್ಮಕ್ಕೆ ಕಟ್ಟುಬಿದ್ದು, ವ್ಯಷ್ಟಿ ಸಮಷ್ಟಿ ಬದುಕುಗಳಲ್ಲಿ ವ್ಯತ್ಯಾಸವಿಲ್ಲದಂತೆ ಬದುಕುತ್ತಿದ್ದರು. ಮನುಧರ್ಮಶಾಸ್ತ್ರ ಹುಟ್ಟುವ ಹೊತ್ತಿಗೆ ಅಂಥ ಜೀವನ ಕ್ರಮ ನಶಿಸಿಹೋಗಿತ್ತು.

ಪ್ರೊ॥ ಕುಲ್ಡೇನ್ ಹೇಳುವಂತೆ ಹತ್ತು ಸಾವಿರ ವರ್ಷಗಳ ಹಿಂದೆ ಮಾನವರಿಗೆ ಆಸ್ತಿ ಹಕ್ಕು ಎಂಬುದು ಗೊತ್ತಿರಲಿಲ್ಲ. ಧರ್ಮದ ಪಾದಗಳನ್ನು ಮುರಿದುಹಾಕಿದ್ದು ಆಸ್ತಿ ಹಕ್ಕುಗಳೇ ಎಂದರೆ ಸಂಶಯಿಸುವ ಅವಶ್ಯಕತೆ ಇಲ್ಲ. ಕುಲವ್ಯವಸ್ಥೆಯನ್ನು ಅವಲಂಬಿಸಿದ ಧರ್ಮಗಳು ಆಸ್ತಿ ಆ ಕುಲದಲ್ಲೇ ಇರುವಂತೆ ಏರ್ಪಾಟು ಮಾಡಿದ್ದವು. ಆಸ್ತಿಯ ವಾರಸತ್ವವು ಸ್ತ್ರೀಪ್ರಧಾನ ವ್ಯವಸ್ಥೆಯಾಗಲಿ ಪುರುಷ ಪ್ರಧಾನ ವ್ಯವಸ್ಥೆಯಾಗಲಿ. ಆಸ್ತಿ ಆಯಾ ಕುಲಕ್ಕೇ ಸೇರಿರುತ್ತಿತ್ತು.

ಆಸ್ತಿಯು ವ್ಯಕ್ತಿಪರವಾಗಿ ಬದಲಾದಾಗ ಕುಲ ವ್ಯವಸ್ಥೆಯ ಸ್ವರೂಪವೇ ಬದಲಾಗಿ ಹೋಯಿತು. ಇದಕ್ಕೂ ಸಮಾಜದ ಪರಿಣಾಮಗಳೇ ಕಾರಣ. ಸಮಾಜವೆಂದರೆ ಅನೇಕ ಕುಟುಂಬಗಳ ಸಮೂಹ. ಕುಟುಂಬವು ಸಮಾಜದ ಮುಖ್ಯ ಘಟಕ. ಗಣಗಳ ಸಮಾಜದಲ್ಲಿ ಒಂದು ಗಣದಲ್ಲಿ ಅನೇಕ ಕುಲಗಳಿರುತ್ತಿದ್ದವು. ಕುಲವೆಲ್ಲ ಒಂದು ಕುಟುಂಬವಾಗಿತ್ತು. ಒಂದು ಕುಲದಲ್ಲಿ ಅನೇಕ ತಲೆಮಾರುಗಳ ಜನ ವಾಸಿಸುತ್ತಿದ್ದರು.

ಗಂಡ, ಹೆಂಡತಿ, ಮಕ್ಕಳು ಒಂದು ಕುಟುಂಬ. ಒಬ್ಬ ಗಂಡನಿಗೆ ಒಬ್ಬ ಹೆಂಡತಿ ಎಂಬ ಪದ್ಧತಿ ಈಗ ಸಾಮಾನ್ಯವಾಗಿದೆ. ಬಹುಭರ್ತರ ಅಥವಾ ಬಹುಭಾರ್ಯೆಯರ ಪದ್ಧತಿ ಆಧುನಿಕ ಸಂಸ್ಕೃತಿಗೆ ವಿರುದ್ಧ. ಆದರೆ ಹಿಂದಿನ ಕಾಲದಲ್ಲಿ ದ್ರೌಪದಿ ಐದು ಮಂದಿ ಭರ್ತರನ್ನು ಹೊಂದಿದ್ದಳು. ಆ ಕಾಲಕ್ಕೇ ಆ ಪದ್ಧತಿ ರೂಢಿ ತಪ್ಪಿತ್ತು. ಅದಕ್ಕೂ ಹಿಂದೆ ಜಟಿಲ ಎಂಬ ಋಷಿಯ ಮಗಳು ಏಳು ಮಂದಿ ಋಷಿಗಳನ್ನು ಮದುವೆ ಮಾಡಿಕೊಂಡಿದ್ದಳಂತೆ. ದಾಕ್ಷಾಯಣಿ ಎಂಬ ಮುನಿಕನ್ಯೆ ಪ್ರಚೇತಸರು ಎಂಬ ಹತ್ತು ಮಂದಿಗೆ ಹೆಂಡತಿಯಾಗಿದ್ದಳು ಎಂದು ತಿಳಿದು ಬರುತ್ತದೆ. ಋತುಸ್ನಾತಳಾದ ಸ್ತ್ರೀಯ ಸಂಗ ತಿರಸ್ಕರಿಸಿದರೆ ನರಕವೇ ಗತಿ ಎಂಬಂತಹ ಕಲ್ಪನೆಗಳನ್ನು ಆಗಿನವರು ಮಾಡಿಕೊಂಡಿದ್ದರು. 'ದೇವರ ನ್ಯಾಯ'ದಂತೆ ಗಂಡು ಹೆಣ್ಣುಗಳು ಕೂಡುವುದು, ಮಕ್ಕಳನ್ನು ಪಡೆಯುವುದು ಆ ಕಾಲದಲ್ಲಿ ನಡೆಯುತ್ತಿದ್ದವು. ಈ ನ್ಯಾಯದಂತೆಯೇ ಬೃಹಸ್ಪತಿ ಮಮತ ಎಂಬುವವಳನ್ನು ಕೂಡಿದ, ಧೃತರಾಷ್ಟ್ರ, ಪಾಂಡುರಾಜರು, ಪಂಚಪಾಂಡವರು ಹುಟ್ಟಿದ್ದು ಕೂಡ ಇಂಥ ದೇವರ ನ್ಯಾಯದಿಂದಲೇ. ಆದರೆ ಇಂಥ ಲೈಂಗಿಕ ಸಂಬಂಧಗಳನ್ನು ಇಂದಿನ ಸಮಾಜ ಒಪ್ಪುವುದಿಲ್ಲ.

ತನ್ನ ತಂದೆ ಯಾರೆಂದೇ ತಿಳಿಯದ ಸತ್ಯಕಾಮನನ್ನು ಇರುವ ವಿಷಯ ಹೇಳಿದ್ದಕ್ಕೆ 'ಹಾಗಾದರೆ ಇವನು ಬ್ರಾಹ್ಮಣನೇ ಆಗಿರಬೇಕು' ಎಂದು ಬ್ರಾಹ್ಮಣರು ಸ್ವೀಕರಿಸಿ ಉಪನಯನ ಮಾಡಿ ವೇದ ಕಲಿಸಿದರು. ಮುಂದೆ ಆತನೂ ಪ್ರಸಿದ್ಧ ಋಷಿಯೇ ಆದ.

ಮುಂದೆ ಪುರುಷ ವಾರಸತ್ವದ ಕಾಲ ಬಂತು. ತಂದೆಯ ಆಸ್ತಿ ಗಂಡು ಮಕ್ಕಳಿಗೇ ದೊರೆಯುವಂತಾಯಿತು. ಆಸ್ತಿ ಹಕ್ಕುಗಳನ್ನು ಜಾರಿಗೆ ತಂದ ಕ್ಷತ್ರಿಯರೇ ಮೊದಲು ವೈವಾಹಿಕ ನಿಯಮಗಳನ್ನು ಪ್ರಾರಂಭಿಸಿದರು ಎನ್ನಬಹುದು. ಸತ್ಯಕಾಮನ ಕಾಲಕ್ಕೆ ವರ್ಣಗಳ ವ್ಯವಸ್ಥೆ ಬೇರೂರಿರಲಿಲ್ಲ. ಆದರೆ ಭಗವದ್ಗೀತೆಯ ಕಾಲಕ್ಕೆ ವರ್ಣಸಂಕರವು ಭಯಾವಹವಾಗಿ ಪರಿಣಮಿಸಿತ್ತು. "ಸ್ತ್ರೀಷು ದುಷ್ಟಾಸು ಜಾಯತೇ

ವರ್ಣಸಂಕರಃ" ಎಂದು ಗೀತೆಯು ಹೆಣ್ಣಿಗೇ ಆ ಪಾಪವನ್ನೂ ಕಟ್ಟಿತು.

**ವೈದಿಕ ಯುಗದ ಜನಜೀವನ**

ಅಡಗಿಸಿಟ್ಟ ಜ್ಞಾನವು ನಿರುಪಯುಕ್ತವಾಗುವುದಲ್ಲದೆ ಪ್ರಜೆಗಳನ್ನು ಪೀಡಿಸುವ ಸಾಧನವೂ ಆಗುತ್ತದೆ ಎಂದು ತಿಳಿದವರು ಹೇಳುತ್ತಾರೆ. ವೇದಗಳ ವಿಷಯದಲ್ಲಿ ಇದೇ ನಡೆದಿದೆ ಎಂಬುದು ಕಂಡುಬರುತ್ತದೆ. ವೇದಗಳನ್ನು ಬ್ರಾಹ್ಮಣರು ಗುತ್ತಿಗೆ ತೆಗೆದುಕೊಂಡು, ವೇದಾಧ್ಯಯನಕ್ಕೆ ನಿಷೇಧಗಳನ್ನು ಕಲ್ಪಿಸಿ, ಅವುಗಳಲ್ಲೇನಿದೆ ಎಂಬುದು ಯಾರಿಗೂ ತಿಳಿಯದಂತೆ ಮಾಡಿದರು. ಈ ಪರಿಸ್ಥಿತಿಯನ್ನು ಆಧಾರ ಮಾಡಿಕೊಂಡು ಕೆಲವರು ಮುಂದಕ್ಕೆ ಹೋಗುವುದೆಂದರೆ ಭಯವೂ ಅಸಹ್ಯವೂ ಎಂದುಕೊಂಡು ವೇದಗಳಲ್ಲಿ ಇಲ್ಲದುದು ಪ್ರಪಂಚದಲ್ಲಿ ಏನೂ ಇಲ್ಲ ಎಂದು ಜನರನ್ನು ನಂಬಿಸಿದರು.

**ಆರ್ಯರ ಮೂಲ – ವೇದಗಳ ಕಾಲ**

ವೇದಕಾಲದ ಆರ್ಯರು ನಮ್ಮ ದೇಶಕ್ಕೆ ವಲಸೆ ಬಂದರೆಂಬ ಬಗ್ಗೆ ವಿವಾದವಿಲ್ಲವಾದರೂ, ಅದಕ್ಕೂ ಹಿಂದೆ ಅವರು ಎಲ್ಲಿ ವಾಸಿಸುತ್ತಿದ್ದರು ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಅವರು ಮೊದಲು ಉತ್ತರ ಯೂರೋಪಿನ ಭಾಗದಲ್ಲಿದ್ದರು ಎಂಬುದು ಒಂದು ವಾದ. ಕ್ರಿ. ಪೂ. ೬ರಿಂದ ೩ ಸಾವಿರ ವರ್ಷಗಳ ಅವಧಿಯಲ್ಲಿ ಆರ್ಯರು ಉತ್ತರ ಧ್ರುವ ಪ್ರದೇಶದಲ್ಲಿದ್ದರು, ಅಲ್ಲಿಂದ ದಕ್ಷಿಣದ ಕಡೆಗೆ ವಲಸೆ ಬಂದರೆಂಬುದು ತಿಲಕ್‌ರಂಥವರ ವಾದ. ಆದರೆ ಭಾಷಾವೇತ್ತರೂ, ಪುರಾತತ್ವವೇತ್ತರೂ ಹೇಳುವುದೇನೆಂದರೆ – ಆರ್ಯರ ಮೊದಲ ಸ್ಥಾನ ಡಾನ್ಯೂಬ್ ಮತ್ತು ಓಕ್ಸಸ್ ನದಿಗಳ ನಡುವಿನ ಮಧ್ಯ ಪ್ರಾಂತ್ಯವಾಗಿದ್ದಿತು ಎಂಬುದು. ಅದರಲ್ಲೂ ಕೆಲವರು ಹಂಗೆರಿಯ ಮೈದಾನದಲ್ಲಿದ್ದರೆಂದೂ, ಕೆಲವರು ಮಧ್ಯ ಏಷಿಯಾದ ಓಕ್ಸಸ್ ಪ್ರಾಂತ್ಯದಲ್ಲಿದ್ದರೆಂದೂ ಹೇಳುತ್ತಾರೆ. ಇಂಡೋ – ಯುರೋಪಿಯನ್ ಭಾಷೆಗಳು ಪರಿಣತಿಯನ್ನು ಹೊಂದಿದ್ದು ದಕ್ಷಿಣ ರಷ್ಯಾದ ಕ್ಯಾಸ್ಪಿಯನ್ ಸಮುದ್ರದ ಪೂರ್ವ ದಿಕ್ಕಿನಲ್ಲಿ ಮೊದಲು ವ್ಯವಸಾಯವನ್ನು ಸಾಗಿಸಿದ ಜನರಿಂದ ಎಂಬುದು ವಿಶ್ವಸನೀಯವಾಗಿ ಕಂಡುಬರುತ್ತದೆ.




ಕ್ರಿ. ಪೂ. ೨೦೦೦ದಷ್ಟು ಹೊತ್ತಿಗೆ ದಕ್ಷಿಣ ರಷ್ಯಾ, ತುರ್ಕಿಸ್ತಾನಗಳ ನಡುವಿದ್ದ ಜನಾಂಗಗಳಲ್ಲಿ ಸ್ನೇಹ ಸಂವರ್ಧನೆ ಏರ್ಪಟ್ಟಂತೆ ಕಾಣುತ್ತದೆ. ಅವರ ಭಾಷೆಗಳು ಇಂಡೋ – ಯೂರೋಪಿಯನ್ ಭಾಷೆಗಳೇ. ಕ್ರಿ. ಪೂ. ೧೫, ೧೪ನೇ ಶತಮಾನಗಳಲ್ಲಿ ಮತಾನೀ ಪಾಲಕರ ಹೆಸರುಗಳು ಸ್ಥೂಲವಾಗಿ ಇಂಡೋ – ಯೂರೋಪಿಯನ್ ಹೆಸರುಗಳಂತೆಯೇ ಇದ್ದವು. ಅವರು ಈಜಿಪ್ಟಿನೊಡನೆಯೂ ಏಷಿಯಾ ಮೈನರ್‌ನಲ್ಲಿದ್ದ ಹಿಟ್ಟೈಟ್ ರಾಜ್ಯದೊಡನೆಯೂ ನಡೆಸಿದ ಪತ್ರ ವ್ಯವಹಾರಗಳಲ್ಲಿ ಇವು ಕಾಣಬರುತ್ತವೆ.

ಹರಪ್ಪಾ ನಾಗರಿಕತೆ ಅಳಿದುಹೋದ ಮೇಲೆ ಕ್ರಿ. ಪೂ. ೬ನೇ ಶತಮಾನದವರೆಗೆ ಶಿಲಾಲೇಖಗಳು ಅಷ್ಟಾಗಿ ಇಲ್ಲ. ಗುರು ಶಿಷ್ಯ ಪರಂಪರೆಯಲ್ಲಿ ಕಂಠಸ್ಥವಾಗುತ್ತಾ ಬಂದಿದ್ದ ವೇದ ಸಾಹಿತ್ಯ ಮಾತ್ರವೇ ಇತ್ತು. ಹೀಗೆ ಕಂಠಸ್ಥವಾಗಿ ಮೌಖಿಕವಾಗಿ ತಲತಲಾಂತರಗಳಲ್ಲಿ ಉಳಿದುಬಂದಿರುವ ಹಿಂದೂ ಮತ ಗ್ರಂಥಗಳಲ್ಲಿ ಅನೇಕವಿದ್ದರೂ ವೇದಗಳೇ ಆದಿ. ಅವುಗಳ ನಂತರ ಬ್ರಾಹ್ಮಣಗಳು, ಉಪನಿಷತ್ತುಗಳು, ಬ್ರಹ್ಮಸೂತ್ರಗಳೂ ಬಂದವು.

ಬುದ್ಧನು ಬೋಧಿಸಿದ ಧರ್ಮ ಬಹಳವೆಂದರೆ ಉಪನಿಷತ್ತುಗಳ ತಾತ್ವಿಕ ಚಿಂತನೆಯ ಮೇಲೆ ಆಧಾರಪಟ್ಟಿದೆಯೆಂಬ ಒಂದು ಅಭಿಪ್ರಾಯವಿದೆ. ಬುದ್ಧನ ನಿರ್ಯಾಣ ಕ್ರಿ. ಪೂ. ೫೦೦ರ ಹಿಂದೆ ಎನ್ನಲಾಗುವುದರಿಂದ ಉಪನಿಷತ್ತುಗಳು ಕ್ರಿ. ಪೂ. ೬೦೦ಕ್ಕೂ ಹಿಂದೆಯೇ ಇದ್ದವು ಎನ್ನಬಹುದು.

**ಋಗ್ವೇದದ ಕಾಲ**

ಋಗ್ವೇದದ ರಚನೆ ಸುಮಾರು ಕ್ರಿ. ಪೂ. ೧೫೦೦–೧೪೦೦ರ ಸುಮಾರಿನಲ್ಲಿ ನಡೆದಿರಬಹುದೆಂದು ಪುರಾತತ್ವ ಶೋಧಗಳ ಆಧಾರದ ಮೇಲೆ ಹೇಳಬಹುದು. ಋಗ್ವೇದದ ಭೌತಿಕ ಸಂಸ್ಕೃತಿ ಪುರಾತತ್ವ ಶೋಧಗಳಿಂದ ಆ ಕಾಲದ ಏಷಿಯಾದ ನಗರಗಳ ಸಂಸ್ಕೃತಿಗಳೊಡನೆ ವೈರುಧ್ಯಗಳನ್ನೇನೂ ಹೊಂದಿಲ್ಲ. ಆ ಕಾಲದಲ್ಲೇ ಮೊದಲ ಇಂಡೋ–ಯೂರೋಪಿಯನ್ನರ ವಲಸೆಗಳು ನಡೆದಿವೆ. ಋಗ್ವೇದವು ಇಂದಿಗೂ ವಿಶ್ವಸನೀಯವಾದ ರಚನೆ. ರಾಮಾಯಣ – ಭಾರತಗಳಿಗೆ ಬಂದ ದುರ್ಗತಿ ವೇದಗಳಿಗೆ ಬರಲಿಲ್ಲ.

ಋಗ್ವೇದದಲ್ಲಿ ೧೦,೫೦೦ರ ಮೇಲ್ಪಟ್ಟು ಋಕ್ಕುಗಳಿವೆ. ಹಲವಾರು ಋಕ್ಕುಗಳನ್ನು ಕೂಡಿಸಿ ಸೂಕ್ತಗಳನ್ನಾಗಿ ವಿಭಜಿಸಿದ್ದಾರೆ. ಅಂಥ ಸೂಕ್ತಗಳು ೧೦೦೦ಕ್ಕೂ ಹೆಚ್ಚಾಗಿವೆ. ಋಕ್ಕುಗಳಲ್ಲಿ ಸೂಕ್ತಗಳಲ್ಲಿ ಕೆಲವು ಸ್ತೋತ್ರಗಳು, ಕೆಲವು ಪ್ರಾರ್ಥನೆಗಳು, ಕೆಲವು ಮಂತ್ರಗಳು, ಕೆಲವು ಕೇವಲ ಹಾಡುಗಳೂ ಇವೆ. "ಒಮ್ಮೊಮ್ಮೆ ವಾಸ್ತವವೂ, ವಿಶ್ವಸನೀಯವೂ, ಅದ್ಭುತವಾಗಿಯೂ ಇವೆ. ಅಲ್ಲಲ್ಲಿ ಕೇವಲ ಚಪಲವಾಗಿಯೂ, ಪಾಮರವಾಗಿಯೂ, ಕ್ಲಿಷ್ಟವಾಗಿಯೂ ಇವೆ" ಎಂದು ಋಗ್ವೇದದ ಋಕ್ಕುಗಳ ಬಗ್ಗೆ ಮ್ಯಾಕ್ಸ್– ಮುಲ್ಲರ್ ಹೇಳಿದ್ದಾನೆ.

ತಾವು ಆರ್ಯರೆಂದೂ, ಹೊಸ ಪ್ರದೇಶಗಳನ್ನು ಜಯಿಸಿದವರೆಂದೂ ಹೇಳಿಕೊಂಡಿದ್ದಾರೆ. ಋಗ್ವೇದ ರಚನೆಯ ಕಾಲದಷ್ಟು ಹೊತ್ತಿಗೆ ಅವರಿಗೆ ಸಂಸ್ಕೃತ ಭಾಷೆಯ ಮೇಲೆ ಪರಿಣತಿ ದೊರಕಿದೆ. ಬರುಬರುತ್ತಾ ಸಂಸ್ಕೃತದ ಮೂಲ ಸ್ವರೂಪ ಬದಲಾಗುತ್ತ ಮಧ್ಯಯುಗದ ಕಾಲಕ್ಕೆ ವೇದಗಳ ಮೇಲೆ ವಿಸ್ತೃತವಾದ ಭಾಷ್ಯಗಳನ್ನು ಬರೆಯುವಂಥ ಆವಶ್ಯಕತೆ ಬಂತು.

**ಆರ್ಯರ ಜನಜೀವನ**

ಕೆಲವರು ಆರ್ಯರು ಈ ದೇಶದ ಮೇಲೆ ದಂಡೆತ್ತಿ ಬಂದಾಗ ಇಲ್ಲಿಯ ಜನರು ಅನಾಗರಿಕ ಸ್ಥಿತಿಯಲ್ಲಿದ್ದರು ಎಂದು ಹೇಳಿದ್ದಾರೆ. ಆದರೆ ಹರಪ್ಪ ನಾಗರಿಕತೆ ಹೊರಬಂದ ಮೇಲೆ ಆಕ್ರಮಣಕಾರಿ ಆರ್ಯರೇ ಅನಾಗರಿಕ ಬರ್ಬರರೆಂದೂ, ಅವರು ಬರುವ ಮುಂಚೆಯೇ ಈಗಿನ ಪಂಜಾಬ್ ಪ್ರದೇಶದಲ್ಲಿ ಉನ್ನತ ನಾಗರಿಕತೆ ಮತ್ತು ಸಾಮ್ರಾಜ್ಯಗಳು ನೆಲೆಸಿದ್ದವೆಂದೂ ಪುರಾತತ್ವ ಶೋಧಗಳಿಂದ ತಿಳಿದುಬರುತ್ತದೆ. ಋಗ್ವೇದದಲ್ಲಿ ಸಹಜವಾಗಿ ಆರ್ಯರು ಶ್ರೇಷ್ಠ, ಸ್ಥಳೀಯ ಶತ್ರುಗಳು ಕನಿಷ್ಠ ಎಂಬ ಧೋರಣೆ ಕಂಡುಬರುತ್ತದೆ. ಬರುಬರುತ್ತಾ ಆರ್ಯ ಸಂಸ್ಕೃತಿಯ ಮೇಲೆ ಹರಪ್ಪಾ ನಾಗರಿಕತೆಯ ಪ್ರಭಾವ ಹೆಚ್ಚಿದಂತೆಯೂ ತೋರುತ್ತದೆ.

ಋಗ್ವೇದದ ಮೂಲಕ ಆರ್ಯರ ಭೌತಿಕ ಸಂಸ್ಕೃತಿಯನ್ನು ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ. ವೇದ ವರ್ಣನೆಯಲ್ಲಿ ವಾಸ್ತವ ಚಿತ್ರಣ ಇದ್ದಕ್ಕಿದ್ದಂತೆ ಆಲಂಕಾರಿಕವಾಗಿ ಹೋಗುತ್ತದೆ. ಆರ್ಯ ಯೋಧನ ರಥ ಇದ್ದಕ್ಕಿದ್ದಂತೆ ಸೂರ್ಯನಾಗಿ ಬದಲಾಗುತ್ತದೆ. ಗೋವುಗಳನ್ನು ಕರೆತರಲು ಹೋದವರು ಇದ್ದಕ್ಕಿದ್ದಂತೆ ಮಾರುತಗಳಾಗುತ್ತಾರೆ. ಅಷ್ಟೇ ಅಲ್ಲ, ಭೌತಿಕವಾದ ಅರ್ಥಗಳನ್ನು ಕೊಡುವ ಮಾತುಗಳು ಕಾಲಕ್ರಮದಲ್ಲಿ ಮತೀಯ ಅಲೌಕಿಕ ಅರ್ಥಗಳನ್ನು ಪಡೆಯುತ್ತವೆ. ಉದಾಹರಣೆಗೆ, 'ಬ್ರಹ್ಮ' ಎಂಬ ಮಾತಿಗೆ ಇಂದಿನ ಅರ್ಥವಿಲ್ಲ. ನಿರುಕ್ತವು ಇಂದ್ರನನ್ನು ದೇವತೆ ಎಂದು ಹೇಳುವುದಿಲ್ಲ. ರಥಗಳು ಎಷ್ಟು ವಿವರವಾಗಿ ವರ್ಣಿಸಲ್ಪಟ್ಟಿವೆಯೆಂದರೆ ಈಗಿನ ಜಾಣನಾದ ಬಡಗಿ ಇಂದ್ರನ ರಥದ ಮಾದರಿಯನ್ನು ತಯಾರು ಮಾಡಬಹುದು. ಆದರೆ ಆರ್ಯರು ಎಂಥ ಮನೆಗಳಲ್ಲಿ ವಾಸಿಸುತ್ತಿದ್ದರು ಎಂಬುದು ಸ್ವಲ್ಪ ಕೂಡ ತಿಳಿಯುವುದಿಲ್ಲ.



ಆರ್ಯರು ಪಂಜಾಬಿನ ಅಂಬಾಲಾ ಪ್ರಾಂತದಲ್ಲಿ ವಾಸಿಸುತ್ತಿದ್ದ ಕಾಲದಲ್ಲಿ ಋಗ್ವೇದ ರಚನೆ ನಡೆದಿದೆ ಎಂಬುದು ಕೆಲವು ಪಂಡಿತರ ಅಭಿಪ್ರಾಯ. ಅದರಲ್ಲಿ ಹಿಮಗಿರಿಗಳ ಮತ್ತು ದೊಡ್ಡ ನದಿಗಳ ವರ್ಣನೆಗಳು ದೊರೆಯುತ್ತವೆ. ಲಕ್ನೋದ ಪಶ್ಚಿಮ ಪ್ರದೇಶಗಳು ಗೋಧಿ ಬೆಳೆಗೂ, ಪೂರ್ವ ಪ್ರದೇಶಗಳು ನೀರಾವರಿ ಬೆಳೆಗಳಿಗೂ ಪ್ರಸಿದ್ಧವಾಗಿದ್ದವು. ಋಗ್ವೇದದಲ್ಲಿ ನೀರಾವರಿ ಧಾನ್ಯಗಳು ಮತ್ತು ದೊಡ್ಡ ಹುಲಿಗಳ ಉಲ್ಲೇಖ ದೊರೆಯುವುದಿಲ್ಲ. ಇವು ಅಥರ್ವವೇದದಲ್ಲಿ ಸಿಗುತ್ತವೆ. ಆದರೆ ಹರಪ್ಪಾ ಮುದ್ರೆಗಳ ಮೇಲೆ ದೊಡ್ಡ ಹುಲಿ ಕಂಡುಬರುತ್ತದೆ.

ಇಂಡೋ – ಯೂರೋಪಿಯನ್ ಸಮಾಜಗಳಲ್ಲೆಲ್ಲಾ ಇರುವಂತೆ ಋಗ್ವೇದ ಸಮಾಜದಲ್ಲೂ ಕೂಡ ಯೋಧರು, ಮಂತ್ರವೇತ್ತರು ಮತ್ತು ಬೇರೆ ಬೇರೆ ವೃತ್ತಿಗಳವರು ಎಂದು ಮೂರು ವಿಭಜನೆಗಳಿದ್ದವು. ಆದರೆ ಮುಂದಿನ ವಾಙ್ಮಯಗಳಲ್ಲಿ ಕಂಡುಬರುವ ವರ್ಣವಿಭಜನೆಯು ಋಗ್ವೇದದ ಕಾಲದಲ್ಲಿರಲಿಲ್ಲ.




ಋಗ್ವೇದದ ಸ್ತೋತ್ರಗಳು ಮುಖ್ಯವಾಗಿ ನರರೂಪದ ದೇವತೆಗಳನ್ನು ಕುರಿತವಾಗಿವೆ. ಸೋಮರಸವನ್ನು ಕೂಡ ಅವರು ಒಬ್ಬ ದೇವತೆಯೆಂದು ಆರಾಧಿಸಿದ್ದಾರೆ. ಅನೇಕ ಮಂದಿ ದೇವತೆಗಳು ಆರ್ಯರ ಪ್ರತಿರೂಪದಂತೆ ಕಂಡುಬರುತ್ತಾರೆ. ಆ ದೇವತೆಗಳಲ್ಲಿ ಅಗ್ರಗಣ್ಯ ಇಂದ್ರ. ಆತನನ್ನು ಸ್ತುತಿಸುವ ೨೫೦ ಸೂಕ್ತಗಳಿವೆ. (ಅಗ್ನಿಯವು ೨೦೦, ಸೂರ್ಯನವು ೧೦೦). ಆತನು ಎತ್ತರವಾದ, ಭುಜಬಲವುಳ್ಳ ದೇವತೆ. ಅವನಿಗೆ ಕಪಿಲ ವರ್ಣದ ಗಡ್ಡ. ಅವನು ಬಹಳ ಕುಡಿಯುತ್ತಿದ್ದುದರಿಂದ ದೊಡ್ಡ ಹೊಟ್ಟೆಯುಳ್ಳವನಾಗಿದ್ದ. ಅವನಲ್ಲಿ ದೇವಾಂಶ ಹೆಚ್ಚಿ ಸಿಡಿಲನ್ನು ಕೈಯಲ್ಲಿ ಹಿಡಿದವನಾದರೂ, ಉಳಿದ ಸಮಯಗಳಲ್ಲಿ ಎಲ್ಲ ಯೋಧರಂತೆ ರಥವನ್ನೇರಿ ಬಿಲ್ಲು ಬಾಣಗಳಿಂದ ಯುದ್ಧ ಮಾಡುತ್ತಿದ್ದ. ಶತ್ರುಗಳ ದುರ್ಗಗಳನ್ನು ಭೇದಿಸುತ್ತಿದ್ದ. (ಈತನು ಧ್ವಂಸ ಮಾಡಿದ ಹರಿಯೂಪಿಯ ಎಂಬುದು ಈಗಿನ ಹರಪ್ಪಾ ಎಂಬುದು ವಿದ್ವಾಂಸರ ಅಭಿಪ್ರಾಯ. ಅದೇ ಅಮರಾ ನಗರವೆಂದೂ ಅದನ್ನು ಅಸುರಾರಿಯಾದ ಇಂದ್ರನು ನಾಶ ಮಾಡಿದನೆಂದು ಋಗ್ವೇದದ ಆರನೇ ಮಂಡಲದಲ್ಲಿ ಹೇಳಲಾಗಿದೆ).

**ಹರಪ್ಪಾ ಜನರೇ ಅಸುರರು, ದಸ್ಯುಗಳು**

ಇಂದ್ರನಿಂದ ನಿರ್ಮೂಲಿಸಲ್ಪಟ್ಟವರನ್ನು ಅಸುರರು, ದಸ್ಯುಗಳು ಎಂದು ಕರೆಯಲಾಗಿದೆ. ಅವರು ಕಪ್ಪುಬಣ್ಣದವರು. ಅವರ ಮೂಗುಗಳು ಚಪ್ಪಟೆಯಾಗಿದ್ದವು. ಅವರು ಯಜ್ಞಯಾಗಾದಿಗಳನ್ನು ಅರಿಯರು. ಕರ್ಮಕಾಂಡ ಅವರಿಗೆ ಗೊತ್ತಿರಲಿಲ್ಲ. ಅವರು ದೇವತೆಗಳನ್ನು ಪೂಜಿಸುತ್ತಿದ್ದಿಲ್ಲ. ಬಹುಶಃ ಅವರು ಲಿಂಗ ಪೂಜಕರು, ಅವರ ಭಾಷೆ ಆರ್ಯರಿಗೆ ಅರ್ಥವಾಗುವಂತಿರಲಿಲ್ಲ. ಅವರು ಬಹಳ ಧನಿಕರೂ, ಬಂಗಾರವುಳ್ಳವರೂ, ರಾಜ್ಯಗಳನ್ನು ಹೊಂದಿದವರೂ ಆಗಿದ್ದರು. ಅವರು ದುರ್ಗಮವಾದ ಕೋಟೆಗಳನ್ನು ಕಟ್ಟಿಕೊಂಡಿದ್ದರು ಎಂಬ ಈ ವರ್ಣನೆ ಹರಪ್ಪಾ ನಾಗರಿಕತೆಗೆ ಸರಿಹೊಂದುತ್ತದೆ. ಅವರ ಕೋಟೆ ಮತ್ತು ಪುರಗಳನ್ನು ಧ್ವಂಸ ಮಾಡಿದ್ದರಿಂದ ಇಂದ್ರನು 'ಪುರಂದರ' ನೆನಿಸಿಕೊಂಡ.

**ಪಶುಪಾಲರ ಆರ್ಯರು**

ವೇದಕಾಲದ ಆರ್ಯರು ನಗರಗಳನ್ನು ಅರಿಯರು. ಋಗ್ವೇದ ಕಾಲದಲ್ಲಿ ವರ್ಣಿತವಾದ ಅವರ ಜೀವನ ನಾಗರಿಕವಾದುದಲ್ಲ. ಕೃಷಿ ಜೀವನ ನಡೆಸುವ ಸಂಘಗಳ ಸ್ವರೂಪದ್ದು. ಹೋಮರ್ ಚಿತ್ರಿಸಿದ ಜೀವನಕ್ಕಿಂತಲೂ ಅನಾಗರಿಕವಾದುದು ಅವರ ಜೀವನ. ಯೂರೋಪ್, ಏಷ್ಯಾ ಖಂಡಗಳಲ್ಲಿ ಅಂಥ ಸಮಾಜಗಳು ರೋಮ್ ಸಾಮ್ರಾಜ್ಯದ ಕಾಲದಲ್ಲೂ ಮತ್ತು ನಂತರದಲ್ಲೂ ಇದ್ದವು. ಅವರ ಆರ್ಥಿಕ ವ್ಯವಸ್ಥೆ ಧಾನ್ಯಗಳನ್ನು ಬೆಳೆಯುವುದರ ಮೇಲೆ ಮತ್ತು ಗೋವುಗಳು, ಕುರಿ, ಮೇಕೆಗಳನ್ನು ಸಾಕುವುದರ ಮೇಲೆಯೂ ಆಧಾರಪಟ್ಟಿತ್ತು. ಇಂಡೋ – ಯೂರೋಪಿಯನ್ನರ ಸಂಪ್ರದಾಯದಲ್ಲಿ ಸಂಪತ್ತು ಎಂದರೆ ಪಶುಗಳೇ. (ಲ್ಯಾಟಿನ್ ಭಾಷೆಯಲ್ಲಿ Pecus ಎಂದರೆ ಪಶುವು. Pecumia ಎಂದರೆ ಧನ.) ಗವಿಷ್ಟಿ ಎಂದರೆ ಗೋವಿಗಾಗಿ ಮಾಡುವ ಯುದ್ಧ ಎಂದು ಋಗ್ವೇದದಲ್ಲಿದೆ. ಪಶುಪಾಲಕ ಆರ್ಯರ ಭಾಷೆಯಲ್ಲಿ ಪಶುಗಳಿಗೆ ಸಂಬಂಧಿಸಿದ ಪದಗಳ ಬಳಕೆ ಹೆಚ್ಚಾಗಿರುವುದು ಸಹಜ. ಅವರ ಆಹಾರದಲ್ಲಿ ಹಾಲು ಮುಖ್ಯವಾಗಿತ್ತು. ಗೋವುಗಳ ಹಾಲನ್ನು ದಿನಕ್ಕೆ ಮೂರು ಸಾರಿ ಹಿಂಡುತ್ತಿದ್ದರು. ಗೋಮಾಂಸ ಅವರ ಮುಖ್ಯ ಆಹಾರ. ಅತಿಥಿ ಸತ್ಕಾರಕ್ಕಾಗಿ ಗೋವುಗಳನ್ನು ಕೊಯ್ಯುವುದು ಘನವಾದ ಅತಿಥಿ ಸತ್ಕಾರವೆಂದು ಭಾವಿಸಲಾಗಿತ್ತು.

ಇಂದ್ರನಿಗೆ ಗೋಮಾಂಸವೆಂದರೆ ಬಹಳ ಪ್ರೀತಿ. ಮಾಂಸಭಕ್ಷಣ ನಿಷೇಧ, ಅಹಿಂಸಾ ಸಿದ್ಧಾಂತಗಳು ಆನಂತರ ಬಂದಂಥವು. ಅವು ಪ್ರಾರಂಭಕಾಲದ ಆರ್ಯರ ವಿಶ್ವಾಸಗಳಲ್ಲ. ಪಶುಗಳ ತೊಗಲಿನಿಂದ ತಯಾರಿಸಿದ ಬಿಲ್ಲಿನ ಹಗ್ಗ, ರಥದ ಹಗ್ಗ, ಕವಣೆಗಳ ಚರ್ಮಗಳು ಪಶುಗಳ ಚರ್ಮದವೇ ಆಗಿದ್ದವು.

ಆರ್ಯರು ಪಶುಪಾಲನೆಯ ಜೊತೆಗೆ ಕೃಷಿಕರೂ ಆಗಿದ್ದರು. ಎತ್ತುಗಳಿಗೆ ನೊಗ ಹೂಡಿ ನೇಗಿಲುಗಳಿಂದ ನೆಲ ಉಳುಮೆ ಮಾಡಿ ಯವ ಎಂಬ ಧಾನ್ಯವನ್ನು ಅವರು ಬೆಳೆಯುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಎತ್ತುಗಳಿಗೆ ಮೂಗುದಾರದ ಉಪಯೋಗದ ಬಗ್ಗೆ ಋಗ್ವೇದದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಈ ಸಂದರ್ಭದಲ್ಲಿ ಗಮನಿಸಬೇಕಾದ ವಿಷಯವೆಂದರೆ ಕ್ರಿ. ಪೂ. ೨೦೦೦ಕ್ಕೂ ಹಿಂದೆ ಸುಮೇರಿಯಾದಲ್ಲೂ, ಈಜಿಪ್ಟಿನ ಮೂರನೇ ರಾಜವಂಶದ ಕಾಲದಲ್ಲೂ ಎತ್ತುಗಳನ್ನು ನೆಲವನ್ನು ಉಳಲಿಕ್ಕೆ ಬಳಸುತ್ತಿದ್ದರು ಮತ್ತು ನೇಗಿಲ ಹಗ್ಗವನ್ನು ಎತ್ತುಗಳ ಕೊಂಬುಗಳಿಗೆ ಕಟ್ಟುತ್ತಿದ್ದರು ಎಂಬುದು. ಆಗಿನ ಎತ್ತುಗಳು ಈಗಿನ ನಮ್ಮ ಎತ್ತುಗಳಂತೆ ಹಿಣಿಲನ್ನು (ಭುಜ) ಹೊಂದಿದ್ದವು. ಇದನ್ನು ಮೆಸೆಪೊಟೇಮಿಯಾದ ಕಸ್ಪೀ ರಾಜಾಡಳಿತದಲ್ಲಿ ಚಿತ್ರಿಸಲಾಗಿರುವುದು ಕಂಡುಬರುತ್ತದೆ.

ಬೆಳೆದ ಧಾನ್ಯವನ್ನು ಕುಡುಗೋಲಿನಿಂದ ಕೊಯ್ದು ಕಣದಲ್ಲಿ ಹಾಕಿ ತುಳಿಸಿ ತೂರಿ ಚೀಲಗಳಲ್ಲಿ ತುಂಬುತ್ತಿದ್ದರು. ನೀರಿಗಾಗಿ ಬಾವಿಗಳನ್ನು ತೋಡುತ್ತಿದ್ದರೆಂದು ತಿಳಿದುಬರುತ್ತದೆ. ಮನೆಗಳನ್ನು ಕಾಯಲೂ ಬೇಟೆಯಾಡುವುದಕ್ಕೂ ನಾಯಿಗಳನ್ನು ಉಪಯೋಗಿಸುತ್ತಿದ್ದರು. ಆದರೆ ನಾಯಿಗಳನ್ನು ಯಜ್ಞಶಾಲೆಗಳಿಂದ ಓಡಿಸುತ್ತಿದ್ದರು. ದನಗಳನ್ನು ಕಾಯಲಿಕ್ಕೆ ನಾಯಿಗಳನ್ನು ಬಳಸುತ್ತಿದ್ದುದು ಕಂಡುಬರುವುದಿಲ್ಲ. ಕುರಿ, ಮೇಕೆಗಳನ್ನು ಆಹಾರಕ್ಕಾಗಿ ಬಳಸುತ್ತಿದ್ದರು. ಅವುಗಳ ಕೂದಲನ್ನು ಬಟ್ಟೆ ನೇಯುವುದಕ್ಕೆ ಉಪಯೋಗಿಸುತ್ತಿದ್ದರು. ಉದ್ದ, ಅಡ್ಡ ನೇಯುವ ದಾರಗಳು, ದಾರದ ಉಂಡೆಗಳಂಥ ಮಾತುಗಳು ಕಂಡುಬರುತ್ತವೆ.

ಋಗ್ವೇದ ಕಾಲದ ಆರ್ಯರು ಸಾಕಿದ ಪ್ರಾಣಿಗಳಲ್ಲಿ ಕುದುರೆಗಳಿಗೆ ಬಹಳ ಪ್ರಾಮುಖ್ಯತೆ ಇತ್ತು. ಅವುಗಳ ಬಣ್ಣಗಳ ವರ್ಣನೆಯೂ ಋಗ್ವೇದದಲ್ಲಿ ಸಿಗುತ್ತದೆ. ಅವುಗಳ ಕಣ್ಣು ಕಟ್ಟಿ ಮೇಯುವುದಕ್ಕೆ ಬಿಡುತ್ತಿದ್ದರು. ರಥಗಳಿಗೆ ಸಾಮಾನ್ಯವಾಗಿ ಹೆಣ್ಣುಕುದುರೆಗಳನ್ನು ಕಟ್ಟುತ್ತಿದ್ದರು. ಕುದುರೆಗಳ ಮೇಲೆ ಕುಳಿತುಕೊಂಡು ಯುದ್ಧ ಮಾಡುವ ವಿಧಾನವಿರಲಿಲ್ಲ. ಕುದುರೆ ಸವಾರಿಗಳ ಪಂದ್ಯಕ್ಕಿಂತ ರಥದ ಪಂದ್ಯಗಳೇ ಹೆಚ್ಚಾಗಿ ಕಂಡುಬರುತ್ತದೆ. ಎರಡು ಗಾಲಿಗಳ ರಥಕ್ಕೆ ಕುದುರೆಗಳನ್ನು ಹೂಡುತ್ತಿದ್ದರು. ನಾಲ್ಕು ಗಾಲಿಗಳ ಬಂಡಿಗಳಿಗೆ ಎತ್ತುಗಳನ್ನು ಹೂಡುತ್ತಿದ್ದರೆಂದು ತಿಳಿದುಬರುತ್ತದೆ.


ತೆಲುಗಿನಿಂದ ಸಂಗ್ರಹಾನುವಾದ : **ಡಾ॥ ವೃಷಭೇಂದ್ರಾಚಾರ್ ಅರ್ಕಸಾಲಿ**
ನಿವೃತ್ತ ಪ್ರಾಂಶುಪಾಲರು, ಕಾನಾ ಹೊಸಹಳ್ಳಿ
ಕೂಡ್ಲಿಗಿ ತಾ॥, ಬಳ್ಳಾರಿ ಜಿಲ್ಲೆ

# ಬರಿದೆ ಭಯದ ಹುಯಿಲೆಬ್ಬಿಸುತ್ತ...

## ಡಾ॥ ವಿನಯಾ ಒಕ್ಕುಂದ

ಭಾರತದಲ್ಲಿ ಅಭಿವೃದ್ಧಿ ಪ್ರಕ್ರಿಯೆಯ ಫಲಶ್ರುತಿಯಾಗಿ ಮಹಿಳೆಯರ ಮೇಲೆ ಸೂಕ್ಷ್ಮ ಮತ್ತು ನೇರ ಹಿಂಸೆಗಳು ಹೆಚ್ಚುತ್ತಿವೆ. ಆಧುನೀಕರಣ ಸಾಂಪ್ರದಾಯಿಕ ಮೌಲ್ಯಗಳ ಬಿಗಿಹಿಡಿತದಿಂದ ಪಾರುಮಾಡಿ ಸ್ವಾತಂತ್ರ್ಯದ ಹೊಸ ವಿಸ್ತಾರಕ್ಕೆ ಕರೆದೊಯ್ಯುತ್ತದೆ ಎಂಬ ಭ್ರಮೆಯನ್ನು ಮರುವಿವೇಚನೆಗೆ ತೊಡಗಿಸಬೇಕಿದೆ. ಹೆಣ್ಣು–ಗಂಡಿನ ಸಂಬಂಧದ ನಿರ್ವಚನವು ಎಂದಿನಿಂದಲೂ ಸ್ವಾತಂತ್ರ್ಯ ಮತ್ತು ಸಮಾನತೆಯ ಅಧಿಕಾರ ಸಂಬಂಧದ ಚರ್ಚೆಯಾಗಿ ಮುಖ್ಯವಾಗುತ್ತಿದೆ. ಸಾಮಾಜಿಕವಾಗಿ ಅಧಿಕಾರ ಸ್ಥಾಪನೆ ಮಾಡಿಕೊಂಡಿರುವ ಪಿತೃಪ್ರಧಾನತೆ, ಅದನ್ನು ಹೀರಿ ಬೆಳೆದ ಕೋಮು ಮತ್ತು ಜಾತಿ ರಾಜಕಾರಣಗಳು, ಹೆಣ್ಣುಗಳು ತಮ್ಮ ಬದುಕನ್ನು ತಾವೇ ನಿರ್ಧರಿಸಿಕೊಳ್ಳುವ 'ತಪ್ಪನ್ನು' ಎಸಗಿದರೆ, ಅಂಥವರನ್ನು ಎನ್‌ಕೌಂಟರ್ ಮಾಡಿ ಮುಗಿಸಿಬಿಡುತ್ತದೆ. ಆಡಳಿತ ಯಂತ್ರವು ಹಿಂಸೆಯ ನಿಜವಾದ ಕಾರಣವನ್ನು ಹುಡುಕುವುದಕ್ಕಿಂತ ಅಪರಾಧಿಗಳನ್ನು ಶಿಕ್ಷಿಸುವುದರಲ್ಲಿ ದಣಿಯುತ್ತಿದೆ. ಹೆಣ್ಣನ್ನು ವಿವರಿಸಿಕೊಳ್ಳುವ ಎಲ್ಲ ಸಂದರ್ಭಗಳಲ್ಲಿ ಹೆಣ್ತನದ ಕುರಿತ ಪಾರಂಪರಿಕ ಸಿದ್ಧ ನಿಲುವುಗಳನ್ನೇ ಒಪ್ಪಿಕೊಳ್ಳುವುದರ ಉದಾಸ ಪರಿಣಾಮವಿದು. ಹೆಣ್ಣನ್ನು ಯಾವತ್ತೂ ಗಂಡಸಿನ ಸಂಬಂಧದ ಮೂಲಕವೇ ನಿರ್ವಹಿಸಿಕೊಂಡು ಬರಲಾಗಿದೆ. ಅವಳಿಗೊಂದು ಸ್ವತಂತ್ರ ಅಸ್ತಿತ್ವವಿದೆ, ಚಹರೆಯಿದೆ ಎನ್ನುವುದನ್ನು ನಿರ್ಲಕ್ಷಿಸಲಾಗಿದೆ. ಪಿತೃಪ್ರಧಾನವಾದ ರಚನೆಗಳು ಹೆಣ್ಣು–ಗಂಡಿನ ಸಂಬಂಧದ ಬಗೆಯನ್ನು ಮರುಸ್ಥಾಪನೆ ಮಾಡುವ ಆಧುನಿಕ ಜ್ಞಾನವಲಯಗಳಿಂದಲೂ ಅಂತರವನ್ನು ಕಾಪಾಡಿಕೊಂಡು ಅವುಗಳನ್ನು ಹೆಣ್ಣುನೋಟದಿಂದ ಪರಿಶೀಲಿಸಿಕೊಳ್ಳಬೇಕಾದ ಒತ್ತಡವು ಸಹಜವೆಂಬಂತೆ ಆಗಿದೆ.

ಇಂತಹ ಸಂಕೀರ್ಣ ಹೆಣಿಗೆಯ ಕಾಲ ಸಂದರ್ಭದಲ್ಲಿ ಇತ್ತೀಚೆಗೆ ದೇಶದ ಸರ್ವೋಚ್ಚ ನ್ಯಾಯಾಂಗವು ನೀಡಿದ ತೀರ್ಪುಗಳು ಮಹಿಳಾ ಹಕ್ಕುಗಳ ಪರವಾದ ಸಾಂವಿಧಾನಿಕ ನೈತಿಕತೆಯನ್ನು ಪ್ರತಿಪಾದಿಸಿದೆ. ನ್ಯಾಯಾಂಗವು ಮಹಿಳಾ ಸಂವೇದನಾಶೀಲತೆಯನ್ನು ದಾಖಲಿಸಿದ ಚರಿತ್ರೆಯಿದು. ಶಬರಿಮಲೆ ದೇವಸ್ಥಾನದ ಪ್ರವೇಶಕ್ಕೆ ೧೦ರಿಂದ ೫೦ ವರ್ಷದೊಳಗಿನ ಹೆಣ್ಣುಗಳಿಗೆ ಇದ್ದ ಧಾರ್ಮಿಕ ಆಚರಣೆಯ ನಿರ್ಬಂಧವನ್ನು ಸುಪ್ರೀಂ ಕೋರ್ಟ್ ತೆರವುಗೊಳಿಸಿದೆ. ಆ ಮೂಲಕ ಹೆಣ್ಣಿನ ದೇಹವನ್ನು 'ಹೊಲೆ' ಎಂದು ದೂರೀಕರಿಸುತ್ತ ಬಂದಿದ್ದ ಪ್ರಾಚೀನ ಪಿತೃಸತ್ತೆಗೆ ತೀವ್ರವಾದ ತಡೆ ಒದಗಿದೆ. ಅಷ್ಟಕ್ಕೇ, ಹೆಣ್ಣನ್ನು ಕೀಳಾಗಿ ನೋಡುವ, ಮುಟ್ಟಿಸಿಕೊಳ್ಳದವಳಾಗಿ ನೋಡುವ ನೋಟಕ್ರಮವು ಇಲ್ಲವಾಗಿಬಿಡುತ್ತದೆ ಮತ್ತು ಲಿಂಗಾಧಾರಿತ ತಾರತಮ್ಯಗಳಿಲ್ಲದ ಸಮ ಸಮಾಜವೊಂದು ಉದ್ಭವಿಸಿಬಿಡುತ್ತದೆ ಎಂದು ತಿಳಿಯಬೇಕಿಲ್ಲ. ಸುಪ್ರೀಂ ಕೋರ್ಟಿನ ತೀರ್ಪು ಸಾಮಾಜಿಕ ನಂಬಿಕೆಯ ಲೋಕವನ್ನು ತಕ್ಷಣವೇ ಮುರಿದು ಕಟ್ಟುವಷ್ಟು ಪ್ರಖರವಾಗಿರುವುದಿಲ್ಲ. ಎಂದಿನಿಂದಲೋ ಜಾತಿ–ಲಿಂಗ–ಧರ್ಮಗಳ ಕೊಳೆ ನಿಂತು ಮಲೆತು ಜಡವಾಗಿರುವ ಸಮಾಜವು ಇದ್ದಕ್ಕಿದ್ದಂತೆ ಚಲನಶೀಲ ತಾಕತ್ತನ್ನು ಪಡೆದುಕೊಳ್ಳುವುದಿಲ್ಲ. ಆದರೆ ಸಾಮಾಜಿಕ ಅಧಿಕಾರ ಕೇಂದ್ರವನ್ನು ಸಾಂವಿಧಾನಿಕ ಅಧಿಕಾರವು ಘರ್ಷಿಸಿದಾಗ ಮಲೆತು ನಿಂತ ನೀರು ತಿಳಿಯಾಗಲು ಸಾಧ್ಯ. ಸಣ್ಣ ಕದಲಿಕೆಯೂ ಬೇರೊಂದು ಚಲನೆಗೆ ಪ್ರೇರಕವಾಗಬಲ್ಲದು. ಹೆಣ್ಣಿಗೆ ದೇವಾಲಯ ಪ್ರವೇಶವನ್ನು ನಿರಾಕರಿಸುವುದು ಅಸ್ಪೃಶ್ಯತೆಗೆ ಸಮ – ಎಂಬ ನ್ಯಾಯಾಧೀಶರ ಮಾತು ಮಹತ್ವವಾದದ್ದು. ಆದರೆ, ಈ ಪ್ರವೇಶಿಕೆ ಹೆಣ್ಣಿನ ಬದುಕನ್ನು ಇತ್ಯಾತ್ಮಕವಾಗಿ ಬದಲಿಸುತ್ತದೆಂದು ನಂಬಲಾದೀತೆ? ಹೆಣ್ಣಿನ ಶಕ್ತಿಯನ್ನು ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುವಲ್ಲಿ ಪುರೋಹಿತಶಾಹಿ ಪಳಗಿದೆ. ಮಠ–ಗುಡಿ–ಧರ್ಮಸಂಸ್ಥೆಗಳು ಹೆಣ್ಣಿಗೆ ಸುರಕ್ಷಿತ ತಾಣಗಳಾಗಿಯೂ ಉಳಿದಿಲ್ಲ. ಸುಪ್ರೀಂ ಕೋರ್ಟಿನ ತೀರ್ಪಿನ ಮರು ಪರಿಶೀಲನೆಯನ್ನು ಒತ್ತಾಯಿಸಿ ಅರ್ಜಿಗಳು ಸಲ್ಲಿಕೆಯಾಗಿವೆ. ರಾಜ್ಯದಲ್ಲಿ ಅಧಿಕಾರದಲ್ಲಿರುವ ಸಿಪಿಎಂ ಪಕ್ಷದ ವಿರುದ್ಧ ಭಾವನಾತ್ಮಕವಾಗಿ ಜನರನ್ನು ಸಂಘಟಿಸಿ ರಾಜಕೀಯ ಲಾಭದ ಬೇಳೆ ಬೇಯಿಸಿ ಕೊಳ್ಳಲು ಬಿಜೆಪಿ ಕಾತರಿಸುತ್ತಿದೆ. ಈಗಾಗಲೇ ಅದು ಪಂದಳದಿಂದ ತಿರುವನಂತಪುರ ದವರೆಗೆ ಐದು ಬೃಹತ್ ರ‍್ಯಾಲಿಗಳನ್ನೇರ್ಪಡಿಸಿದೆ. ದೇಶದಾದ್ಯಂತ ಮತೀಯ ಮಹಿಳಾ ಮನಸ್ಸುಗಳನ್ನು ಮುಂದು ಮಾಡಿಕೊಂಡು ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸ ಲಾಗುತ್ತಿದೆ. ಶಬರಿಮಲೈ ವಿಷಯವನ್ನೇ ಹಿಂದೆ ಹಾಕಿ ಮುಸ್ಲಿಂ ಮಹಿಳೆಯರ ಮಸೀದಿ ಪ್ರವೇಶದ ಪ್ರಶ್ನೆಯನ್ನೇ ಮುಂದಿಟ್ಟುಕೊಂಡು ಸನಾತನ ಸಂಸ್ಕೃತಿಗೆ ಧಕ್ಕೆಯೊದಗಲು ಅವಕಾಶ ಕೊಡುವುದಿಲ್ಲವೆಂದು ಉದ್ರೇಕಕಾರಿಯಾಗಿ ಮಾತನಾಡಲಾಗುತ್ತಿದೆ.

ಸುಪ್ರೀಂ ಕೋರ್ಟು ಮಹಿಳೆಯ ಧಾರ್ಮಿಕ ಸ್ವಾತಂತ್ರ್ಯವನ್ನು ಎತ್ತಿಹಿಡಿದಿರುವುದೇ ಅಪಥ್ಯವಾಗಿರುವ ಮನಸ್ಥಿತಿಗೆ, ಐಪಿಸಿ ಸೆಕ್ಷನ್ ೪೯೭ಅನ್ನು ರದ್ದುಪಡಿಸಿ, ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ರಕ್ಷಿಸಿರುವುದು ಅಲ್ಲೋಲಕಲ್ಲೋಲವನ್ನು ಸೃಷ್ಟಿಸಿದೆ. ಮಹತ್ವದ ವಿಷಯವೆಂದರೆ, ಐಪಿಸಿ ೪೯೭ಅನ್ನು ಊರ್ಜಿತಗೊಳಿಸಬೇಕು ಎಂಬ ಕೇಂದ್ರ ಸರ್ಕಾರದ ನಿಲುವನ್ನು ನ್ಯಾಯಾಂಗ ತಿರಸ್ಕರಿಸಿರುವುದು. ಆ ಮೂಲಕ ನ್ಯಾಯಾಂಗವು ಪ್ರಭುತ್ವದ ಮರ್ಜಿಯನ್ನು ಕಾಯಬೇಕಾದ ಸಂಸ್ಥೆಯಲ್ಲ – ಎಂದು ಸಾಬೀತುಮಾಡಿರುವುದು. ಸೆಕ್ಷನ್ ೪೯೭, ಕುಟುಂಬ ರಕ್ಷಣೆ ಮತ್ತು ವಿವಾಹ

ಪಾವಿತ್ರ್ಯವನ್ನು ಕಾಪಾಡುವ ಹೊಣೆಗಾರಿಕೆಯ ಹೆಸರಿನಲ್ಲಿ ದ್ವಿಮುಖ ನೀತಿಯನ್ನು ಹೊಂದಿತ್ತು. ಇದು ಹೆಣ್ಣನ್ನು ಸ್ವಾಯತ್ತ ಜೀವಿಯಾಗಿ ನೋಡುತ್ತಿರಲಿಲ್ಲ. ಹೆಣ್ಣನ್ನು ಪುರುಷನ ಖಾಸಗಿ ಆಸ್ತಿ ಎಂದು ಪರಿಗಣಿಸುತ್ತಿತ್ತು. ವ್ಯಭಿಚಾರವನ್ನು ವಿವರಿಸಿಕೊಳ್ಳುವ ವಿಧಾನದಲ್ಲಿಯೇ ಈ ಕಾನೂನು ಹೆಣ್ಣಿನ ಪತಿಯ ಸಮ್ಮತಿ ಅಥವಾ ಅಸಮ್ಮತಿಯನ್ನು ಆಧಾರವಾಗಿ ನೋಡುತ್ತದೆ. ಹೆಣ್ಣಿನ ಪತಿಯ ಒಪ್ಪಿಗೆ ಇಲ್ಲದ ಮತ್ತು ಅತ್ಯಾಚಾರವಲ್ಲದ ಲೈಂಗಿಕ ಸಂಬಂಧವನ್ನು ವ್ಯಭಿಚಾರ ಎಂದು ಕರೆದು, ಅದೊಂದು ಶಿಕ್ಷಾರ್ಹ ಅಪರಾಧ ಎಂದು ವ್ಯಾಖ್ಯಾನಿಸಲಾಗಿತ್ತು. ಈ ಸೆಕ್ಷ್ಯನ್ ವ್ಯಭಿಚಾರವನ್ನು ನಿರ್ಧರಿಸುವ ಮಾನದಂಡ ಪುರುಷ ಕೇಂದ್ರದ್ದು. ಗಂಡನು ಹೆಂಡತಿಯ ಯಜಮಾನ ಎಂದು ನಿಗದಿಗೊಳಿಸುವಂಥದ್ದು. ಇಲ್ಲಿ ಹೆಣ್ಣು ಮತ್ತು ಹೆಣ್ಣಿನ ಅಭಿಪ್ರಾಯ ಗೌಣವಾಗಿತ್ತು. ಆಶ್ಚರ್ಯವೆಂದರೆ, ಇದೇ ರೀತಿಯ ವಿವಾಹಬಾಹಿರ ಸಂಬಂಧವನ್ನು ಪತಿ ಹೊಂದಿದ್ದರೆ, ಹೆಂಡತಿಯು ಈ ಕಾನೂನನ್ನು ಬಳಸುವ ಹಕ್ಕನ್ನು ನಿರಾಕರಿಸಲಾಗಿತ್ತು. ಪಿತೃಪ್ರಧಾನತೆಯ ಹಿತಾಸಕ್ತಿಯನ್ನು ಕಾಪಾಡುವ ರಕ್ಷಣಾ ಆಯುಧದಂತಿದ್ದ ಈ ಕಾನೂನನ್ನು ಸ್ತ್ರೀ-ಪುರುಷ ಸಮಾನತೆಯ ನೆಲೆಯಲ್ಲಿ ಮರುನಿರ್ವಚನಗೊಳಿಸುವ ಪ್ರಯತ್ನ ನಡೆದಿರಲೂ ಇಲ್ಲ. ಹಾಗಿದ್ದೂ, ಈ ಸೆಕ್ಷ್ಯನ್‌ಅನ್ನು ರದ್ದುಪಡಿಸಿದ ನ್ಯಾಯಮೂರ್ತಿಗಳನ್ನು ಮತ್ತು ನ್ಯಾಯವಿವರಣೆಯನ್ನು ವಿರೋಧಿಸುವ ವಾತಾವರಣವನ್ನು ಸೃಷ್ಟಿಸಲಾಗುತ್ತಿದೆ.

ಮಾಧ್ಯಮಗಳಲ್ಲಿ ಮತ್ತು ಜಾಲತಾಣಗಳಲ್ಲಿ ನಡೆಯುತ್ತಿರುವ ಡಿಬೇಟ್, ತುಂಬ ಅವಸರ ಮತ್ತು ಆವೇಶದ ನಡೆಯಾಗುತ್ತಿದೆ. ಸೆಕ್ಷ್ಯನ್ ೪೯೭ ರದ್ದತಿಯಿಂದ ಸಮಾಜದಲ್ಲಿ ವ್ಯಭಿಚಾರವನ್ನು ಉತ್ತೇಜಿಸಿದಂತಾಗುತ್ತದೆ. ಕೌಟುಂಬಿಕ ಸೌಖ್ಯ ಮತ್ತು ನೈತಿಕತೆಗೆ ಧಕ್ಕೆಯೊದಗುತ್ತದೆ. ಭಾರತೀಯ ಸಂಸ್ಕೃತಿಗೆ ಅಪಾಯವೊದಗುತ್ತದೆ – ಇತ್ಯಾದಿ ಪೊಳ್ಳುತನಗಳು ವಿಜೃಂಭಿಸುತ್ತಿವೆ. ತಮ್ಮ ವಾದಗಳ ಸಮರ್ಥನೆಗಾಗಿ ಮಾಧ್ಯಮಗಳು ಮಧ್ಯಮವರ್ಗದ ಮಹಿಳೆಯರ ಅಭಿಪ್ರಾಯಗಳನ್ನು ದಾಖಲಿಸುತ್ತವೆ. ಶಬರಿಮಲೆ ದೇವಸ್ಥಾನಕ್ಕೆ ಹೆಣ್ಣುಗಳು ಪ್ರವೇಶಿಸಬಾರದೆಂದು ಸ್ವತಃ ಅಯ್ಯಪ್ಪಸ್ವಾಮಿಯೇ ಹೇಳಿರುವಾಗ, ಕೋರ್ಟು ಮಧ್ಯಪ್ರವೇಶಿಸಿದರೆ ಧಾರ್ಮಿಕ ನಂಬಿಕೆಯ ಲೋಕ ವ್ಯತ್ಯಸ್ಥಗೊಳ್ಳುತ್ತದೆಂದು ನೋಯುವವರು; ಹೆಣ್ಣಿನ ಲೈಂಗಿಕತೆಯ ಹಕ್ಕುಸ್ವಾಮ್ಯದ ಕ್ರಾಂತಿಕಾರೀ ನಿಲುವನ್ನು ಒಪ್ಪುವುದು ಸಾಧ್ಯವೇ? ಐವರು ನ್ಯಾಯಮೂರ್ತಿಗಳ ಸಂವಿಧಾನ ಪೀಠವು ಸೆಕ್ಷ್ಯನ್ ೪೯೭ಅನ್ನು ರದ್ದುಗೊಳಿಸಲು ಒಮ್ಮತದ ನಿಲುವಿಗೆ ಬರುತ್ತ, ಕೊಟ್ಟ ಕಾರಣಗಳು ಹೀಗಿವೆ. ೧. ಇದು ವಸಾಹತುಕಾಲದ ಸಾಮಾಜಿಕ ನಿಲುವನ್ನು ಹೊಂದಿದೆ. ೨. ಮಹಿಳಾ ಸಮಾನತೆಯನ್ನು ಉಲ್ಲಂಘಿಸುತ್ತದೆ. ೩. ವ್ಯಕ್ತಿಯ (ಹೆಣ್ಣನ್ನೂ ವ್ಯಕ್ತಿಯೆಂದು ಪರಿಗಣಿಸಿ) ಖಾಸಗಿತನದಲ್ಲಿ ಹಸ್ತಕ್ಷೇಪ ಮಾಡುತ್ತದೆ. ೪. ಇದು ವ್ಯಭಿಚಾರ ಮಾಡುವ ಗಂಡಸಿನ ಹೆಂಡತಿಯನ್ನು ಸಂತ್ರಸ್ತೆ ಎಂದು ಪರಿಗಣಿಸುವುದಿಲ್ಲ. ನ್ಯಾಯಮೂರ್ತಿ ಚಂದ್ರಚೂಡ್ ಅವರು – ಗಂಡನು ಹೆಂಡತಿಯ ಮಾಲೀಕನಲ್ಲ ಎನ್ನುವುದನ್ನು ಸ್ಪಷ್ಟವಾಗಿ ಹೇಳುವ ಸಮಯ ಬಂದಿದೆ – ಎಂದಿರುವುದು ಭಾರತೀಯ ನ್ಯಾಯಾಂಗದ ಚರಿತ್ರೆಯಲ್ಲಿಯೇ ಕ್ರಾಂತಿಕಾರೀ ನಡೆಯಾಗಿದೆ. ಮುಖ್ಯ ವಿಚಾರವೆಂದರೆ, ಸಂವಿಧಾನ ಪೀಠವು ವ್ಯಭಿಚಾರವನ್ನು ಅಪರಾಧವಲ್ಲ ಎಂದಿದೆಯೇ ವಿನಾ ಅದೊಂದು ಸಹಜ ಸಾಮಾಜಿಕ ನಡೆ ಎಂದು ಹೇಳಿಲ್ಲ. ಅದೊಂದು ತಪ್ಪುನಡೆ ಎಂದೇ ತಿಳಿಸಿದೆ. ವಿಚ್ಛೇದನಕ್ಕೆ ಪ್ರಮುಖ ಕಾರಣವೆಂದೇ ಪರಿಗಣಿಸಿದೆ.

ಹಾಗಿದ್ದೂ, ಸಂಸ್ಕೃತಿ ನಾಶದ ಭಯಕ್ಕೊಳಗಾಗುವವರ ಅಭಿಪ್ರಾಯವೇನು? ಹೆಣ್ಣು, ಗಂಡಿನ ಅಧೀನಳಾಗಿರುವುದರಿಂದಲೇ ಸಂಸ್ಕೃತಿಯ ಸಂವರ್ಧನವಾಗುತ್ತದೆಯೇ? ಮದುವೆ ಎಂದರೆ ಅವಳ ದೇಹ-ಮನಸ್ಸುಗಳ ಮೇಲೆ ಅವನ ಹಕ್ಕು ಸ್ಥಾಪಿತವಾಗುವುದೇ? ಏಕೆಂದು ಬೇಕೆಂದು ಸಾಕೆಂದು ನೂಕೆಂದು ರಮಿಸಲಾಡುವ ಅವನ ಸುಪರ್ದಿಗೆ ಅವಳು ಬರಿದೇ ತನ್ನನ್ನು ಒಪ್ಪಿಸಿಕೊಂಡರೆ ಸಾಕೇ? ಹೆಣ್ಣೂ ಗಂಡಿನಂತೆ ಸ್ವತಂತ್ರ ವ್ಯಕ್ತಿ ಎಂದು ತಿಳಿಯುವುದರಿಂದ ಕುಟುಂಬ ರಚನೆಗಳು ದುರ್ಬಲವಾಗಿ ಬಿಡುತ್ತವೆಯೇ? ಅವಳನ್ನು 'ಪ್ರಸಾದ ಕಾಯ'ವಾಗಿ ಅರ್ಪಿಸುವ ಅಧಿಕಾರ ಕೇಂದ್ರವನ್ನು ತಡೆಯುವುದು ಬೇಡವೇ? ಅವಳನ್ನು ಶಂಕಿಸುವ, ಕೊಲೆಗೈಯುವ, ತ್ಯಜಿಸುವ ಅದೆಷ್ಟು ಕಥನಗಳೂ ನಮ್ಮ ಸಂವೇದನೆಯನ್ನು ತಾಕಲಾರವೇ? 'ಹೆಂಡತಿಯ ಶೀಲ ಶಂಕೆಗೆ' – ಆದಿಮ ಮಹಾಕಾವ್ಯಗಳ ಕಾಲದಿಂದಲೂ ದಾಖಲೆಗಳು ಇರುವಾಗ; ಗಂಡು ಮಾಡುವ ಕ್ರೌರ್ಯವನ್ನು ಹೆಣ್ಣುಗಳೂ ನಡೆಸುತ್ತ ಅದನ್ನೇ ಸಮಾನತೆ ಎಂದು ತಪ್ಪು ತಿಳಿಯುತ್ತಿರುವಾಗ – ಸಮಾನತೆಯ ಮರುನಿರ್ವಚನದ ಅಗತ್ಯವಿದೆಯಲ್ಲವೇ? ವ್ಯಭಿಚಾರವು ಕುಟುಂಬ ವ್ಯವಸ್ಥೆಯನ್ನು ದುರ್ಬಲಗೊಳಿಸುತ್ತದೆ ಎನ್ನುವುದಕ್ಕಿಂತ ಅದು ದುರ್ಬಲ ಕುಟುಂಬ ವ್ಯವಸ್ಥೆಯ ಫಲಿತವಾಗಿರುತ್ತದೆ ಎಂಬ ನ್ಯಾಯಮೂರ್ತಿಗಳ ಅಭಿಪ್ರಾಯವನ್ನು ಗಮನಿಸಬೇಕಿದೆ. 'ನನ್ನ ದೇಹ, ನನ್ನ ಹಕ್ಕು' ಎಂಬ ಸ್ತ್ರೀವಾದದ ಹಕ್ಕೊತ್ತಾಯಕ್ಕೆ ಕಾನೂನಾತ್ಮಕ ಬೆಂಬಲ ದೊರೆಯುವುದು, ಹೆಣ್ಣನ್ನು ವ್ಯಕ್ತಿಯಾಗಿ ಕಾಣುವ ಹೊಸ ಕಣ್ಣೋಟವನ್ನು ಕೊಡಬಲ್ಲದು. ಹೆಣ್ಣನ್ನು ವಂಶ ಮುನ್ನಡೆಯ ಪ್ರಯೋಗಭೂಮಿಯಾಗಿಸಿದ ಯಾಜಮಾನ್ಯತೆಯ ಆಟಕ್ಕೆ ತಡೆಯಾಗಬಲ್ಲದು. ನಾವೀಗ ಬಾಳುತ್ತಿರುವ ಪಿತೃಹಿತಾಸಕ್ತ ಸಮಾಜದ ಬಾಗು ಬಳಕುಗಳಿಗೆ ಹೊಂದಿಕೊಳ್ಳುತ್ತ ಕುಟುಂಬಕ್ಕಾಗಿ ಹೆಣ್ಣು ತನ್ನ ಪ್ರತಿಭೆ ವ್ಯಕ್ತಿತ್ವಗಳನ್ನೆಲ್ಲ ಅಡವು ಇಟ್ಟು ಬದುಕುವ ಅನಿವಾರ್ಯತೆಯೂ ಕಡಿಮೆಯಾಗಬಹುದು. ನಾನು ಗಂಡು, ಹೇಗೆ ವರ್ತಿಸಿದರೂ ನಡೆಯುತ್ತದೆಂಬ ಗಂಡುವರ್ಗದ ಅಹಂಕಾರವು ನಿರಸನಗೊಳ್ಳಬಹುದು. ಸುಖೀ ಕುಟುಂಬದ ಅಗತ್ಯಕ್ಕಾಗಿ ಹೆಣ್ಣನ್ನು ಆಳುವುದಲ್ಲ. ಹೆಣ್ಣಿನೊಂದಿಗೆ ಒಡಲುಗೊಂಡು ಬಾಳುವುದು ಎಂಬ ಅರಿವು ತಲೆಯೆತ್ತಬಹುದು. ಸಂಸ್ಕೃತಿ ಎಂದರೆ ಏಕಮುಖಿ ಚಲನೆಯಲ್ಲ. ಅದು ಸಮಸಮಾಜದ ವಿಸ್ತರಣೆಯ ಕಡೆ ಚಾಚಿಕೊಳ್ಳುವುದು. ಹೆಣ್ಣನ್ನು ಅಧೀನಳಾಗಿಯೇ ನೋಡುತ್ತ ಬಂದ ಸಿದ್ಧ ಕಣ್ಣೋಟವು ಚಲನೆಯನ್ನು ದಮನಿಸುತ್ತದೆ. ಅವಳ ಲೈಂಗಿಕ ಆಯ್ಕೆಗೆ, ಆಸ್ತಿಯ ಹಕ್ಕಿಗೆ ಮರ್ಯಾದಾಹತ್ಯೆಯ ಸಿದ್ಧ ಉತ್ತರವಿರುವಾಗ ಅದೊಂದು ಸಹಜ ಜೀವನಕ್ರಮವಾಗಿ ರೂಢಿಯಾಗಿರುವಾಗ, ಸುಪ್ರೀಂ ಕೋರ್ಟು ಹೆಣ್ಣಿನ ವ್ಯಕ್ತಿಗೌರವವನ್ನು ಪ್ರತಿಪಾದಿಸಿರುವುದು ಅತ್ಯಂತ ಮೌಲಿಕವಾದದ್ದು. ಹೆಣ್ಣು ಮಗುವಿಗೆ ಕುಂಟಾಬಿಲ್ಲೆ ಆಡಿಸುತ್ತ, 'ಗೆರೆ ದಾಟಿದರಲ್ಲ, ತುಳಿದರೂ ಔಟು' ಎಂದು ಬೆಳೆಸುವವರಿಗೆ... ಆಟದ ನಿಯಮಗಳನ್ನೇ ಬದಲಿಸುವ ಸಮಸಂಸ್ಕೃತಿಯ ಹೊಸ ಪಠ್ಯವನ್ನು ಕಲಿಸಬೇಕಿದೆ.

ಡಾ॥ ವಿನಯಾ ಒಕ್ಕುಂದ
'ನೆಮ್ಮದಿ', 124, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - 3




ನವಕರ್ನಾಟಕ ಪ್ರಕಾಶನದ ನಾಲ್ಕು ಕೃತಿಗಳನ್ನು ದಿನಾಂಕ ೨೫-೯-೨೦೧೮ರಂದು ಮೈಸೂರಿನ ರೋಟರಿ ಸಭಾಂಗಣದಲ್ಲಿ ಶ್ರೀ ಜಿ. ಎಸ್. ಜಯದೇವ ಅವರು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಶ್ರೀ ಎನ್. ಕೆ. ಸತ್ಯನಾರಾಯಣ, ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ, ಶ್ರೀ ಬೇದ್ರೆ ಮಂಜುನಾಥ, ಶ್ರೀ ಎ. ರಮೇಶ ಉಡುಪ ಅವರು ಉಪಸ್ಥಿತರಿದ್ದರು.



ಮನೆಯಲ್ಲಿ ಪ್ರತಿದಿವಸ ಪ್ರತಿಕ್ಷಣ ಜಗಳ, ನಿಂದೆ, ಬಿಂದುವಿಗೆ ಗಂಡನಿಂದ ಅವಮಾನ. ಅದೊಂದು ಬಗೆಯ ಹಿಂಸೆಯೆನಿಸಿತು ಬಿಂದುವಿಗೆ. ಬಿಂದು ತಿಳಿದೋ ತಿಳಿಯದೆಯೋ ಮುಂದುವರಿದಿದ್ದಕ್ಕೆ ಇಂಥ ಮಾನಸಿಕ ತಲ್ಲಣ, ಹಿಂಸೆಯ ಅಸ್ತ್ರಗಳು ಅವಳನ್ನು ಹಿಂಸಿಸುತ್ತಿದ್ದವು. ಅವಳ ಧ್ವನಿ ಅವಳ ಮೌನದೊಳಗೇ ಮೌನವಾಗುಳಿಯಿತು. ನಿರುತ್ತರವೇ ಅವಳ ಪ್ರತಿಕ್ರಿಯೆಯಾಯಿತು. ಅವಳ ಮೌನವನ್ನು ಸಹಿಸದ ಮಾಧವ, "ಈ ಪಾಪದ ಪಿಂಡವನ್ನು ಕಿತ್ತಿ ಬಿಸಾಕು" ಎಂಬ ಕೊಂಕು ಬಿರುನುಡಿಗೆ ಅಕ್ಷರಶಃ ಕಣ್ಣೀರಾದ ಬಿಂದು ಗಂಡನ ಚಾಟಿ ಮಾತಿನ ರಭಸದ ಪೆಟ್ಟು ತಡೆಯದಾದಳು.



# ಬಿಂದು ಗೆರೆಯಾಗಿ, ವೃತ್ತವಾಗಿ ಆವೃತ್ತದೊಳಗೊಂದಾಗಿ...

ತಿಂಗಳ ಕಥೆ

**ವೆಂಕಟೇಶ ಕೆ. ಜನಾದ್ರಿ, ಕನಕಗಿರಿ**

ಅದೊಂದು ರವಿವಾರ ಮಧ್ಯಾಹ್ನ ಊಟದ ನಂತರ ಹಾಗೇ 'ಹೊಸತು' ಪತ್ರಿಕೆ ಓದುತ್ತಾ ಮನೆಯ ಮುಂಬಾಗಿಲತ್ತ ಕುಳಿತಿದ್ದ ಮಧುಕರ. ಕಲ್ಯಾಣಪುರದ ಬಿರುಬೇಸಿಗೆಯ ಬಿಸಿಲಿಗೆ ಬಸವಳಿದಂತಾಗಿ ಸೃಜನಶೀಲ ಬರಹವೊಂದನ್ನು ಓದುತ್ತಿದ್ದರೂ ತನ್ನ ಮೈ ಬೆವರ ಕಿರಿಕಿರಿಗೆ ಬೇಸರವೆನಿಸಿ ಹಾಗೆಯೇ ಸುತ್ತಾಡುತ್ತಲಿದ್ದ. ಮನೆಯ ಮುಂದಿನ ರಸ್ತೆಯ ಇನ್ನೊಂದು ಬದಿಯಲ್ಲಿದ್ದ ಎದುರಿನ ಮನೆಯ ಮೇಲ್ಭಾಗಕ್ಕೆ ಅವನಿಗರಿವಿಲ್ಲದಂತೆಯೇ ಅವನ ಚಿತ್ತ ಚಲಿಸಿತು. ಸೌಂದರ್ಯವೇ ನಾಚಿಕೊಳ್ಳುವಂಥ, ಬೆಳದಿಂಗಳೇ ಮುದುಡಿಕೊಳ್ಳುವಂಥ ಸುಂದರ ಮೊಗದ ಬಿಂದು ಸಹ ತನ್ನ ಮನೆಯ ಮೇಲಂತಸ್ತಿನ ಅಂಚಿನಿಂದ ಭಾರವಾದ ಹೊಟ್ಟೆ ಹೊತ್ತು ಮೆಲ್ಲಮೆಲ್ಲಗೆ ಓಲಾಡುತ್ತ ತಿರುಗಾಡುತ್ತಿರುವುದು ಮಧುಕರನ ಗಮನಕ್ಕೆ ಬಂತು. ಮತ್ತಷ್ಟು ಕುತೂಹಲದಿಂದ ನೋಡಿದ.

ಮಧುಕರನ ಮನ ಎಂಟ್ಹತ್ತು ವರ್ಷಗಳ ಹಿಂದಕ್ಕೆ ಸರಿಯಿತು. ಅವೆಲ್ಲವೂ ಮಧುರ ನೆನಪಿನ ಕ್ಷಣಗಳಷ್ಟೇ ಎಂದು ತನ್ನ ತಲೆಯೊಳಗೆ ತೂರಿಕೊಂಡ ವಿಚಾರಗಳನ್ನು ತಳ್ಳಿಬಿಟ್ಟು ಮತ್ತೆ 'ಹೊಸತು' ಪತ್ರಿಕೆಯನ್ನು ಓದಲು ತೊಡಗಿದ. ಹತ್ತಾರು ನಿಮಿಷ ಕಳೆದರೂ ಬಿಂದು ಇನ್ನೂ ಸುತ್ತಾಡುತ್ತಲೇ ಇದ್ದಳು. ಇವಳಿಗೇನಾಗಿದೆ. ಏಳೆಂಟು ತಿಂಗಳ ತುಂಬು ಗರ್ಭಿಣಿ. ಅದು ಇಂಥ ಬಿಸಿಲಿನ ತಾಪದಲ್ಲಿ ಮನೆಯ ಮೇಲೆ ಹೀಗೆ ಸುತ್ತಾಡುತ್ತಿದ್ದಾಳಲ್ಲ ಎಂಬ ಸಹಜ ಬೆರಗು ಮಧುಕರನದ್ದು. ಓರೆನೋಟದಲ್ಲಿ ಮತ್ತೊಮ್ಮೆ ನೋಡಿದಾಗ ಬಿಂದು ಸಹ ತನ್ನನ್ನು ಗಮನಿಸುತ್ತಿದ್ದದ್ದು ತಿಳಿಯಿತು. ಆದರೆ ಈಗ ಆಕೆಯನ್ನು ತಾನು ಹೆಚ್ಚಿಗೆ ಗಮನಿಸಲು ಸಾಧ್ಯವಿಲ್ಲವೆಂಬ ಅಸಹಾಯಕತೆ ಆತನನ್ನು ಎಚ್ಚರಿಸಿತ್ತು. ಇತ್ತೀಚೆಗೆ ಬಿಂದು ಬಗ್ಗೆ ಒಂಥರಾ ಅನುಕಂಪ. ಅವಳೆಂದರೆ ಮಧುಕರನಿಗೆ ವಿಶಿಷ್ಟ ಅನುಭೂತಿ. ಹೇಳಿಕೊಳ್ಳಲಾಗದಂಥ ಆಪ್ಯಾಯಮಾನತೆ. ಆಕೆಯ ಕುರಿತು ಒಂದು ಕಾದಂಬರಿಯನ್ನೇ ಬರೆದುಬಿಡಬಹುದಾದಷ್ಟು ವಿಚಾರಗಳ ವಿಷಯಗಳು ಆತನ ಮನದಲ್ಲಿ ತಾಕಲಾಟ ನಡೆಸುತ್ತಿದ್ದವು. ಬೇಡವೆಂದರೂ ಬಿಂದುವಿನತ್ತ ಮತ್ತೆ ಗಮನಿಸಿದಾಗ ಭಾರವಾದ ಹೊಟ್ಟೆಯನ್ನು ಹೊತ್ತು ತಿರುಗಾಡುತ್ತಿರುವುದು ನಡೆದೇ ಇತ್ತು. "ರೀೀೀ.. ಎಲೆ ಅಡಿಕೆ ಹಾಕಿಟ್ಟಿರುವೆ ತಗೊಳ್ಳಿ" ಎಂದು ಅವನ ಮಡದಿ ಮಾಲತಿ ಒಳಗಿನಿಂದ ಕರೆದಾಗಲೇ ತನ್ನ ಮನೆಯೊಳಗೆ ಮಧುಕರನ ಗಮನ ಸರಿಯಿತು. ಮಾಲತಿ ಕೊಟ್ಟ ಪಾನ್ ಬಾಯಿಗಿರಿಸಿಕೊಂಡು ಮೆಲ್ಲಗೆ ಮೆಲ್ಲುತ್ತ ಮತ್ತೆ 'ಹೊಸತು' ಪತ್ರಿಕೆಯ ಓದಿನಲ್ಲಿ ಮಗ್ನನಾದ.

ಮುಂಬಾಗಿಲಿನ ಒಳಭಾಗದಲ್ಲಿಯೇ ಕುಳಿತಿದ್ದ ಮಧುಕರನಿಗೆ ಇದ್ದಕ್ಕಿದ್ದಂತೆ "ಧೊಪ್" ಎಂಬ ಶಬ್ದ ರಸ್ತೆ ಎದುರು ಮನೆಯಿಂದ ಕೇಳಿಸಿತು. ಏನೆಂದು ಹೊರಬಂದು ನೋಡಿದಾಗ ಬಿಂದು ಮನೆಯ ಮೇಲಿನಿಂದ ಕೆಳಕ್ಕೆ ಬಿದ್ದುಬಿಟ್ಟಿದ್ದಾಳೆ. ಮಧ್ಯಾಹ್ನದ ನಿದ್ರೆಯ ಸಮಯವಾದ್ದರಿಂದ ರಸ್ತೆಯಲ್ಲಿ ತಿರುಗಾಡುವವರಿಲ್ಲದ ನಿರ್ಜನ ಸಮಯ. ಆಕೆ ಬಿದ್ದ ಶಬ್ದಕ್ಕೆ ಮಧುಕರ ಮತ್ತು ಅಕ್ಕಪಕ್ಕದ ಮನೆಯಿಂದ ಕೆಲವರು ಹೊರ ಬಂದು ಬಿಂದುವಿನ ಮನೆಯತ್ತ ಧಾವಿಸುತ್ತಿದ್ದರು. ಮಧುಕರ ನೇರವಾಗಿ ಅವರ ಮನೆಯ ಕಂಪೌಂಡಿನೊಳಕ್ಕೆ ಹೋದ. ಆತನ ಹೃದಯವೇ ಬಾಯಿಗೆ ಬಂದಂತಾಗಿತ್ತು. ಬಿಂದು ರಕ್ತದ ಮಡುವಿನಲ್ಲಿ ಒದ್ದಾಡುತ್ತಿದ್ದಳು. ಹೊಟ್ಟೆಯಲ್ಲಿದ್ದ ಮಗುವಿನೊಂದಿಗೆ ಮನೆಯ ಮೇಲಿನಿಂದ ಕೆಳಕ್ಕೆ ಬಿದ್ದಾಗ ಆಕೆಯ ಸ್ಥಿತಿ ಏನಾಗಿರಬೇಡ! ಮಧುಕರನಿಗೆ ಕರುಳು ಕಿತ್ತು ಬಂದಂತಾಯಿತು. ನೆರೆದವರೆಲ್ಲರೂ ಸೇರಿ ಒದ್ದಾಡುತ್ತಿದ್ದ ಬಿಂದುಳನ್ನು ಆಸ್ಪತ್ರೆಗೆ ಸಾಗಿಸಲು ನೆರವಾದರು. ಆ್ಯಂಬುಲೆನ್ಸ್‌ನಲ್ಲಿ ಒಂದಿಬ್ಬರು ಮಹಿಳೆಯರು ಮತ್ತು ಬಿಂದುವಿನ ಗಂಡ ಮಾಧವ ಮತ್ತು ಆತನ ಪಕ್ಕದಲ್ಲಿ ಮಧುಕರ ಕುಳಿತರು. ಆತಂಕಕಾರಿಯಾಗಿ ವಿಚಿತ್ರ ಸದ್ದು ಮಾಡುತ್ತ ಸಾಗಿದ್ದ ಆ್ಯಂಬುಲೆನ್ಸ್ ಮಧುಕರ ಮತ್ತು ಮಾಧವರಲ್ಲಿ ಮತ್ತಷ್ಟು ಆತಂಕವನ್ನು ಸೃಷ್ಟಿಸಿತ್ತು.

ಬಿಂದುವನ್ನು ಆಸ್ಪತ್ರೆಯಲ್ಲಿ ಸೇರಿಸಿದ ನಂತರ ಚಿಕಿತ್ಸೆ ಶುರುವಾಯಿತು. ಬಿಂದು ಬದುಕುವುದೇ ಕಷ್ಟ ಎಂಬ ತಲ್ಲಣದಲ್ಲಿದ್ದರು. ಹಲವಾರು ತಾಸುಗಳ ಚಿಕಿತ್ಸೆಯ ನಂತರ ಬಿಂದುವಿನ ಹೊಟ್ಟೆಯೊಳಗಿದ್ದ ಗಂಡುಮಗು ಹೊರಬಂದದ್ದಷ್ಟೇ ಆದರೆ ಪ್ರಪಂಚ ನೋಡುವ ಮುಂಚೆಯೇ ಅದು ಕಾರ್ಗತ್ತಲೆಯತ್ತ ಸಾಗಿಬಿಟ್ಟಿತ್ತು. ಮಗುವಿನ ಪಂಚಮಹಾಭೂತಗಳು ಅನಾವರಣಗೊಳ್ಳುವುದರೊಳಗೇ ಮತ್ತೇ ಪಂಚಮಹಾಭೂತದಲ್ಲಿ ಆ ಮಗು ಲೀನವಾಗಿತ್ತು. ಆದರೆ ಆಶ್ಚರ್ಯವೆನ್ನುವಂತೆ ಬಿಂದು ಅದ್ಹೇಗೋ ಬದುಕುಳಿದಿದ್ದಳು. ಆಸ್ಪತ್ರೆಯಿಂದ ಚಿಕಿತ್ಸೆಯ ಪ್ರಕ್ರಿಯೆಯೆಲ್ಲ ಮುಗಿದು

ಹಲವಾರು ದಿವಸಗಳ ನಂತರ ಮನೆಗೆ ಬಂದ ಬಿಂದುವನ್ನು ನೋಡಿದವರಿಗೆ ಕರುಳು ಕಿವುಚಿದಂತಾಗುತ್ತಿತ್ತು. ಅವಳು ನಡೆದಾಡುವಾಗ ಒಂದು ಕಾಲು ಮಾತ್ರ ನಿಯಂತ್ರಣ ತಪ್ಪಿ ಓಲಾಡುತ್ತಿರುವಂತೆ ನೋಡುಗರಿಗೆ ಭಾಸವಾಗುತ್ತಿತ್ತು. ಬಿಂದುವಿನ ಬದುಕಿನ ನಿಯಂತ್ರಣವೇ ಕೈ ತಪ್ಪಿದ್ದಾಗ ಕಾಲಿನ ನಿಯಂತ್ರಣ ಅದಾವ ಲೆಕ್ಕ? ಭೌತಿಕ ಮತ್ತು ಮಾನಸಿಕ ಯಾತನೆಗೆ ಆಕೆಯ ಮುಖದಲ್ಲಿದ್ದ ಬೆಳದಿಂಗಳಿನಂಥ ಬೆಳಕಿನ ಕಾಂತಿಯೂ ಒಂದಿಷ್ಟು ಕುಂದಿತ್ತು.

ಮನೆಗೆ ಬಂದ ಬಿಂದುವಿನ ಬದುಕು ಮತ್ತೆ ಯಥಾಪ್ರಕಾರ ಆಕೆಯ ಗಂಡ ಮಾಧವನೊಡನೆ ಆಕೆಯ ಸಂಸಾರದ ಚಕ್ರ ಸಾಗಿತ್ತು. ಮಧುಕರ ಆಕೆಯ ಮನೆಯ ಎದುರಿಗೇ ಇದ್ದರೂ ಒಂದು ಕಾಲಕ್ಕೆ ಆಕೆಯ ಬದುಕಿನ ಭಾಗವಾಗಿದ್ದ ಮಧುಕರ ಈಗ ಕೇವಲ ಸಾಮಾನ್ಯ ವೀಕ್ಷಕ. ಅದೊಂದು ದಿನ ಬಿಡುವಾಗಿದ್ದ ಮಧುಕರನಿಗೆ ಬೇಡಬೇಡವೆಂದರೂ ಹಳೆಯ ನೆನಪುಗಳು ಮರುಕಳಿಸಿದವು.

✶ ✶ ✶

ಅದೊಂದು ಸುಂದರ ಕಾಲ. ಮಧುಕರನ ಮನೆಯ ಎದುರಿನ ಮನೆಯಲ್ಲಿಯೇ ಮಾಧವ ಮತ್ತು ಬಿಂದು ನವದಂಪತಿಗಳಾಗಿ ಬದುಕಿನ ಬಂಡಿಯನ್ನು ನಡೆಸಲು ಪ್ರಾರಂಭ ಮಾಡಿದ್ದರು. ಅದಾಗಲೇ ಮಧುಕರನಿಗೆ ಮದುವೆಯಾಗಿ ಒಂದು ವರ್ಷ ಕಳೆದಿತ್ತು. ಈ ಹೊಸ ಸಂಸಾರ ತಮ್ಮ ಮನೆಯ ಎದುರಿನ ಅವರ ಸ್ವಂತ ಮನೆಯಲ್ಲಿ ನೆಮ್ಮದಿಯಿಂದ ಬದುಕಿದ್ದರು. ಮನೆಯಲ್ಲಿ ಮಾಧವನ ವಯಸ್ಸಾದ ತಂದೆ ಮಾತ್ರ ಇದ್ದರು. ಸದಾ ಮಾಧವ ಮತ್ತು ಬಿಂದು ಸುಂದರವಾಗಿ ಅಲಂಕರಿಸಿಕೊಂಡು ಪರಸ್ಪರರು ಜೊತೆಯಾಗಿ ಸಿನಿಮಾ, ದೇವಸ್ಥಾನವೆಂದು ಸುತ್ತಾಡುತ್ತಾ ಹಾಯಾಗಿದ್ದ ನವ ದಂಪತಿಗಳ ಮಧುಚಂದ್ರ ಬೆಳದಿಂಗಳ ಹಾಲಲ್ಲಿ ಜೇನನ್ನು ಬೆರೆಸಿ ಮಧುರ ಭಾವವನ್ನು ಅವರ ಬದುಕಿನಲ್ಲಿ ಸ್ಫುರಿಸಿತ್ತು. ಆದರೆ ಈ ಮಧುರ ಭಾವ ಮಧುರ ಯಾತನೆಯಾಗಲು ಬಹಳ ದಿನ ಕಳೆಯಲಿಲ್ಲ. ಅವರ ಮದುವೆಯಾಗಿ ಮೂರ್‍ನಾಲ್ಕು ವರ್ಷವಾದರೂ ಬಿಂದು ತಾಯಿಯಾಗುವ ಯಾವ ಲಕ್ಷಣಗಳೂ ಕಾಣಲಿಲ್ಲ. ಬಿಂದು ಮಾಧವ ಪ್ರತಿದಿನವೂ ಮಧುರಮಿಲನದ ಸುಖದಲ್ಲಿ ಸವಿಗಾನವಾಡುತ್ತಿದ್ದರೂ, ಇಬ್ಬರ ಮಧ್ಯೆಯೂ ಸಮರ್ಥವಾದ ದೈಹಿಕ ಸಂಬಂಧ ಅನುರಣನವಾಗುತ್ತಾ ಎಲ್ಲವೂ ಸರಿಯಾಗಿದ್ದಾಗ ತಮಗೇಕೆ ಮಕ್ಕಳಾಗುತ್ತಿಲ್ಲವೆಂದು ಆತಂಕದಲ್ಲಿದ್ದ ಮಾಧವ ಮತ್ತು ಬಿಂದು ಆಸ್ಪತ್ರೆಗೆ ತೆರಳಿ ಪರೀಕ್ಷೆ ಮಾಡಿಕೊಂಡಾಗ ಮಾಧವನಲ್ಲಿಯೇ ಸಮಸ್ಯೆ ಇರುವುದು ವೈದ್ಯರಿಂದ ತಿಳಿಯಿತುತ್ತದೆ.

ಮಾಧವನಿಗೆ ಮಾನಸಿಕ ಆಘಾತದ ಅನುಭವ ವಾದರೆ, ಬಿಂದುಗೆ ತನ್ನದಲ್ಲದ ತಪ್ಪಿಗೆ ಬಂಜೆ ಎಂಬ ಶರಪಂಜರದಲ್ಲಿ ಸಿಲುಕಿಕೊಳ್ಳಬೇಕಲ್ಲವೇ ಎಂಬ ಆತಂಕ, ಜೊತೆಗೆ ತನ್ನ ದಾಂಪತ್ಯದ ಬದುಕು ಸತ್ಪಾತ್ರದಿಂದ ವಂಚಿತವಾಗುವುದಲ್ಲವೇ ಎಂಬ ನೋವು

**ಅಭಿನಂದನೆ.....**

ಡಾ॥ ಕೋಟ ಶಿವರಾಮ ಕಾರಂತರ ಹೆಸರಿನಲ್ಲಿ ನೀಡಲಾಗುವ ೨೦೧೮ನೇ ಸಾಲಿನ 'ಕಾರಂತ ಪ್ರಶಸ್ತಿ'ಯು ಕವಿ ಡಾ॥ ಬಿ. ಎ. ಸನದಿ ಅವರಿಗೆ ಲಭಿಸಿದೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.

ಆಕೆಯನ್ನು ತಿವಿಯುತ್ತಿತ್ತು. ಸುತ್ತಲಿನವರ ಬಂಜೆಯೆಂಬ ತಿವಿತದ ಮಾತುಗಳಿಗೆ ತಾನು ಆಹಾರವಾಗಬೇಕೇ ಎಂಬ ಆತಂಕದ ನೋವು ಆಕೆಯನ್ನು ಬಾಧಿಸುತ್ತಿತ್ತು. ಈ ನೋವನ್ನು ತನ್ನ ಮೌನದೊಳಗಣ ಕತೆಯನ್ನಾಗಿಸಿಕೊಂಡು ಆಕೆಯಾದರೂ ಎಷ್ಟು ದಿನ ಇಂಬಿಟ್ಟುಕೊಂಡಾಳು? ತನ್ನದಲ್ಲದ ತಪ್ಪಿಗೆ ಆಕೆಯ ಮೌನ ಕತೆಯಾಗಿ ಅನಾವರಣಗೊಳ್ಳಲು ತವಕಿಸುತ್ತಿತ್ತು.

ಮಾಧವ, ಬಿಂದು ಚಿಂತೆಗೊಳಗಾದರು. ಚಿಂತೆಯೇ ಅವರನ್ನು ಆಪೋಶನ ತೆಗೆದುಕೊಂಡಿತ್ತು. ಮೂಲತಃ ಸಂಪ್ರದಾಯಸ್ಥ ಮನೆತನ ಅವರದ್ದು. ಬಿಂದುಗೆ ಮಕ್ಕಳಾಗದೇ ಬಂಜೆ ಎನ್ನಿಸಿಕೊಳ್ಳುವದನ್ನು ಸಹಿಸಿಕೊಳ್ಳದಾಗದ ಮಾಧವ ಯೋಚಿಸಿದ. ಒಂದು ವೇಳೆ ಬೇರೊಬ್ಬಳನ್ನು ಮದುವೆಯಾದರೂ ತನ್ನಲ್ಲೇ ದೋಷವಿರುವ ಕಾರಣ ಅವಳಿಗೂ ಮಕ್ಕಳಾಗದಿರುವುದು ಖಚಿತವೆಂದು ತಿಳಿದ ನಂತರ ಬಿಂದುವಿನೊಂದಿಗೆ ಸಮಾಲೋಚಿಸಿದ. ಅವಳೊಳಗಣ ಮೌನದ ಕತೆಗೆ ಬಣ್ಣದ ಆವರಣ ರೂಪಿಸಲು ಯೋಚಿಸಿದ. ಒಂದೆಡೆ, ಕೌಟುಂಬಿಕ ಆತಂಕ, ದಾಂಪತ್ಯದಲ್ಲಿ ಅಸಮತೋಲನ ಮತ್ತೊಂದೆಡೆ ಸಾಮಾಜಿಕವಾಗಿ ಅವಹೇಳನಕ್ಕೆ ಈಡಾಗಬೇಕಾಗ ಬಹುದೆಂದು ಚಿಂತಿತನಾದ. ಈ ವಿಷಯದಲ್ಲಿ ಬಿಂದು ಅಸಹಾಯಕಳು. ಕೇವಲ ಪ್ರಶ್ನಾರ್ಥಕವೇ ಅವಳ ಮುಂದೆ ಉಳಿಯಿತು. ಈ ಆತಂಕದ ಸಮಸ್ಯೆಯನ್ನು ಹೇಗೆ ಪರಿಹರಿಸಿಕೊಳ್ಳಬೇಕೆಂಬ ಧಾವಂತದಲ್ಲಿದ್ದಾಗ ಮಾಧವನಿಗೆ ತಕ್ಷಣಕ್ಕೆ ನೆನಪಾದದ್ದು ಸ್ನೇಹಿತ ಮಧುಕರ.

ಹೌದು, ಮಧುಕರ ಮಾಧವನಿಗೆ ಆಪ್ತ ಸ್ನೇಹಿತನಷ್ಟೇ ಅಲ್ಲ ತಮ್ಮ ಕುಟುಂಬದಲ್ಲಿ ಒಬ್ಬನಾಗಿದ್ದ. ಒಡನಾಡಿಯಾಗಿದ್ದ ಪ್ರತಿಯೊಂದು ವಿಷಯವನ್ನು ಈ ಎರಡೂ ಕುಟುಂಬಗಳು ಚರ್ಚಿಸಿ ನಿರ್ಧರಿಸುತ್ತಿದ್ದರು. ರಜೆಯಲ್ಲಿ ಹೊರಗಡೆ ತಿರುಗಾಡಲು, ಪುಟ್ಟ ಪ್ರವಾಸ ಕೈಕೊಳ್ಳಲು ಸಹ ಪರಸ್ಪರರು ಚರ್ಚಿಸಿ ಯೋಚಿಸಿ, ಯೋಜಿಸುತ್ತಿದ್ದರು. ಮಧುಕರನ ಮಡದಿ ಮಾಲತಿಯೂ ಸಹ ಅನ್ಯೋನ್ಯವಾಗಿ ಸಹಕರಿಸುತ್ತಿದ್ದಳು. ಒಟ್ಟಾರೆ ಈ ಎರಡೂ ಜೋಡಿಗಳು ಒಳ್ಳೆಯ ಬಾಂಧವ್ಯವನ್ನು ಹೊಂದಿದ್ದರು. ಇವರದ್ದು ಒಂದು ಆಪ್ತ ವೃತ್ತ.

ಹೀಗಿರುವಾಗೊಮ್ಮೆ ಮಾಧವ ಮಧುಕರನೊಡನೆ ವಾಯುವಿಹಾರಕ್ಕೆಂದು ಹೋದಾಗ ತನ್ನ ಮತ್ತು ಬಿಂದುವಿನ ದಾಂಪತ್ಯದ ವಿಷಯ ಕುರಿತು ಚರ್ಚಿಸುತ್ತಾನೆ. ವೈದ್ಯರು ತಮಗೆ ಮಕ್ಕಳಾಗದಿರುವ ವಿಷಯ ಕುರಿತು ವಿವರಿಸುತ್ತಾನೆ. ಅದೆಲ್ಲವನ್ನು ಕೇಳಿಸಿಕೊಂಡ ಮಧುಕರ, "ಸರಿ ಮಾಧವ, ಈ ವಿಷಯದಲ್ಲಿ ನಾನೇನು ಸಹಾಯ ಮಾಡಬೇಕೆಂದು ಹೇಳು" ಎನ್ನುತ್ತಾನೆ. ಆಗ ಮಾಧವ, ಈ ವಿಷಯ ನಿನಗೆ ಹೇಗೆ ಹೇಳಬೇಕೆಂದು ತೋಚುತ್ತಿಲ್ಲ ಆದರೂ ನೀನೊಬ್ಬ ಆಪ್ತ ಗೆಳೆಯನೆಂಬ ಕಾರಣಕ್ಕೆ ನಿಸ್ಸಂಕೋಚವಾಗಿ ಹೇಳುತ್ತೇನೆ. ಆದರೆ ನನ್ನ ಮಾತು ಕೇಳಿದ ನಂತರ ನೀನು ನಿರಾಕರಿಸದೇ ನನ್ನ ಪ್ರಸ್ತಾವನೆಯನ್ನು ಒಪ್ಪಿಕೊಳ್ಳಬೇಕು ಎನ್ನುತ್ತಾನೆ. "ಅದೇನು ವಿಷಯ ಹೇಳು" ಎಂದು ಮಧುಕರ ಕೇಳುತ್ತಾನೆ.

ಆಗ ಮಾಧವ ಭಾರವಾದ ಧ್ವನಿಯಲ್ಲಿ ಹೇಳುತ್ತಾನೆ, "ನಮಗೆ ಮಕ್ಕಳಾಗದಿರುವ ವಿಷಯ ಸದ್ಯ ನಮ್ಮ ಮೂವರಿಗೆ ಮಾತ್ರ ತಿಳಿದಿದೆ. ನಮಗೆ ಮಕ್ಕಳಾಗದಿರುವುದಕ್ಕೆ ನಾನೇ ಕಾರಣವಾಗಿರುವುದ ರಿಂದ ಅನಾವಶ್ಯಕವಾಗಿ ಬಿಂದು ಬಂಜೆಯೆನಿಸಿ ಕೊಳ್ಳುವುದನ್ನು ನಾನು ಸಹಿಸಲಾರೆ. ಆಕೆ ಈ ಕಳಂಕ ಹೊತ್ತು ಬದುಕುವುದರ ಬದಲು ನೀನು ಅನ್ಯಥಾ ಭಾವಿಸದಿದ್ದರೆ, ನೀನು ಮನಸ್ಸು ಮಾಡಿದರೆ, ಬಿಂದುವಿನ ಮಡಿಲಿಗೊಂದು ಮಗುವನ್ನು ಕೊಡಬಲ್ಲೆ. ಈ ಧರ್ಮಸೂಕ್ಷ್ಮವನ್ನು ನೀನು ಅರ್ಥ ಮಾಡಿಕೊಳ್ಳುತ್ತೀಯೆಂದು ನಾನು ಭಾವಿಸಿರುವೆ. ದಯವಿಟ್ಟು ನನ್ನ ಈ ವಿಚಿತ್ರ ಕೋರಿಕೆಯನ್ನು ಈಡೇರಿಸು ಗೆಳೆಯಾ" ಎನ್ನುತ್ತಾನೆ.

ಮಾಧವನ ಈ ವಿಚಿತ್ರವಾದರೂ ಅನಿವಾರ್ಯತೆಯ ಕೋರಿಕೆ ಕೇಳಿದ ಮಧುಕರನಿಗೆ ದಿಗಿಲಾಗುತ್ತದೆ. "ಗೆಳೆಯ, ನನಗೊಂದಿಷ್ಟು ಸಮಯ ಕೊಡು. ಅದಿರಲಿ, ಈ ವಿಷಯ ಬಿಂದುವಿನೊಂದಿಗೆ ಚರ್ಚಿಸಿದ್ದೀಯಾ?" ಎನ್ನುತ್ತಾನೆ. "ಬಿಂದು ಮತ್ತು ನಾನು ಕೂಡಿಯೇ ಈ ನಿರ್ಧಾರ ಕೈಕೊಂಡಿದ್ದೇವೆ. ದಯವಿಟ್ಟು ನನ್ನ ಕೋರಿಕೆಯನ್ನು ನಿರಾಕರಿಸಬೇಡ" ಎನ್ನುತ್ತಾನೆ ಮಾಧವ. ಇಬ್ಬರೂ ಸರಿತಪ್ಪುಗಳ ಕುರಿತು ಚರ್ಚಿಸುತ್ತಾರೆ. ಮಹಾಭಾರತದ ಕಾಲದಲ್ಲಿಯೂ ನಿಯೋಗ ಪದ್ಧತಿಯಿಂದ ಮಕ್ಕಳನ್ನು ಪಡೆದ ಪ್ರಕರಣದವರೆಗೂ ಅವರಿಬ್ಬರೂ ಸುದೀರ್ಘವಾಗಿ ಚರ್ಚಿಸಿ ಮಂಥಿಸುತ್ತಾರೆ. ಮಧುಕರ ಸಹ ತುಂಬ ಯೋಚಿಸುತ್ತಾನೆ. ಬಿಂದು – ಮಾಧವರ ಅಸಹಾಯಕತೆ ಮತ್ತು ಸಮಾಜದ ದೃಷ್ಟಿಯಿಂದ ಬಂಜೆ ಎಂಬ ಶಬ್ದಕ್ಕೆ ಬೆದರಬೇಕಾಗುವ ಬಗ್ಗೆ ಯೋಚಿಸುತ್ತಾನೆ. ಈ ವಿಷಯ ನಾಲ್ಕನೆಯವರಿಗೆ ತಿಳಿಯದಂತೆ ಅವರಿಬ್ಬರೂ ಯೋಚಿಸುತ್ತಾರೆ. ಮಾಧವ ತನ್ನ ಸಹಾಯ ಕೇಳಿದ್ದೆಲ್ಲವೂ ಮಧುಕರನಿಗೆ ಒಂದರ್ಥದಲ್ಲಿ ಸರಿಯೆನಿಸಿದರೂ ತಾನು ಮಾನಸಿಕವಾಗಿ ಸಿದ್ಧನಾಗಬೇಕಾಗಿದ್ದರ ಕುರಿತು ತುಂಬ ಯೋಚಿಸಿ ಒಂದು ನಿರ್ಧಾರಕ್ಕೆ ಬರುತ್ತಾನೆ. ಈ ಬಗೆಗೆ ಗೆಳೆಯ ಮಾಧವನೊಂದಿಗೆ ಮಾತನಾಡಿ, ನಿಮ್ಮಿಬ್ಬರ ಬಯಕೆಯಂತೆ ನಿಮ್ಮಾಶಯ ಈಡೇರಿಸುತ್ತೇನೆ. ಆದರೆ ಈ ವಿಷಯ ನಮ್ಮ ಮೂವರಲ್ಲಿಯೇ ಗೌಪ್ಯವಾಗಿರ ಬೇಕು ಎಂದು ತಿಳಿಸಿ ತನ್ನ ಒಪ್ಪಿಗೆ ಸೂಚಿಸುತ್ತಾನೆ.

✶ ✶ ✶

ಪೂರ್ವನಿರ್ಧರಿತವಾದಂತೆ, ಒಂದು ದಿನ ಮಾಧವ



ಮತ್ತು ನಿರಾಳವಾಗಿ ಇತ್ಯರ್ಥವಾಗಿದ್ದ ಕಾರಣ ಈ ಮೂವರಲ್ಲಿಯ ಆತ್ಮೀಯತೆ ಮತ್ತಷ್ಟು ಆಪ್ತವಾಗಿ ಬೆಳೆಯಿತು. ಒಂದು ಆಪ್ತ ವಲಯ ವೃತ್ತವಾಗಿ, ಮೂವರನ್ನೊಳಗೊಂಡ ಆವೃತ್ತದೊಳಗೆ ಗಟ್ಟಿಯಾಗಿ ನೆಲೆಯೂರಿತ್ತು. ಗೌಪ್ಯ ಮೌನ ಕತೆಯಾಗಿ ಮೂವರನ್ನಾವರಿಸಿಕೊಂಡಿತ್ತು.

✶ ✶ ✶

ಇಷ್ಟೇ ಆಗಿದ್ದರೆ ಎಲ್ಲವೂ ಸುಸೂತ್ರವಾಗುತ್ತಿತ್ತೇನೋ ಆದರೆ ಒಂದೆರಡು ವರ್ಷಗಳ ನಂತರ ಮತ್ತೆ ಎರಡನೇ ಬಾರಿ ಬಿಂದು ಮೈದುಂಬಿಕೊಂಡು ಮತ್ತೊಂದು ಮಗುವಿನ ನಿರೀಕ್ಷೆಯಲ್ಲಿದ್ದಾಗ ಮಾಧವ ಅವಳ ಮೇಲೆ ಕಿಡಿ ಕಾರಿದ. "ನಮ್ಮಿಬ್ಬರಿಗೆ ಒಂದು ಮಗುವಾಗಿದ್ದರೆ ಸಾಕಾಗಿತ್ತು. ಮತ್ತೇ ಗರ್ಭಿಣಿಯಾಗುವ ಅವಶ್ಯಕತೆ ನಿನಗಿತ್ತೇ? ಈ ಬಾರಿಯ ಈ ಪಿಂಡ ಅದೇ ಮಧುಕರನ ಸಂಗದಿಂದಲೋ ಅಥವಾ ಮತ್ತಾವ ಮನ್ಮಥನ ಸರಸಸಲ್ಲಾಪದ ಫಲವೋ? ಹೀಗೆ ಅನೈತಿಕವಾಗಿ ಗರ್ಭಿಣಿಯಾಗುವ ಅವಶ್ಯಕತೆ ಏನಿತ್ತು? ಬಹುಶಃ ನಿನಗೆ ಇದೊಂದು ಚಟವೇ ಆಗಿದೆ" ಎಂದು ಬಿಂದುವನ್ನು ಪ್ರಶ್ನಿಸಿದಾಗ ಅವರ ದಾಂಪತ್ಯದ ಬದುಕಿನಲ್ಲಿ ವಿಷಮಯ ಗಾಳಿ ಬೀಸಲು ಆರಂಭವಾಗುತ್ತದೆ. "ನಮ್ಮಿಬ್ಬರಿಗೆ ಒಂದು ಮಗುವಾದರೆ ಸಾಕು ನಮ್ಮ ಕುಟುಂಬದ ಕುಡಿ ಮುಂದುವರಿಯುತ್ತದೆಂಬ ಕಾರಣಕ್ಕಾಗಿ ಮಧುಕರನ ಸಹಾಯ ಪಡೆಯಲು ಒಪ್ಪಿಕೊಂಡರೆ ನೀನು ಮಕ್ಕಳ ಭಾಗ್ಯದ ನೆಪದಲ್ಲಿ ಮಧುಕರನಂಥ ಪರಪುರುಷರೊಡನೆ ಮಿಲನದ ಚಟವನ್ನಾಗಿಸಿಕೊಂಡಂತಿದೆಯಲ್ಲ? ಇದು ನಿನಗೆ ಸರಿಯೇ?" ಎಂಬ ಮಾಧವನ ಪ್ರಶ್ನೆಗಳಿಂದ ಶುರುವಾದ ಅವರ ದಾಂಪತ್ಯದ ಮಧ್ಯದ ಬಿರುಕು ವಿಸ್ತರಿಸುತ್ತಲಿತ್ತು. ಸತಿಪತಿಗಳಿಂದೊಂದಾಗದ ಭಕ್ತಿ ಅಮೃತದೊಳು ವಿಷ ಬೆರೆಸಿದಂತಾಗಲು ಆ ಕ್ಷಣದಿಂದಲೇ ಆರಂಭವಾಯಿತು. ದಾಂಪತ್ಯದ ಭಕ್ತಿ ವಿಭಕ್ತಿಯಾಗಿ ಪರಸ್ಪರರ ಮಧ್ಯ ವಿಘಟನೆ ದಾರಿಯಾಗಿ ಕವಲೊಡೆಯಿತು. ಆಗ ಬಿಂದುವಿನ ಮೌನದ ಪಂಜರದಲ್ಲಿ ಮಾತುಗಳಿಗೆಲ್ಲಿ ಅವಕಾಶ? ಅದವಳ ಪಾಲಿಗೆ ಶರಪಂಜರ ವಾಗಿತ್ತು. ಮಾಧವನ ಒಂದೊಂದು ಮಾತುಗಳು ಅವಳನ್ನಾವರಿಸಿಕೊಂಡು

ಮತ್ತು ಬಿಂದು ತಮ್ಮ ಮಾವ ಮನೆಯಲ್ಲಿಲ್ಲದ ದಿನ ನಿಗದಿ ಮಾಡಿಕೊಂಡು ಮಧುಕರನನ್ನು ತಮ್ಮ ಮನೆಗೆ ಕರೆಯಿಸಿಕೊಳ್ಳುತ್ತಾರೆ. ಮಾಧವ ಇವರಿಬ್ಬರನ್ನು ಮಾತ್ರ ಮನೆಯಲ್ಲಿ ಬಿಟ್ಟು ನಿರ್ಭಾವುಕನಾಗಿ ಹೊರಬರುತ್ತಾನೆ. ಅಲ್ಲಿ ಬಿಂದು ಮತ್ತು ಮಧುಕರ ಮಾತ್ರ. ಹಲವಾರು ವಿಷಯಗಳನ್ನು ಮಾತನಾಡುತ್ತಾ ಮತ್ತಷ್ಟು ಆಪ್ತವಾಗುತ್ತಾರೆ. ಅನಿವಾರ್ಯತೆಯ ಕೈಗೊಂಬೆಗಳಾಗಿ ಗಂಡ – ಹೆಂಡತಿಯರಾಟ ಆಡಬೇಕಿರುವ ಸಂದರ್ಭಕ್ಕೆ ಇಬ್ಬರೂ ಅಣಿಯಾಗುತ್ತಾರೆ. ಲೈಂಗಿಕ ಕಾರ್ಯ ಯಶಸ್ವಿಯಾಗಬೇಕಾದರೆ ಮಾನಸಿಕವಾಗಿ ಸಿದ್ಧರಾಗ ಬೇಕೆಂಬುದರ ಸತ್ಯದ ಅರಿವಿದ್ದ ಅವರು ಪರಸ್ಪರ ಆಲಂಗಿಸಿಕೊಂಡು ಬೆಸೆದುಕೊಳ್ಳುತ್ತಾರೆ. ತಮಗರಿವಿಲ್ಲ ದಂತೆಯೇ ತಮ್ಮಿಬ್ಬರ ಮಧ್ಯ ಒಲುಮೆಯ ಭಾವವೊಂದು ಸ್ಫುರಿಸಿ ಚಿಲುಮೆಯಾದಾಗ ಒಲುಮೆಯ ಕೂಟಕ್ಕೆ ಹಾಸಿಗೆಯ ಹಂಗೇಕೆ ಎಂಬಂತೆ ಭೌತಿಕ ಪ್ರಪಂಚವನ್ನೇ ಮರೆಯುತ್ತಾರೆ.

ಹೀಗೆ, ಮಧುಕರನಿಂದ ಮಧುವನ್ನು ಹೀರಿದ ಬಿಂದು ಮೈದುಂಬಿಕೊಂಡು ಸಮರ್ಥವಾಗಿ ತನ್ನ ತಾಯ್ತನಕ್ಕೆ ಮುನ್ನುಡಿ ಹಾಕಿಕೊಳ್ಳುತ್ತಿರುವಾಗ ಅವಳೊಳಗೇ ಸಮರ್ಥವಾಗಿ ಅಂಡಾಣು ಪಿಂಡಾಣುವಾಗಿ ಕುಡಿಯೊಡೆಯುವಿಕೆ ನಡೆದಿತ್ತು. ಇದರ ಫಲಿತವಾಗಿ ಬಿಂದುಗೆ ಜನಿಸಿದ ಗಂಡು ಮಗುವಿಗೆ "ಸಮರ್ಥ" ಎಂದೇ ಹೆಸರಿಸಿದರು. ಈ ಫಲಿತಾಂಶ ಕುರಿತು ಮಾಧವ ಸಹ ಬಹಳ ಖುಷಿಯಾಗಿದ್ದ. ಬೆಟ್ಟದಂತಹ ಸಮಸ್ಯೆ ಸರಳವಾಗಿ

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ಪಾವತಿಸಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಚುಚ್ಚುತ್ತಿದ್ದರೆ ಬಿಂದು ತಾನೇ ಹೇಗೆ ಸಹಿಸಿಕೊಂಡಾಳು?

ಮನೆಯಲ್ಲಿ ಪ್ರತಿದಿವಸ ಪ್ರತಿಕ್ಷಣ ಜಗಳ, ನಿಂದೆ, ಬಿಂದುವಿಗೆ ಗಂಡನಿಂದ ಅವಮಾನ. ಅದೊಂದು ಬಗೆಯ ಹಿಂಸೆಯೆನಿಸಿತು ಬಿಂದುವಿಗೆ. ಬಿಂದು ತಿಳಿದೋ ತಿಳಿಯದೆಯೋ ಮುಂದುವರಿದಿದ್ದಕ್ಕೆ ಇಂಥ ಮಾನಸಿಕ ತಲ್ಲಣ, ಹಿಂಸೆಯ ಅಸ್ತ್ರಗಳು ಅವಳನ್ನು ಹಿಂಸಿಸುತ್ತಿದ್ದವು. ಅವಳ ಧ್ವನಿ ಅವಳ ಮೌನದೊಳಗೇ ಮೌನವಾಗುಳಿಯಿತು. ನಿರುತ್ತರವೇ ಅವಳ ಪ್ರತಿಕ್ರಿಯೆಯಾಯಿತು. ಅವಳ ಮೌನವನ್ನು ಸಹಿಸದ ಮಾಧವ, "ಈ ಪಾಪದ ಪಿಂಡವನ್ನು ಕಿತ್ತಿ ಬಿಸಾಕು" ಎಂಬ ಕೊಂಕು ಬಿರುನುಡಿಗೆ ಅಕ್ಷರಶಃ ಕಣ್ಣೀರಾದ ಬಿಂದು ಗಂಡನ ಚಾಟಿ ಮಾತಿನ ರಭಸದ ಪೆಟ್ಟು ತಡೆಯದಾದಳು. ಮೌನ ಪ್ರತಿಭಟನೆ ಒಮ್ಮೊಮ್ಮೆ ಮಾತಿನ ಮೂಲಕ ಅಭಿವ್ಯಕ್ತವಾದಾಗ ಮನೆಯಲ್ಲಿ ಅಶಾಂತಿ ನೆಲೆಯಾಗಿ ನೆಮ್ಮದಿ ಇಲ್ಲದಂತಾದಾಗ ಮಾಧವ ಹಂತಹಂತವಾಗಿ ಕುಡಿತದ ಮೂಲಕ ನೆಮ್ಮದಿ ಕಂಡುಕೊಳ್ಳಲು ಶುರುವಿಟ್ಟುಕೊಂಡ. ಇಂಥ ಹವ್ಯಾಸ ಚಟವಾಗಲು ಮನೆಯ ವಾತಾವರಣವೇ ಕಾರಣವಾಗಿಬಿಟ್ಟಿತು. ಒಂದು ಸಂಬಂಧದಿಂದ ಮನೆಯಲ್ಲಿಯ ಮನಸ್ಸುಗಳು ಅರಳಲು ಕಾರಣವಾದರೆ, ಅಂಥದ್ದೇ ಬೇಡದ ಸಂಬಂಧ ಅನಾವಶ್ಯಕವಾಗಿ ಮುಂದುವರಿದಾಗ ಅದೇ ಮನೆಯಲ್ಲಿನ ಅದೇ ಮನಸ್ಸುಗಳು ಮುದುಡಿಕೊಂಡು ಬಾಡಿ ಬಸವಳಿಯಲು ಕಾರಣವಾಗಿತ್ತು.

ಬಿಂದು ಬಹಳ ಯೋಚಿಸಿದಳು. ತಾನೊಂದು ಬಿಂದುವಾಗಿ, ಗೆರೆಯಾಗಿ, ವೃತ್ತವಾಗಿ ಎಲ್ಲಾ ಮಗ್ಗಲುಗಳಿಂದ ಚಿಂತಿಸಿದಳು, ಒಂದು ನಿರ್ಧಾರಕ್ಕೆ ಬರಲೇಬೇಕಾಯಿತು. ಈ ಎಲ್ಲ ಸಮಸ್ಯೆಗೆ ಒಂದೇ ಉತ್ತರ ತಾನು ಇನ್ನು ಬದುಕುಳಿಯುವುದರಲ್ಲಿ ಅರ್ಥವೇ ಇಲ್ಲ. ತನ್ನ ಬದುಕಿಗೆ ಆಸರೆಯಾಗಿದ್ದ ಗಂಡನೇ ತನ್ನನ್ನು ತುಚ್ಛವಾಗಿ ಪರಿಗಣಿಸಿದಾಗ ನಿಂದೆಯ ಅವಮಾನದ ಘಟನೆಗಳಿಗೆ ಪ್ರತಿದಿನವೂ ಮುಖಾಮುಖಿಯಾಗುವ ಬದಲಿಗೆ ಆತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರಕ್ಕೆ ಬಂದಿದ್ದಳು ಬಿಂದು. ಅದರ ಫಲಿತವೇ ಇಂದು ಮನೆಯ ಮೇಲಿನಿಂದ ಕೆಳಗೆ ಬೀಳುವ ಮೂಲಕ ತಾನು ತನ್ನೊಳಗಿನ ಮತ್ತೊಂದು ಕರುಳ ಕುಡಿಯನ್ನೂ ಇಲ್ಲವಾಗಿಸಿಕೊಳ್ಳುವ ಉದ್ದೇಶ ಆಕೆಯಲ್ಲಿತ್ತು.

* * *

ಚಲನಚಿತ್ರದಂತಿರುವ ಈ ಎಲ್ಲವೂ ಮಧುಕರನ ಮನದಲ್ಲಿ ಸುಳಿದಾಡಿ ಮತ್ತೇ ಚಿಂತಿತನಾದ. ಆಗಿದ್ದೆಲ್ಲ ಆಗಿದೆ. ಈಗ ಎರಡನೇ ಮಗುವಂತೂ ಇಹಲೋಕ ತ್ಯಜಿಸಿದೆ. ಉಳಿದಿರುವ ಬಿಂದು ಮತ್ತು ಮಾಧವ ಆದರೂ ಚೆನ್ನಾಗಿರಲಿ ಎಂದು ಯೋಚಿಸಿದ. ಮರುದಿವಸ ಬಿಂದು ಮಾಧವರ ಮಧ್ಯೆ ಸಂಧಾನ ಮಾಡಿಸಲು ಯತ್ನಿಸಿದ. ಬಿಂದುವೇನೋ ತನ್ನ ಮಗ ಸಮರ್ಥನೊಂದಿಗೆ ಸುಖಿಯಾಗಿಯೇ ಇದ್ದಳು. ಆದರೆ ಮಾಧವ ಮಾತ್ರ ಮಾನಸಿಕ ಕ್ಲೀಷೆಯಿಂದ ಹೊರಬರಲಾಗದೆ ತಾನೊಬ್ಬ ಅಸಮರ್ಥನೆಂಬ ಸೋಲು, ಹತಾಶೆಗಳೊಳಗೆ ಬೆಂದಿದ್ದ. ಮತ್ತಷ್ಟು ಕುಡಿತ, ಮಾದಕ ದ್ರವ್ಯಕ್ಕೆ ದಾಸನಾಗುತ್ತಿರುವಂತೆ ವರ್ತಿಸುತ್ತಿದ್ದ. ತನ್ನ ಕೈಹಿಡಿದ ಮಡದಿ ಎಂಬುದನ್ನೂ ಲೆಕ್ಕಿಸದೆ ಬಿಂದುವನ್ನು ಕಾರಣವಿಲ್ಲದೆ ದ್ವೇಷಿಸುವುದು, ಮಾನಸಿಕವಾಗಿ, ದೈಹಿಕವಾಗಿ ಹಿಂಸೆ ಕೊಡುವುದನ್ನು ಮುಂದುವರಿಸಿದ್ದ. ಈ ನಡುವೆ ಮಧುಕರನಿಗೆ ನಿಯೋಜನೆ ಮೇರೆಗೆ ಬೆಟ್ಟದೂರಿಗೆ ವರ್ಗವಾಗಿತ್ತು. ಹಾಗಾಗಿ ಇವರ ಸಂಪರ್ಕ ಕಡಿಮೆಯಾಗಿತ್ತು. ನಿಯೋಜನೆ ಅವಧಿ ಮುಗಿದಾಗ ಮತ್ತೆ ಕಲ್ಯಾಣಪುರಕ್ಕೆ ಬಂದಾಗ ಮಾಧವನನ್ನು ಕಂಡು ಮಾತನಾಡಿಸುವ ತವಕದಲ್ಲಿ ಅವರ ಮನೆಯತ್ತ ನಡೆದ. ಮಾಧವ ತೀರಾ ಬಳಲಿದ್ದ. ಆತನ ಸಾವು ಹತ್ತಿರದಲ್ಲಿಯೇ ಕೈಚಾಚಿತ್ತೆನಿಸುತ್ತಿತ್ತು. ಆ ದಿವಸ ಮಧುಕರ ಆತನನ್ನು ಸಂತೈಸಲು ವಿಫಲ ಯತ್ನ ಮಾಡಿದ. ಬಿಂದು ಮೌನವಾಗಿಯೇ ಮಧುಕರನತ್ತ ಅರ್ಥಪೂರ್ಣವಾಗಿ ನೋಡುತ್ತಿದ್ದಳು. ಹೀಗೆ ಕೆಲದಿನಗಳು ಕಳೆದವು. ಒಂದು ದಿನ ಮಾಧವ ಇದ್ದಕ್ಕಿದ್ದಂತೆ ಅಸ್ವಸ್ಥನಾದ. ಮಧುಕರ, ಬಿಂದು ಮತ್ತು ಅಲ್ಲಿದ್ದವರು ಕೂಡಲೇ ಆಸ್ಪತ್ರೆಗೆ ದಾಖಲಿಸಿದರೂ ಫಲಿಸದೆ ಮಾಧವ ಪಂಚ ಮಹಾಭೂತಗಳಲ್ಲಿ ಒಂದಾದ. ಬಿಂದು ವಿಧವಾ ಸಾಮ್ರಾಜ್ಯದೊಳಗೊಂದಾದಳು. ಅದವಳ ದೌರ್ಭಾಗ್ಯ.



ಅಂದಿನ ಅಪರಾಹ್ನ ಮಾಧವನ ಶವದ ಮುಂದೆ ನಿರ್ಭಾವುಕ ಮುಖಭಾವವನ್ನು ಹೊತ್ತ ಬಿಂದು ಒಂಟಿಯಾದಳು. ಅವಳ ಮೊಗದಲ್ಲಿ ನೀರವತೆ. ಎಲ್ಲವೂ ಇದ್ದು ಏನೂ ಇಲ್ಲದಿರುವ ಪರಿಸ್ಥಿತಿ ಆಕೆಯ ಮುಖಭಾವದಲ್ಲಿತ್ತು. ಬಿಂದು ದುಃಖಿಸಿದರೂ ಅವಳ ಮೊಗದಲ್ಲಿ ಕಣ್ಣೀರು ಕಾಣದೆ ದುಃಖ ಹೆಪ್ಪುಗಟ್ಟಿ ಮಡುಗಟ್ಟಿತ್ತು. ಬಿಂದು ಸಹ ಮಾಧವನ ಅಂತಿಮ ಯಾತ್ರೆಯಲ್ಲಿ ಸಾಗಿದ್ದಳು. ಶವ ಹೊತ್ತ ಮಧುಕರನ ಹಿಂದೆಯೇ ಬಿಂದು ಸಾಗಿದ್ದಳು. ಮಧುಕರನ ಹೆಜ್ಜೆಯಲ್ಲಿಯೇ ಬಿಂದು ತನ್ನ ಹೆಜ್ಜೆ ಮೂಡಿಸುತ್ತ ಸಾಗುತ್ತಿರುವಾಗ ಭವಿಷ್ಯದ ಕನಸುಗಳನ್ನು ಹೊತ್ತ ಸಮರ್ಥನ ಸಲುವಾಗಿಯಾದರೂ ತಾನು ನಡೆಯುತ್ತಿರುವ ಆ ಹೆಜ್ಜೆಗಳಲ್ಲಿ ತನ್ನ ಬದುಕನ್ನು ಇನ್ನಾದರೂ ದೃಢವಾಗಿಸಿಕೊಳ್ಳಬೇಕೆಂಬ ಅನಿವಾರ್ಯತೆಯ ಆತ್ಮವಿಶ್ವಾಸವಿತ್ತು. ಶವ ಸಂಸ್ಕಾರದ ನಂತರ ತಲೆ ಸ್ನಾನ ಮಾಡಿದಾಗ ಬದುಕಿನ ಒಂದು ಅಧ್ಯಾಯ ಮುಗಿದ ಮೌನ ಆಕೆಯನ್ನು ಆವರಿಸಿತ್ತು. ಆ ಮೌನಕ್ಕೆ ಅರ್ಥವೇನು? ಆ ಮೌನದೊಳಗಣ ಮಾತುಗಳನ್ನಾರು ಕೇಳಿಯಾರು? ಕೇಳಿಸಿಕೊಂಡರೂ ಯಾರು ತಾನೆ ಸ್ಪಂದಿಸಿಯಾರು? ಈ ಪ್ರಶ್ನೆಗಳಿಗೆ ಉತ್ತರ ಗೊತ್ತಿಲ್ಲದಂಥ ಗಾಢತೆ ಬಿಂದುವನ್ನಾವರಿಸಿತ್ತು.

ಮನೆಯಲ್ಲಿ ತನ್ನ ವಯಸ್ಸಾದ ಮಾವ ಮತ್ತು ಸಮರ್ಥನೊಡನೆ ತಾನು ಬದುಕಿನ ಬಂಡಿಯ ನೊಗ ಹೊತ್ತುಕೊಳ್ಳಬೇಕಾದ ದೊಡ್ಡ ಹೊಣೆಯನ್ನು ಆಕೆ ನಿಭಾಯಿಸಬೇಕಿತ್ತು. ಸಾಲದ್ದಕ್ಕೆ ಸಮಾಜದ ಕೊಂಕು ನುಡಿಗಳು, ಸಂಪ್ರದಾಯದಂತೆ ವಿಧವೆಯ ಪಟ್ಟದ ಸಂಭ್ರಮ ಬೇರೆ. ಅವಳ ಮಾತು ಅವಳ ಮೌನದೊಳಗೆ ಹುದುಗಿಕೊಂಡುಬಿಟ್ಟವು. ತನ್ನ ಬದುಕಿನ ಅನಿವಾರ್ಯತೆಗಾಗಿ ಯಾರಿಗೂ ಹೊರೆಯಾಗದೆ ಬಿಂದು ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ತನ್ನ ಜ್ಞಾನವನ್ನು ನಗದಾಗಿಸಿಕೊಳ್ಳತೊಡಗಿದಳು. ಆದರೂ ಆರ್ಥಿಕ ಮುಗ್ಗಟ್ಟಿನ ಪರಿಹಾರಕ್ಕೆ ತಮ್ಮದೆ ಮನೆಯನ್ನು ಅಚ್ಚುಕಟ್ಟಾಗಿ ಎರಡು ಭಾಗ ಮಾಡಿ ಒಂದನ್ನು ಬಾಡಿಗೆಗೆ ಕೊಟ್ಟು ಚಿಕ್ಕ ಭಾಗದಲ್ಲಿ ತನ್ನ ಮಾವ ಮತ್ತು ತಾನು ತನ್ನ ಸಮರ್ಥನೊಡನೆ ಸಮರ್ಥವಾಗಿ ಬದುಕಲು ಯೋಚಿಸಿದಾಗ ಬೇಡಬೇಡವೆಂದರೂ ಮಧುಕರ ಬಿಂದುವಿಗೆ ಬಾಹ್ಯವಾಗಿ ಸಹಕಾರಿಯಾದ. ಬದುಕಿನ ಜಂಜಡದಲ್ಲಿ ಪರಿಸ್ಥಿತಿಯ ಕೈಗೊಂಬೆಯಾಗಿ ಹಲವು ಸವಾಲುಗಳ ಸುಳಿಯಲ್ಲಿಯೂ ಬಿಂದು ಬಿಂದುವಾಗುಳಿಯದೇ ರೇಖೆಯಾಗಿ ವೃತ್ತವಾಗಿ ತನ್ನೊಳಗಿನಂತರಂಗ ಮತ್ತು ಬಹಿರಂಗದ ಬದುಕನ್ನಾವರಿಸಿಕೊಂಡ ವೃತ್ತದಲ್ಲಿ, ಆವೃತ್ತವಾಗುಳಿದಳು. ಆಕೆಯ ಮೌನ ಮಾತಿಗಿಂತಲೂ ಅರ್ಥಪೂರ್ಣ ಕತೆಯಾಗಿತ್ತು.

**ವೆಂಕಟೇಶ ಕೆ. ಜನಾದ್ರಿ, ಕನಕಗಿರಿ**
ಲೆಕ್ಕಪತ್ರ ಅಧೀಕ್ಷಕ
ಈಕರಸಾ ಸಂಸ್ಥೆ, ಕೇಂದ್ರ ಕಛೇರಿ
ಗುಲ್ಬರ್ಗಾ – ೫೮೫ ೧೦೨

ನಾನು ಓದಿದ ಪುಸ್ತಕ

*ಲೇಖಕರು :* **ಜಿ.ಎನ್. ದೇವಿ**
*ಅನು :* **ಕೆ. ಪಿ. ಸುರೇಶ**
ಪುಟ : ೯೪ ಬೆಲೆ : ರೂ. ೧೦೦/–
*ಪ್ರಕಾಶನ :*
**ಅಹರ್ನಿಶಿ ಪ್ರಕಾಶನ,** ಶಿವಮೊಗ್ಗ

# ಭಾರತೀಯ ಜ್ಞಾನ ಮತ್ತು ಶಿಕ್ಷಣದ ಬಿಕ್ಕಟ್ಟುಗಳನ್ನು ತೆರೆದು ತೋರಿಸುವ ಕೃತಿ




ಜ್ಞಾನವೆಂಬುದು ಶಿಕ್ಷಣದ ತಿರುಳಾದರೆ, ಶಿಕ್ಷಣವು ದೇಶದ ಬುನಾದಿಯಾಗಿರುತ್ತದೆ. ಜ್ಞಾನವೆಂದರೆ ಸ್ವಾತಂತ್ರ್ಯ ಎಂಬ ಗಾಂಧಿಯ ಚಿಂತನೆ; ಜ್ಞಾನವೆಂದರೆ ಉನ್ನತ ಸತ್ಯದ ಅನ್ವೇಷಣೆ ಎಂಬ ಅರಬಿಂದೋ ಚಿಂತನೆ ಹಾಗೂ ಜ್ಞಾನವೆಂದರೆ ಸ್ವ–ಸಾಕ್ಷಾತ್ಕಾರದ ಪ್ರಕ್ರಿಯೆ ಎಂಬ ಟಾಗೋರ್ ಅವರುಗಳ ಚಿಂತನೆಯ ಮಹತ್ವವನ್ನು ದೇವಿಯವರು ವಿವರಿಸಿದ್ದಾರೆ. ವ್ಯಕ್ತಿ ಕೇಂದ್ರಿತ ನೆಲೆಯಿಂದ ಹೊರಟ ಇಂತಹ ಚಿಂತನೆಗಳ ಬಗ್ಗೆ ದೇವಿಯವರಿಗೆ ಅಭಿಮಾನವಿದೆ. ಆದರೆ ಆದಿವಾಸಿ ಮತ್ತು ಬುಡಕಟ್ಟು ಜನಸಮುದಾಯಗಳ ಪಾರಂಪರಿಕ ಹಾಗೂ ನಿಸರ್ಗ ಸಹಜ ತಿಳಿವಳಿಕೆಗಳು ನಮ್ಮ ಶಿಕ್ಷಣದ ಆವರಣದಿಂದ ಹೊರಗೇ ಉಳಿದುಕೊಂಡಿವೆ. ಇಂದಿನ ವರ್ತಮಾನದ ಸನ್ನಿವೇಶದಲ್ಲಿ ಶಿಕ್ಷಣ ನಮ್ಮ ಊಹೆಗೆ ನಿಲುಕದಷ್ಟು ಸ್ಥಿತ್ಯಂತರಗಳಿಗೆ ಒಳಪಟ್ಟಿದೆ. ಈಗ ಶಿಕ್ಷಣವೆಂದರೆ ವೃತ್ತಿಯಾಧಾರಿತ ಕೋರ್ಸುಗಳು ಎನ್ನುವಂತಾಗಿದೆ; ಉನ್ನತ ಶಿಕ್ಷಣವು ಉದ್ಯೋಗ, ಅಂಕಗಳು, ಪ್ರಮಾಣಪತ್ರಗಳಿಗೆ ಮಾತ್ರ ಸೀಮಿತಗೊಂಡಿದೆ.

ಗಣೇಶ್ ಎನ್. ದೇವಿ ಅವರು ಇಂಗ್ಲಿಷ್ ಪ್ರಾಧ್ಯಾಪಕರಾಗಿ, ವಿಮರ್ಶಕರಾಗಿ, ಚಿಂತಕರಾಗಿ, ಶಿಕ್ಷಣ ತಜ್ಞರಾಗಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದವರು. ಅವರ 'ವಿಸ್ಮೃತಿಯ ನಂತರ' (After Amnesia) ಬೌದ್ಧಿಕ ವಲಯದಲ್ಲಿ ಬಹು ಚರ್ಚಿತ ಕೃತಿ. ಕೆಲವು ಆದಿವಾಸಿ ಮತ್ತು ಬುಡಕಟ್ಟು ಸಮುದಾಯಗಳೊಂದಿಗೆ ನಿಕಟ ಸಂಪರ್ಕವನ್ನು ಹೊಂದಿರುವ ದೇವಿಯವರು ಅವು ಭಾರತದಲ್ಲಿ ಅಂಚಿಗೆ ಸರಿದಿರುವ ಬಗೆಯನ್ನು ಅಧ್ಯಯನ ಮಾಡಿದ್ದಾರೆ. ಅವರು ಅಳಿವಿನ ಅಂಚಿಗೆ ಸರಿಯುತ್ತಿರುವ ದೇಶೀಯ ಭಾಷೆಗಳ ಕುರಿತು ವ್ಯಾಪಕವಾಗಿ ಅಧ್ಯಯನ ಮಾಡಿದ ಬಹುಭಾಷಾ ವಿದ್ವಾಂಸರು ಮತ್ತು 'ದಕ್ಷಿಣಾಯಣ' ಸಂಘಟನೆಯ ಮೂಲಕ ಲೇಖಕ/ಲೇಖಕಿಯರ ಹತ್ಯೆ, ಅಭಿವ್ಯಕ್ತಿ ಸ್ವಾತಂತ್ರ್ಯದ ದಮನ, ಹಿಂದುತ್ವದ ಅಸಹಿಷ್ಣುತೆಗಳನ್ನು ಪ್ರತಿಭಟಿಸುವ ಸಾರ್ವಜನಿಕ ಬುದ್ಧಿಜೀವಿ... ಹೀಗೆ ಬಹುಮುಖೀ ನೆಲೆಯಲ್ಲಿ ಕ್ರಿಯಾಶೀಲರಾಗಿರುವ ದೇವಿಯವರ 'The Crisis Within: Knowledge and Education in India' ಎಂಬ ಕೃತಿಯನ್ನು ಕೆ.ಪಿ. ಸುರೇಶ ಅವರು 'ಒಳಗಿನ ಬಿಕ್ಕಟ್ಟು' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ.

ದೇವಿಯವರು ವಿಶ್ವಾತ್ಮಕ ನೆಲೆಯಲ್ಲಿ ಆಲೋಚಿಸಿ ಸ್ಥಳೀಯವಾಗಿ, ದೇಶೀಯವಾಗಿ ಕಾರ್ಯ ಪ್ರವೃತ್ತರಾಗುವ ಚಿಂತಕರು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ದೇವಿಯವರು ತಮ್ಮ ಪುಟ್ಟ ಕೃತಿಯಲ್ಲಿ ಇಡೀ ಭಾರತೀಯ ಜ್ಞಾನಧಾರೆಗಳು ಸಮಕಾಲೀನ ಶಿಕ್ಷಣದೊಂದಿಗೆ ಹೊಂದಿರುವ ಸಂಬಂಧ ಹಾಗೂ ಬಿಕ್ಕಟ್ಟುಗಳನ್ನು ಚರ್ಚಿಸುವಂತೆ ಮೇಲುನೋಟಕ್ಕೆ ತೋರುತ್ತದೆ. ಆದರೆ ಇದು ಕೇವಲ ಜ್ಞಾನ ಮತ್ತು ಶಿಕ್ಷಣದಿಂದ ಉದ್ಭವಿಸಿರುವ ಸಮಸ್ಯೆ ಮತ್ತು ಬಿಕ್ಕಟ್ಟುಗಳಿಗಷ್ಟೇ ಸೀಮಿತವಾದದ್ದಲ್ಲ. ಕಳೆದ ಒಂದು ಶತಮಾನದಲ್ಲಿ ಭಾರತದಲ್ಲಿ ಜ್ಞಾನಕೇಂದ್ರಿತವಾಗಿ ನಡೆದಿರುವ ನಿರ್ವಚನಗಳು ಹಾಗೂ ಅವುಗಳ ಹಿಂದಿರುವ ಗ್ರಹೀತಗಳನ್ನು, ಪ್ರೇರಣೆಗಳನ್ನು ವಿಮರ್ಶಾತ್ಮಕ ನಿಟ್ಟಿನಿಂದ ಶೋಧಿಸಿದ್ದಾರೆ. ಭಾರತೀಯ ಶೋಷಿತ ಸಮುದಾಯಗಳು, ಆದಿವಾಸಿಗಳು, ಬುಡಕಟ್ಟುಗಳು, ದಲಿತರು, ಮಹಿಳೆಯರು ಜ್ಞಾನ ಎನ್ನುವ ವಿಶಾಲ ವೃತ್ತದೊಳಗೆ ಸೇರಿದ್ದಾರೆಯೇ? ಆ ವೃತ್ತದ ಕೇಂದ್ರವಷ್ಟೇ ಇನ್ನಿಲ್ಲದ ಮಹತ್ವ ಪಡೆಯುತ್ತ ಹೋದದ್ದರಿಂದ ಜ್ಞಾನ – ಶಿಕ್ಷಣದಿಂದ ಈ ಬಹುಸಂಖ್ಯಾತ ಸಮುದಾಯಗಳು ಹೇಗೆಲ್ಲ ಅಂಚಿಗೆ ಸರಿದವು, ಜಾಗತಿಕ ಮಟ್ಟದಲ್ಲಿ ಭಾರತೀಯ ಜ್ಞಾನ, ಶಿಕ್ಷಣ ಮತ್ತು ಶಿಕ್ಷಣ ಸಂಸ್ಥೆಗಳ ಗುಣಮಟ್ಟ ಕುಸಿದುಹೋಗಿದ್ದೇಕೆ? ಇಂತಹ ಹತ್ತು ಹಲವು ವಿದ್ಯಮಾನಗಳನ್ನು ದೇವಿಯವರು ಸ್ಥೂಲವಾಗಿ ವಿಶ್ಲೇಷಿಸಿದ್ದಾರೆ.

'ಒಳಗಿನ ಬಿಕ್ಕಟ್ಟು' ಕೃತಿಯಲ್ಲಿ ಜ್ಞಾನದ ಬಿಕ್ಕಟ್ಟು, ಸ್ಮೃತಿ ಮತ್ತು ಜ್ಞಾನ, ಮರೆತದ್ದರ ನೆನಪು ಹಾಗೂ ಸ್ಮೃತಿಯಾಚೆಯ ಶಿಕ್ಷಣ – ಎಂಬ ನಾಲ್ಕು ಅಧ್ಯಾಯಗಳಲ್ಲಿ ದೇವಿಯರ ಚಿಂತನೆ ಹರಳುಗಟ್ಟಿದೆ. ದೇವಿಯವರು ಕಳೆದ ಶತಮಾನದ ತೊಂಬತ್ತರ ದಶಕದಲ್ಲಿ ವಿಸ್ಮೃತಿ ಪರಿಕಲ್ಪನೆಯನ್ನು ಮುಂದಿಟ್ಟಿದ್ದರು. ಕನ್ನಡದಲ್ಲಿ ಡಿ.ಆರ್. ನಾಗರಾಜ್ ಅವರು ಕೂಡ ಈ ಪರಿಕಲ್ಪನೆಯ ಹಿನ್ನೆಲೆಯಲ್ಲಿ ವೈದಿಕೇತರ ಮತ್ತು ದೇಶೀಯ ಚಿಂತನೆಗಳನ್ನು ಅಧ್ಯಯನ ಮಾಡುವ ಅಗತ್ಯವನ್ನು ಅರಿತವರಾಗಿದ್ದರು. ವಸಾಹತುಶಾಹಿಯ

**ಡಾ॥ ಸುಭಾಷ್ ರಾಜಮಾನೆ**



## ಭೂಮಿ

‘ಕ್ಷೀರ ಪಥದಲ್ಲಿ ಲಕ್ಷಾಂತರ ಸೂರ್ಯರು, ಚಂದ್ರರು
ಮಾನವ ಸಹಿತ ಜೀವರಾಶಿಗೆ ಇರುವುದೊಂದೇ ಭೂಮಿ
ಅಣ್ವಸ್ತ್ರಗಳು ಬೇಡ, ಜಾತಿಧರ್ಮಗಳ ಕಲಹ ಬೇಡ
ಎಲ್ಲರ ಬದುಕಲು ಬಿಟ್ಟು, ನಾವೂ ಬದುಕೋಣವೇ ಸ್ವಾಮಿ?!

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೫೬೦ ೦೯೪

ಸಾಂಸ್ಕೃತಿಕ ಯಾಜಮಾನ್ಯ ಭಾರತೀಯ ಸಮುದಾಯಗಳ ಭಾಷೆ, ಜ್ಞಾನ, ಕಸುಬು, ಪರಂಪರೆ ಮೊದಲಾದವುಗಳ ಬಗ್ಗೆ ವಿಚಿತ್ರವಾದ ಕೀಳರಿಮೆ ಮತ್ತು ಪರಕೀಯತೆಯನ್ನು ಸೃಷ್ಟಿಸಿತು; ವಸಾಹತುಶಾಹಿ ಆಡಳಿತವು ನಮ್ಮ ದೇಶದಲ್ಲಿ ಆ ಮೊದಲಿದ್ದ ಶಿಕ್ಷಣ ಪರಂಪರೆಗಳನ್ನು ನಾಶಗೊಳಿಸಿತು; ಇದರಿಂದಾಗಿ ಸಾಂಸ್ಕೃತಿಕ ವಿಸ್ಮೃತಿ ಉಂಟಾಯಿತೆಂದು ದೇವಿಯವರು ವಾದಿಸುತ್ತಾರೆ. ಇದಕ್ಕೆ ಪೂರಕವಾಗಿ ಧರ್ಮಪಾಲ್, ಗಾಂಧಿ, ಟಾಗೋರ್, ಅರಬಿಂದೋ, ಅಂಬೇಡ್ಕರ್ ಮೊದಲಾದವರ ಶಿಕ್ಷಣ ಕೇಂದ್ರಿತ ಚಿಂತನೆಗಳನ್ನೂ ಪರಾಮರ್ಶಿಸಿದ್ದಾರೆ. ಆದರೆ ಶಿಕ್ಷಣದ ದಿವಾಳಿತನ ಉಂಟಾಗಿರುವುದರಲ್ಲಿ ಸಾಂಸ್ಕೃತಿಕ ವಿಸ್ಮೃತಿ ಹೇಗೆಲ್ಲ ಕಾರ್ಯ ನಿರ್ವಹಿಸಿತು ಎಂಬುದರ ಬಗ್ಗೆ ಖಚಿತವಾದ ಅಧ್ಯಯನಗಳು ನಡೆದಿವೆ ಎಂದು ಅನ್ನಿಸುವುದಿಲ್ಲ. ಸಾರಾಸಗಟಾಗಿ ಇಂತಹ ನಿಲುವುಗಳನ್ನು ಒಪ್ಪುವುದು ಕೂಡ ಕೊಂಚ ಕಷ್ಟವೇ. ಇಂದಿನ ಸಂದರ್ಭದಲ್ಲಿ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳ ಸಂಖ್ಯೆ ಭಾರೀ ಪ್ರಮಾಣದಲ್ಲಿ ಹೆಚ್ಚಿರುವುದಂತೂ ನಿಜ. ಶಿಕ್ಷಣ ಪಡೆಯುವವರ ಪ್ರಮಾಣವು ಎಷ್ಟೋ ಪಟ್ಟು ವೃದ್ಧಿಸಿದೆ. ಆದರೆ ಅದು ದಮನಿತ ಹಾಗೂ ಅಂಚಿನ ಸಮುದಾಯಗಳ ಪಾಲಿಗೆ ಇನ್ನೂ ಗಾವುದ ಗಾವುದ ದೂರವೇ ಉಳಿದುಬಿಟ್ಟಿದೆಯಲ್ಲವೇ?

ದೇವಿಯವರು ಜ್ಞಾನವೆಂಬುದನ್ನು ಅರಿಯುವ ಪ್ರಕ್ರಿಯೆಯೇ ಹೊರತು ಅದೇ ಅರಿವಲ್ಲ; ಅದು ಹುಡುಕಾಟ ನಡೆಸುವ ಪ್ರಾಥಮಿಕ ಪ್ರಕ್ರಿಯೆ; ಜ್ಞಾನವೆಂಬುದು ಭೂತಕಾಲದ ಮಾಹಿತಿಗಳ ಸಂಚಯನವಲ್ಲ; ಅದು ರೂಪುಗೊಳ್ಳುವಿಕೆಯ ಪ್ರಕ್ರಿಯೆ ಆಗಿರುತ್ತದೆ ಎಂದು ಪರಿಭಾವಿಸುತ್ತಾರೆ. ಭಾರತೀಯ ಪರಂಪರೆಯಲ್ಲಿ ಸಾಂಖ್ಯ, ಯೋಗ, ಶ್ರಮಣ, ಜೈನ, ಬೌದ್ಧ, ಉಪನಿಷದ್ ನಿಜವಾದ ಜ್ಞಾನವನ್ನು ಅರಿಯುವ ಪ್ರಕ್ರಿಯೆಯಲ್ಲಿ ತೊಡಗಿದ್ದನ್ನು ಅಲ್ಲಗಳೆಯಲಾಗದು. ಆದರೆ ತಾರತಮ್ಯತೆ, ವರ್ಣಾಶ್ರಮ ಪದ್ಧತಿ, ಅಸ್ಪೃಶ್ಯತೆಯ ಆಚರಣೆಗಳು ಬಿಗಿಯಾದ ಕಟ್ಟಳೆಗಳಿಗೆ ಒಳಪಟ್ಟಂತೆ ಜ್ಞಾನವು ಪ್ರತಿಷ್ಠಿತ ವರ್ಗಗಳ ಸ್ವತ್ತಾಗ ತೊಡಗಿತು. ಸಾಮಾಜಿಕ ಪ್ರತ್ಯೇಕತೆಯಲ್ಲಿ ಜಾತಿ ಪ್ರಮುಖ ಪಾತ್ರ ವಹಿಸಿದ್ದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಇದರಿಂದಾಗಿ ಬ್ರಾಹ್ಮಣೇತರ ಸಮುದಾಯಗಳ ಜ್ಞಾನ ಪರಂಪರೆಗಳು ಅನಾದರಕ್ಕೆ ಒಳಗಾದವು. ಇದನ್ನು ಸಮರ್ಥಿಸುವ ನಿಟ್ಟಿನಲ್ಲಿ ವಸಾಹತುಶಾಹಿ ಆಡಳಿತ, ಶಿಕ್ಷಣ ಮತ್ತು ಕಾನೂನುಗಳು ಕೆಲಸ ಮಾಡಿದವು. ಈ ಹಿನ್ನೆಲೆಯಲ್ಲಿ ಬ್ರಿಟಿಷರ ‘ಅಪರಾಧಿ ಬುಡಕಟ್ಟುಗಳ ಕಾಯಿದೆ’ (ಕ್ರಿಮಿನಲ್ ಟ್ರೈಬ್ಸ್ ಆ್ಯಕ್ಟ್ ೧೮೭೧)ಯು ೧೯೨೪ರಲ್ಲಿ ೧೯೦ ಸಮುದಾಯಗಳನ್ನು ಅಪರಾಧಿ ಪಟ್ಟಿಯಲ್ಲಿ ಸೇರಿಸಿತು. ಭಾರತವು ಸ್ವಾತಂತ್ರ್ಯಾ ನಂತರವೂ ಈ ಸಮುದಾಯಗಳನ್ನು ‘ಡಿನೋಟಿಫೈ’ ಮಾಡಿತು. ಈಗ ಈ ಜನಸಮುದಾಯಗಳ ಸಂಖ್ಯೆ ಏಳು ಕೋಟಿಯಷ್ಟಿದೆ. ಈಗಲೂ ಇವರೆಲ್ಲ ಭೂಮಿ, ಶಿಕ್ಷಣ, ಆರೋಗ್ಯ ಮೊದಲಾದ ಸವಲತ್ತುಗಳಿಂದ ವಂಚಿತರಾಗಿದ್ದಾರೆ. ದೇವಿಯವರು ನಮ್ಮ ಶಿಕ್ಷಣ ವ್ಯವಸ್ಥೆಯು ವಸಾಹತುಶಾಹಿಯ ಪಳೆಯುಳಿಕೆಯಾಗಿ ಇಂದಿಗೂ ಮುಂದುವರೆದದ್ದರ ಪರಿಣಾಮಗಳಿವು ಎಂದು ಗುರುತಿಸುತ್ತಾರೆ. ಹೀಗೆ, ಭಾಷಿಕವಾಗಿ, ಜನಾಂಗಿಕವಾಗಿ, ಧಾರ್ಮಿಕವಾಗಿ ಅಸಂಖ್ಯಾತ ಸಮುದಾಯಗಳು ಶಿಕ್ಷಣದಿಂದ ಹೊರಗೇ ಉಳಿದುಕೊಂಡಿವೆ. ಇಂತಹ ಪ್ರಕ್ರಿಯೆಯನ್ನು ನಾನು ‘ಸಾಂಸ್ಕೃತಿಕ ಪ್ರತ್ಯೇಕೀಕರಣ’ ಎಂದು ಕರೆಯಲು ಇಚ್ಛಿಸುತ್ತೇನೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇವರೆಲ್ಲ ಪ್ರಜೆಗಳಾಗಿರದೆ ಸರ್ವ ಸೇವೆಗಳಿಂದ ವಂಚಿತರಾದ ಕೇವಲ ಜನ ಸಮೂಹವಾಗಿದ್ದಾರಷ್ಟೆ.

ಜ್ಞಾನವೆಂಬುದು ಶಿಕ್ಷಣದ ತಿರುಳಾದರೆ, ಶಿಕ್ಷಣವು ದೇಶದ ಬುನಾದಿಯಾಗಿರುತ್ತದೆ. ಜ್ಞಾನವೆಂದರೆ ಸ್ವಾತಂತ್ರ್ಯ ಎಂಬ ಗಾಂಧಿಯ ಚಿಂತನೆ; ಜ್ಞಾನವೆಂದರೆ ಉನ್ನತ ಸತ್ಯದ ಅನ್ವೇಷಣೆ ಎಂಬ ಅರಬಿಂದೋ ಚಿಂತನೆ ಹಾಗೂ ಜ್ಞಾನವೆಂದರೆ ಸ್ವ–ಸಾಕ್ಷಾತ್ಕಾರದ ಪ್ರಕ್ರಿಯೆ ಎಂಬ ಟಾಗೋರ್ ಅವರುಗಳ ಚಿಂತನೆಯ ಮಹತ್ವವನ್ನು ದೇವಿಯವರು ವಿವರಿಸಿದ್ದಾರೆ. ವ್ಯಕ್ತಿ ಕೇಂದ್ರಿತ ನೆಲೆಯಿಂದ ಹೊರಟ ಇಂತಹ ಚಿಂತನೆಗಳ ಬಗ್ಗೆ ದೇವಿಯವರಿಗೆ ಅಭಿಮಾನವಿದೆ. ಆದರೆ ಆದಿವಾಸಿ ಮತ್ತು ಬುಡಕಟ್ಟು ಜನಸಮುದಾಯಗಳ ಪಾರಂಪರಿಕ ಹಾಗೂ ನಿಸರ್ಗ ಸಹಜ ತಿಳಿವಳಿಕೆಗಳು ನಮ್ಮ ಶಿಕ್ಷಣದ ಆವರಣದಿಂದ ಹೊರಗೇ ಉಳಿದು ಕೊಂಡಿವೆ. ಇಂದಿನ ವರ್ತಮಾನದ ಸನ್ನಿವೇಶದಲ್ಲಿ ಶಿಕ್ಷಣ ನಮ್ಮ ಊಹೆಗೆ ನಿಲುಕದಷ್ಟು ಸ್ಥಿತ್ಯಂತರಗಳಿಗೆ ಒಳಪಟ್ಟಿದೆ. ಈಗ ಶಿಕ್ಷಣವೆಂದರೆ ವೃತ್ತಿಯಾಧಾರಿತ ಕೋರ್ಸುಗಳು ಎನ್ನುವಂತಾಗಿದೆ; ಉನ್ನತ ಶಿಕ್ಷಣವು ಉದ್ಯೋಗ, ಅಂಕಗಳು, ಪ್ರಮಾಣಪತ್ರಗಳಿಗೆ ಮಾತ್ರ ಸೀಮಿತಗೊಂಡಿದೆ. ಜ್ಞಾನ, ಯೋಚನಾಶಕ್ತಿ, ಪ್ರಶ್ನಿಸುವ ಶಕ್ತಿ, ತಾರ್ಕಿಕ ಚಿಂತನೆ, ಸಂಶೋಧನೆ, ಸತ್ಯದ ಹುಡುಕಾಟ–ಇವೆಲ್ಲ ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಅಂಚಿಗೆ ಸರಿದ ಸಂಗತಿಗಳಾಗಿವೆ. ಮಾರುಕಟ್ಟೆ ಕೇಂದ್ರಿತ ನೆಲೆಯಿಂದ ನಿರ್ಧರಿತ ವಾಗುತ್ತಿರುವ ಉನ್ನತ ಶಿಕ್ಷಣವು ಹಲವು ಬಿಕ್ಕಟ್ಟುಗಳನ್ನು ಎದುರಿಸುತ್ತಿದೆ. ಅಭಿವೃದ್ಧಿ ಮತ್ತು ಮಾರುಕಟ್ಟೆಯ ಪರಿಕಲ್ಪನೆಗಳು ಶಿಕ್ಷಣವನ್ನು ಮಾರುವ ಪದಾರ್ಥ ವನ್ನಾಗಿಸಿವೆ. ಇದರಿಂದಾಗಿ ಶಿಕ್ಷಣವು ಸಾಮಾಜಿಕ ಅಸಮಾನತೆ, ಲಿಂಗ ಅಸಮಾನತೆ, ವರ್ಗ ತಾರತಮ್ಯತೆಗಳನ್ನು ಹೆಚ್ಚಿಸುವ ವೇಗವರ್ಧಕದಂತೆ ಕೆಲಸ ಮಾಡುತ್ತಿದೆ. ೨೧ನೆಯ ಶತಮಾನದಲ್ಲಿ ಶಿಕ್ಷಣವು ಸಂಪೂರ್ಣವಾಗಿ ವಾಣಿಜ್ಯೀಕರಣಗೊಂಡು ಮಾರಾಟದ ಸರಕಾಗಿರುವ ಪರಿಯನ್ನು ದೇವಿಯವರು ನೋವಿನಿಂದಲೇ ವಿಶ್ಲೇಷಿಸಿದ್ದಾರೆ.

ಇಂತಹ ಶೈಕ್ಷಣಿಕ ಬಿಕ್ಕಟ್ಟುಗಳಿಗೆ ಪರಿಹಾರವೇ ಇಲ್ಲವೆಂದಲ್ಲ. ದೇವಿಯವರು ಶೈಕ್ಷಣಿಕ ಬಿಕ್ಕಟ್ಟುಗಳನ್ನು ಚರ್ಚಿಸುತ್ತಲೇ ಶಿಕ್ಷಣದ ನಿಜವಾದ ಆಶಯಗಳ ಬಗ್ಗೆಯೂ ಆಲೋಚಿಸಿದ್ದಾರೆ. ‘ಇಡೀ ಸಮಾಜವೇ ಒಂದು ವಿಶ್ವವಿದ್ಯಾಲಯ; ಒಂದೊಂದು ಸಮುದಾಯವೂ ಮುಕ್ತ ಜ್ಞಾನ ಭಂಡಾರ; ಅದೊಂದು ಸಾಮೂಹಿಕ ಮುಕ್ತ ಗ್ರಂಥಾಲಯ; ಕಲಿಕೆಯ ಔಪಚಾರಿಕ ಸಂಸ್ಥೆ ಮತ್ತು ಅದರ ಜವಾಬ್ದಾರಿ ಹೊತ್ತ ಕ್ಯುರೇಟರ್ ಎಂದೇಕೆ ನಾವು ಬಗೆಯಬಾರದು?’ – ಎನ್ನುವ ದೇವಿಯವರ ಪ್ರಶ್ನೆಯಲ್ಲಿ ನಾವು ಹಲವು ಜ್ಞಾನಗಳೊಂದಿಗೆ ಕಲಿಯಬೇಕು ಎನ್ನುವ ಆಶಯವಿದೆ. ಉನ್ನತ ಶಿಕ್ಷಣ ಸಂಸ್ಥೆಗಳು ಸಮುದಾಯಮುಖಿಯಾಗಿ ಕಾರ್ಯ ನಿರ್ವಹಿಸುವ ಅಗತ್ಯವಿದೆ. ಜ್ಞಾನ ಉತ್ಪಾದನೆಯಲ್ಲಿ ಸಮುದಾಯಗಳು ಪಾಲ್ಗೊಳ್ಳುವಂತೆ ಮಾಡಬೇಕಿದೆ.

ಸಂಸ್ಕೃತಿ ಚಿಂತಕರಾದ ದೇವಿಯವರ ಈ ಕಿರುಹೊತ್ತಿಗೆ ಭಾರತದಲ್ಲಿ ಶಿಕ್ಷಣ ಬೆಳೆದುಬಂದ ಬಗೆಯನ್ನು ಹಾಗೂ ಅದರ ಸಂಕೀರ್ಣತೆಗಳನ್ನು ತಲಸ್ಪರ್ಶಿಯಾಗಿ ಬಿತ್ತರಿಸುತ್ತದೆ. ಇದು ಚರಿತ್ರೆಗೆ ಕಟ್ಟುಬಿದ್ದು ವಿವರಿಸುವ ಮಾದರಿಗೆ ಸೇರಿದ್ದಲ್ಲ; ಭೂತ, ವರ್ತಮಾನ, ಭವಿಷ್ಯತ್‌ಗಳನ್ನು ಏಕತ್ರಗೊಳಿಸಿ ಕೊಂಡು ನೋಡುವ ವಿಭಿನ್ನ ಕೃತಿಯಾಗಿದೆ. ಭಾರತೀಯ ಭಾಷೆ, ಸಾಹಿತ್ಯ, ಜ್ಞಾನ, ಶಿಕ್ಷಣ, ಸಂಸ್ಕೃತಿಗಳ ಕುರಿತು ದೇವಿಯವರ ಆಳವಾದ ವಿದ್ವತ್ ಜೊತೆಯಲ್ಲಿಯೇ ಅವರ ಸಾಮಾಜಿಕ ಕಾಳಜಿ ಮತ್ತು ಹೊಣೆಗಾರಿಕೆಯೂ ವ್ಯಕ್ತವಾಗಿದೆ. ಅಹರ್ನಿಶಿ ಪ್ರಕಾಶನದ ಮೂಲಕ ಇಂತಹದೊಂದು ಕೃತಿ ಕನ್ನಡಕ್ಕೆ ಅನುವಾದಗೊಂಡಿರುವುದು ಸಂತೋಷದ ಸಂಗತಿ ಯಾಗಿದೆ. ಇದು ಕನ್ನಡಕ್ಕೆ ಬರುತ್ತಿರುವ ದೇವಿಯವರ ಮೊದಲ ಕೃತಿಯೇನಲ್ಲ. ಈ ಮೊದಲು ಬಿ. ಎ. ಶಾರದ ಅವರಿಂದ ‘ವಿಸ್ಮೃತಿಯ ನಂತರ’ (೨೦೧೫) ಮತ್ತು ಚಂದ್ರಕಾಂತ ಪೋಕಳೆ ಅವರಿಂದ ‘ವಾನಪ್ರಸ್ಥ’ (೨೦೧೭) ಕೃತಿಗಳು ಅನುವಾದಗೊಂಡು ಕನ್ನಡ ಓದುಗರ ಮುಂದಿವೆ.

**ಡಾ॥ ಸುಭಾಷ್ ರಾಜಮಾನೆ**
ಕನ್ನಡ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಯಲಂಕ, ಬೆಂಗಳೂರು – ೫೫೦ ೦೬೪

# ಬೌದ್ಧ ತಾತ್ವಿಕ ಪಠ್ಯಗಳಲ್ಲಿ ಅಚಲಪಂಥ

ಮೊದಲಿಗೆ ಆಕಾಶ ನಿರಭ್ರವಾಗಿಯೇ ಇತ್ತು
ನೋಡ ನೋಡುತ್ತಲೇ ಏನೇನೋ ತುಂಬಿಕೊಂಡು
ಆಕಾಶವೇ ಕಾಣದಾಯಿತು
ಅಯ್ಯೋ ಮೂಢ
ಕಲುಷಿತಗೊಂಡ ಆಕಾಶದಂತೆ
ದೋಷಪೂರಿತ ಮನಸ್ಸು
ಅರಿಯಲಾರದು ಸಹಜವ (ಸರಹಪಾದ)

ಅಚಲ ಎಂದಾಕ್ಷಣ ಹಾಗೆಂದರೇನೆಂಬುದರ ಜೊತೆಗೆ ಇಂತಹದೊಂದು ಪಂಥ ಕನ್ನಡ ನೆಲದಲ್ಲಿದೆಯೇ ಎಂಬ ಪ್ರಶ್ನೆ ಇದಿರಾದರೆ ಅದಕ್ಕೆ ಕಾರಣಗಳೂ ಇವೆ. ಅವುಗಳನ್ನು ಗಮನಿಸಿದರೆ ಕೆಳಗಿನ ಸಂಗತಿಗಳು ಮುನ್ನೆಲೆಗೆ ಬರುತ್ತವೆ :

**ಪಠ್ಯ ಮತ್ತು ಓದಿನ ರಾಜಕಾರಣ**

೧. ತುಂಬ ತಡವಾಗಿ ಅಕ್ಷರ ದಕ್ಕಿಸಿಕೊಂಡಿರುವ ಕನ್ನಡದ ಬಹು ಸಮಾಜಗಳಿಗೆ ಅವರದ್ದೇ ಆಯ್ಕೆಯ ಪಠ್ಯಗಳಾಗಲೀ, ಓದಾಗಲೀ ದೊರಕಿಲ್ಲ. ಯಾವುದನ್ನು, ಯಾರನ್ನು ಓದದ ಹಾಗೆ ಓದಿಗೆ ಸಿಲುಕದ ಹಾಗೆ, ನೋಡಿಕೊಳ್ಳಬೇಕು ಎನ್ನುವ ಸಾಂಸ್ಕೃತಿಕ ರಾಜಕಾರಣದ ಹುನ್ನಾರಗಳನ್ನು ದಾಟಲು ಅವಕ್ಕೆ ಸಾಧ್ಯವಾಗಿಲ್ಲ. ಈ ನಾಡಿನ ಧರ್ಮ, ಕಾವ್ಯ, ಸಂಸ್ಕೃತಿಗಳ ಕುರಿತಾದ ಈ ಉದ್ದೇಶಿತ ವಂಚನೆ ಮತ್ತು ತಪ್ಪು ಓದುಗಳು ಇಂತಹ ಜನಪಂಥಗಳನ್ನು ಜನರ ಗ್ರಹಿಕೆಯಿಂದ ದೂರವೇ ಇಟ್ಟಿವೆ.

೨. ಈ ಪಂಥಗಳಿಗೂ ತಾವು ಅಳಿಯುವ ಭಯವಿಲ್ಲ. ಹಾಗಾಗಿ ಅಧಿಕಾರ ಕೇಂದ್ರಗಳೊಂದಿಗೆ ಯಾವ ಸಂಬಂಧಗಳಿಗೂ ಅವು ಹಾತೊರೆಯುವುದಿಲ್ಲ. ತಾವಾಗಿ ಬಂದವರಿಗಲ್ಲದೆ ಮೈಮೇಲೆ ಬಿದ್ದು ಪರಿಚಯ ಮಾಡಿಕೊಳ್ಳುವ ಮಾರ್ಗವೂ ಅವುಗಳದ್ದಲ್ಲ.

೩. ಅಚಲವೆಂಬುದು ಕನ್ನಡದ ತತ್ವಪದದ ಬಹುಮುಖ್ಯ ಧಾರೆಗಳಲ್ಲೊಂದು. ಇಲ್ಲಿ ಅನೇಕ ಧಾರೆಗಳಿವೆ. ಅವು ಚಿಂತನಾಧಾರೆಗಳೂ ಹೌದು, ಜೀವನ ಮಾರ್ಗಗಳೂ ಹೌದು. ಅವುಗಳಲ್ಲಿ ನಿಜಗುಣರ ಷಟ್‌ಸ್ಥಲ, ಶಂಕರರ ಅದ್ವೈತ, ಅಲ್ಲಮನ ಬಯಲು, ಸೂಫೀ, ಕೋಡೇಕಲ್, ಗುಡಿಕಲ್ಲು, ಚಿದಾನಂದಾವಧೂತರ ಶಾಕ್ತ ಮುಂತಾದ ಧಾರೆಗಳಿವೆ. ಅಚಲಪಂಥ ಇವುಗಳಲ್ಲಿ ಒಂದು.

೪. ಈ ಗುರುಪರಂಪರೆಯಲ್ಲಿ ಸಾಂದೀಪಾ, ಕೃಷ್ಣಪಾ, ಸರಹಪಾದ, ನಾಗಾರ್ಜುನ ಮುಂತಾದವರ ಜೊತೆಗೆ ಆಧುನಿಕ ವ್ಯಾಖ್ಯಾನಕಾರರ ಪಟ್ಟಿಯಲ್ಲಿ ಮುಖ್ಯರಾದ ಶಿವರಾಮ ದೀಕ್ಷಿತರು, ದೇಸಿಕ ಪ್ರಭುಗಳು, ವೆಂಕಟೇಶ್ವರ ಅವಧೂತರು, ಅಚಲಾನಂದ ಕಪಿಲಮುನಿ ಮುಂತಾದವರನ್ನೂ ಒಳಗೊಂಡಂತೆ ದೊಡ್ಡಪಟ್ಟಿಯೇ ಇದೆ. ತೀರಾ ಇತ್ತೀಚಿನ ದೊಡ್ಡಿವೆಂಕಟಗಿರಿಯಪ್ಪ, ಗಟ್ಟಿಹಳ್ಳಿ ಅಂಜನಪ್ಪ, ಸರಸ್ವತಿ ಭೋಜರಾಜಸ್ವಾಮಿ, ಕೈವಾರ ಬಾಲಾವಧೂತ, ಬಾಗಲೂರು ವೆಂಕಟಾರ್ಯರು, ಬೇರಿಕೆ ಬುಟ್ಟಪ್ಪ, ಬುರುದೆ ರಾಮಚಂದ್ರಪ್ಪ, ದಕ್ಷಿಣಾಮೂರ್ತಿ, ಪೀಲ್ವಾನ ಶಂಕರ ದೇಸಿಕ ಪ್ರಭು, ನನ್ನೂರು ಮೆಹಬೂಬ, ಗಗನಾನಂದಾರ್ಯರು, ನಾಗಾರ್ಯರು, ಪೋಲಾರ್ಯರು, ವೀರದಾಸಮ್ಮ, ಮುಂತಾದವರು ಇದ್ದಾರೆ.

೫. ಈ ಪರಂಪರೆಯ ಮೂಲನೆಲೆಯಾಗಿ ಆಂಧ್ರವನ್ನು ಗುರುತಿಸುವುದಿದೆ. ಆದರೆ ಅಚಲಪಂಥ ಕೇವಲ ಆಂಧ್ರಕ್ಕೆ ಸೀಮಿತವಲ್ಲ. ಇದರ ಕಾಲಮಾನವೂ ಕ್ರಿ. ಶ. ಎರಡನೇ ಶತಮಾನಕ್ಕೂ ಹಿಂದಕ್ಕಿರುವಂತಿದೆ.

೬. ಕನ್ನಡದ ಜನಪದವು ಜತನದಿಂದ ಕಾಪಾಡಿ ಕೊಂಡು ಬಂದಿರುವ ಅನೇಕ ತಾತ್ವಿಕ ಆಕರಗಳಲ್ಲಿ ಅಚಲವೂ ಒಂದು. ಕರ್ನಾಟಕದ ಪ್ರಮುಖ ಜನಪದ ತತ್ವವೆಂದೇ ಗುರುತಿಸಬಹುದಾದ ಅಚಲವು ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ತತ್ವ ನಡೆಗಳಲ್ಲಿ ಒಂದು. ಬೌದ್ಧ ಮಧ್ಯಮ ಮಾರ್ಗದ ತಾತ್ವಿಕತೆಯಿಂದ ರೂಪುಗೊಂಡ ಅಚಲ ಸಂಪ್ರದಾಯವು ತಾತ್ವಿಕತೆಯ ಸ್ಪಷ್ಟತೆ ಮತ್ತು ಅನ್ವಯದ ದೃಷ್ಟಿಯಿಂದ ಈ ಹೊತ್ತಿನ ಕರ್ನಾಟಕದ ಜನಪದ ಬೌದ್ಧಧರ್ಮವೆಂದರೂ ಒಪ್ಪುತ್ತದೆ. ಅಚಲ ತಾತ್ವಿಕತೆಯ ಆಕರ ಮೂಲ ಗಳನ್ನು ಗುರುತಿಸಿ ಸೂಚಿಸುವುದು ನನ್ನ ಉದ್ದೇಶ.

೭. ಅಚಲರು ತತ್ವವನ್ನು ನಿರಂತರ ಎಚ್ಚರದಲ್ಲಿಟ್ಟು ನೋಡುವವರು. ಅವರು ನಿರಂತರ ತಾತ್ವಿಕವಾಗಿ ಪರದೇಸಿಗಳು. ಅಂದರೆ ಯಾವ ತತ್ವವನ್ನೂ, ಸಿದ್ಧತತ್ವವೆಂದು, ಶಾಶ್ವತವೆಂದು ಭಾವಿಸಿದವರಲ್ಲ.

೮. ಅಚಲ ನಮ್ಮ ನಡುವಿನ ಕತ್ತಲ ಜ್ಞಾನ. ಅನೇಕ ಕಾರಣಗಳಿಂದ. ಬೆಳಕೊಂದನ್ನು ಹಚ್ಚಿಟ್ಟು ಇಲ್ಲೇ ಹೀಗೇ ಬಾಳಲು ಮಾಡುವ ಯಾವ ಒತ್ತಾಯ ಗಳನ್ನೂ ಅಚಲ ಮಾಡಲಾರದು. ಅದು 'ನಿನ್ನ ಬೆಳಕನ್ನು ನೀನೇ ಹಚ್ಚಿಕೊಂಡು ಬಾಳಲು ಸೂಚಿಸುವ ಮತ್ತು ಯಾರನ್ನೂ ಯಾರೂ ಒತ್ತಾಯಿಸದಿರುವ ಕ್ರಮ.'

೯. ಅಚಲವು ಬೌದ್ಧ ಪ್ರಜ್ಞಾಪಾರಮಿತೆಯ ಒಂದು ಭಾಗ. ಅದೊಂದು ಸ್ಥಲಕಟ್ಟಿನ ಕ್ರಮದಲ್ಲಿ ಕ್ರಮಾಗತವಾದ ಸಾಧನೆಯನ್ನು ಮಾಡುವ ವಿಧಾನ. ಮನಸ್ಸಿಗೆ ನಿರಂತರವಾಗಿ ಪ್ರವೇಶ ಪಡೆಯುತ್ತಲೇ ಇರುವ ಸಂರಚನೆಗಳನ್ನು ನಿರ್ವಹಿಸಿ ವಿಸರ್ಜಿಸುವ ಪ್ರಕ್ರಿಯೆಯನ್ನು ಸಹಜವಾಗಿಸುವ ಸಾಧನೆ. ವೈಯಕ್ತಿಕ ನೆಲೆಯಲ್ಲಿ ಮತ್ತು ಸಮೂಹದ ನೆಲೆಯಲ್ಲಿ ಕೇಡಿಗೆ ಕಾರಣವಾಗುವ ಸಂಗತಿಗಳನ್ನು ನಿವಾರಿಸಿಕೊಂಡು ಲೋಕವನ್ನು ಅದಿರುವಂತೆಯೇ ಗ್ರಹಿಸಿ ವ್ಯವಹರಿಸುವ ಮಾದರಿ.

ಎಸ್. ನಟರಾಜ ಬೂದಾಳು

೧೦.ಪ್ರಜ್ಞಾಪಾರಮಿತ ತತ್ವವು ಬೌದ್ಧ ಧರ್ಮದ ಕೇಂದ್ರ ತಾತ್ವಿಕತೆ. ಪ್ರಜ್ಞಾಪಾರಮಿತ ತತ್ವವನ್ನು ವಿಸ್ತಾರವಾಗಿ ವಿವರಿಸಿಕೊಡುವ ಆರು ಸೂತ್ರಗಳಿವೆ: ೧. ಪ್ರಜ್ಞಾ ಪಾರಮಿತ ಹೃದಯಸೂತ್ರ ೨. ಅವತಂಸಕ ಸೂತ್ರ ೩. ಸದ್ಧರ್ಮ ಪುಂಡರೀಕ ೪. ವಿಮಲಕೀರ್ತಿ ಸೂತ್ರ. ೫. ವಜ್ರ ಸೂತ್ರ ಮುಂತಾಗಿ. ಇವುಗಳಲ್ಲಿ ಅಚಲದ ವಿಸ್ತಾರವಾದ ವಿವರಣೆ ಮತ್ತು ವ್ಯಾಖ್ಯಾನಗಳು ದೊರಕುವುದು ಹೃದಯ ಸೂತ್ರ, ಅವತಂಸಕ ಸೂತ್ರ, ಮತ್ತು ಸದ್ಧರ್ಮ ಪುಂಡರೀಕ ಸೂತ್ರಗಳಲ್ಲ. ಬೌದ್ಧ ತಾತ್ವಿಕ ನಾಗಾರ್ಜುನನು ಅಚಲವನ್ನು ವಿವರಿಸಲಿಕ್ಕಾಗಿಯೇ ದಶಭೂಮಿ ಕಾಶಾಸ್ತ್ರವೆಂಬ ಗ್ರಂಥವನ್ನು ರಚಿಸಿದ್ದಾನೆ.

ಆಂಧ್ರದ ನಾಗಾರ್ಜುನಕೊಂಡ, ಶ್ರೀಶೈಲಗಳಿಂದ ಕವಲೊಡೆದ ಈ ಮಾರ್ಗದ ಪ್ರಧಾನ ತಾತ್ವಿಕ ಆಕರ ಮೂಲವೆಂದರೆ ನಾಗಾರ್ಜುನನ ದಶಭೂಮಿಕಾಶಾಸ್ತ್ರ. ಲೋಕವನ್ನು ನಾವು ಗ್ರಹಿಸಬೇಕಾದ ಕ್ರಮ ಮತ್ತು ಸಾಧನೆಯ ವಿವಿಧ ಹಂತಗಳನ್ನು ಹತ್ತು ಹಂತಗಳಲ್ಲಿ ಬೌದ್ಧ ಧರ್ಮದ ದಶಭೂಮಿಕಾಶಾಸ್ತ್ರವು ವಿವರಿಸುತ್ತದೆ. ಪ್ರಮುದಿತ, ವಿಮಲ, ಪ್ರಭಾಕರಿ, ಅರ್ಚಿಷ್ಮತಿ, ಸುದುರ್ಜಯ, ಅಭಿಮುಖಿ, ದೂರಾಗಮ, ಅಚಲ, ಸಾಧುಮತಿ ಮತ್ತು ಧರ್ಮಮೇಘ – ಇವು ಆ ಹತ್ತು ಹಂತಗಳು.

೧. ಶೂನ್ಯತೆಯ ನೇರ ಅನುಸಂಧಾನ ಸಾಧ್ಯವಾಗುವ ಅವಧೂತರು ಸುಖ–ದುಃಖಗಳನ್ನು ದಾಟಿದಾಗ ಉಂಟಾಗುವ ಅನುಭವವು ಪ್ರಮುದಿತ.

೨. ಎಲ್ಲ ರೀತಿಯ ಕೆಡುಕುಗಳಿಂದ ಮುಕ್ತವಾಗಿ ಬದುಕುವುದು ವಿಮಲ.

೩. ಸದಾ ಜಾಗೃತವಾಗಿರುವ ನಿಸರ್ಗವಿವೇಕವು ಪ್ರಭಾಕರಿ;

೪. ಇದಿರಾಗುವ ಕೆಡುಕುಗಳನ್ನು ನಿವಾರಿಸಿಕೊಳ್ಳುವ ತಾತ್ಕ್ಷಣಿಕ ನಡೆ ಅರ್ಚಿಷ್ಮತಿ.

೫. ಮಧ್ಯಮ ಮಾರ್ಗದ ನಿರಂತರ ನಡೆಯನ್ನು ಕಾಪಾಡಿಕೊಳ್ಳುವುದು ಸುದುರ್ಜಯ.

೬. ಪ್ರಜ್ಞಾಪಾರಮಿತದ ಅನುಸಂಧಾನ ಅಭಿಮುಖಿ.

೭. ಎಲ್ಲ ಪ್ರಾಪಂಚಿಕ ವೈರುಧ್ಯಗಳನ್ನು ದಾಟುವುದು ದೂರಾಗಮ;

೮. ಮನಸ್ಸಿನಲ್ಲಿ ಸಂಗ್ರಹಗೊಂಡಿರುವ ಸಂರಚನೆಗಳಿಂದ ಮುಕ್ತನಾಗಿ ನಡೆದುಕೊಳ್ಳುವುದು ಅಚಲ.

## ಹೊಸತು – ೨೦೧೯ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೧೯ಕ್ಕೆ ನಿಮ್ಮ ಹೊಸತು ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **'೨೦೧೯ರ ಲೋಕಸಭಾ ಚುನಾವಣೆಯನ್ನು ಕುರಿತಾಗಿ ನಿಮ್ಮ ಅಪೇಕ್ಷೆ – ನಿರೀಕ್ಷೆಗಳು'**.

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೩೦ ನವೆಂಬರ್ ೨೦೧೯ರೊಳಗೆ **ಹೊಸತು** ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

*– ಸಂ.*

೯. ತಾನು ಪಡೆದ ಅರಿವನ್ನು ಭಿನ್ನ ಭೇದವಿಲ್ಲದೆ ಸಮೂಹಕ್ಕೆ ಹಂಚುವುದು ಸಾಧುಮತಿ. ಮತ್ತು

೧೦. ಲೋಕ ಸಮಸ್ತವನ್ನು ಕರುಣೆ ಮೈತ್ರಿಯಿಂದ ಕಂಡು ಬಾಳಿಸುವುದು ಧರ್ಮಮೇಘ.

ಇದರಲ್ಲಿನ ಎಂಟನೆಯ ಹಂತದ ಸಾಧಕರು ಅಚಲಿಗರು. ಮನೋಕೋಶದಲ್ಲಿ ಸಂಗ್ರಹಗೊಳ್ಳುವ ಸಂರಚನೆಗಳೇ ನಮ್ಮ ತಪ್ಪು ಗ್ರಹಿಕೆಗೆ ಮತ್ತು ತಪ್ಪು ನಡೆಗೆ ಕಾರಣಗಳು. ಅವುಗಳ ಪರಿಣಾಮಗಳಿಗೆ ಒಳಗಾಗದೆ, ಅಂದರೆ ನಮ್ಮ ಮನಸ್ಸು ನೀಡುವ ನಿರ್ದೇಶನಗಳನ್ನು ತಕ್ಷಣ ಒಪ್ಪಿಕೊಳ್ಳದೆ ಅವುಗಳನ್ನು ಪಕ್ಕಕ್ಕೆ ಇಟ್ಟು ಒಳಿತು ಕೆಡುಕುಗಳನ್ನು ಲೋಕಪರವಾಗಿ ಭಾವಿಸಿ ನಡೆದುಕೊಳ್ಳುವುದನ್ನು 'ಅಚಲ' ಎನ್ನುತ್ತಾರೆ. ಇದು ತೀರಾ ಸ್ಥೂಲವಾದ ವಿವರಣೆ. ಅದನ್ನು ಕೋಲಾರದಲ್ಲಿ ಇದ್ದ ಅವಧೂತ ದಕ್ಷಿಣಾಮೂರ್ತಿಗಳು ಹೀಗೆ ವಿವರಿಸುತ್ತಾರೆ: 'ಯಾರು ತನ್ನ ಮನೋಸಂರಚನೆಗಳಿಂದ ವಿಚಲಿತನಾಗುವುದಿಲ್ಲವೋ ಅವನು ಅಚಲ.' ಮನೋಸಂರಚನೆಗಳಿಂದ ಮುಕ್ತನಾಗಿ ನಡೆದುಕೊಳ್ಳುವುದನ್ನು ಮನೋಲಯ, ಅಮನಸ್ಕ ಮುಂತಾದ ಹೆಸರುಗಳಿಂದ ಸೂಚಿಸುತ್ತಾರೆ. ಅದನ್ನು ಸಹಜಯಾನ ಎಂದು ಕರೆಯುತ್ತಾರೆ. ನಾಗಾರ್ಜುನ ಹೇಳುವಂತೆ ಅಚಲವು ಮಾನುಷ ಸಂರಚನೆಗಳನ್ನು ನಂಬದೇ ಇರುವ ಪ್ರೌಢ ಸಾಧಕ ಹಂತ. ಅಚಲ ಸಾಧಕ ಪದ್ಮಾಲಯ ನಾಗರಾಜ್ ಅದನ್ನು ಹೀಗೆ ವಿವರಿಸುತ್ತಾರೆ. 'ಮನೋಸಂರಚನೆಗಳ ನಿಯಂತ್ರಣದಾಚೆಗಿನ ಸ್ಥಿತಿಯಲ್ಲಿರುವಾತನೇ ಅಚಲಿಗ. ಇವರು ತಮ್ಮ ಗುರುವಿನ ಉಪದೇಶದಿಂದ ಪಡೆದ ದಾಟುವಿಕೆಯಲ್ಲಿ ಪಳಗಿರುವವರಾಗಿದ್ದು, ಮನೋಸಂರಚನೆಗಳಿಂದ ಅವರ ಬುದ್ಧಿ ಚಂಚಲಗೊಳ್ಳುವದಿಲ್ಲ. ಶೂನ್ಯತೆಯನ್ನು ಇವರು ಆಲೋಚನೆಗಳಿಂದಾಗಲಿ ಅರಿವಿನಿಂದಾಗಲಿ ಪಡೆದುಕೊಂಡದ್ದಲ್ಲ, ಅದು ಅವರ ಬದುಕುವ ಕ್ರಮವಾಗಿರುತ್ತದೆ. ಇವರಿಂದ ಆಗುವ ಲೋಕೋಪಕಾರವೆಂದರೆ ಅವರು ತಮ್ಮದೆನ್ನುವ ಯಾವುದೇ ಕೇಡುಗಳನ್ನು ಇಲ್ಲಿ ಅಂಟಿಸುವುದಿಲ್ಲ. ಅವರು ಇಡೀ ಜೀವಕುಲದೊಂದಿಗೆ ಸ್ನೇಹಜೀವಿಗಳಾಗಿರುತ್ತಾರೆ. ಸದಾ ಎಚ್ಚೆತ್ತ ಸ್ಥಿತಿಯಲ್ಲಿರುತ್ತಾರೆ. ಆದ್ದರಿಂದ ಅವರಲ್ಲಿ ಕಾರುಣ್ಯವು ಸಹಜ.

ಅಚಲ ತಾತ್ವಿಕತೆಯನ್ನು ಒಂದು ಮೂಲಕ್ಕೆ ಆರೋಪಿಸಿ ಮಾತನಾಡುವುದರಲ್ಲಿಯೇ ಒಂದು ವ್ಯಂಗ್ಯವಿದೆ. ಅದು ಅಚಲಕ್ಕೂ ಅನ್ವಯಿಸತಕ್ಕ ಮಾತು. ಅದೇನೆಂದರೆ ಜ್ಞಾನವೆನ್ನುವುದು ಒಂದು ಪ್ರವಾಹದ ರೀತಿಯದ್ದಾದ್ದರಿಂದ ಅದು ನಿರಂತರ ಬದಲಾವಣೆಗೆ ಒಳಪಟ್ಟದ್ದಾಗಿರುತ್ತದೆ. ಹಾಗಾಗಿ ಮೂಲವೊಂದನ್ನು ಸೂಚಿಸಿ ಅದರಂತೆ ಇದೆ ಅಥವಾ ಅದರಂತೆ ಇಲ್ಲ ಎನ್ನುವುದೇ ಸರಿಯಾದುದಲ್ಲ. ಯಾರು ಅಚಲರು ಎನ್ನುವ ಪ್ರಶ್ನೆಗೆ ಯಾರು ಅಚಲರಲ್ಲ ಎಂದು ಉತ್ತರಿಸಬಹುದೇ ಹೊರತು ಇಂಥವರು ಎಂದು ಉತ್ತರಿಸಲಾಗದು. ಹಾಗಾಗಿ ಅಚಲರ 'ಬುದ್ಧ್ಯುಪದೇಶಿನಿ' ಗ್ರಂಥ ಹೇಳುವಂತೆ ಅದು "ಚೈತನ್ಯವಲ್ಲ, ವಿಶ್ವತೇಜಸ ಪ್ರಾಜ್ಞ ಸ್ವರೂಪವಲ್ಲ, ಸಾಕ್ಷಾತ್ಕಾರವಲ್ಲ, ಪ್ರಣವವಲ್ಲ (ಓಂಕಾರ) ಪ್ರಕೃತಿಯಲ್ಲ, ಪುರುಷವಲ್ಲ, ಕ್ಷರವಲ್ಲ, ಅಕ್ಷರವಲ್ಲ, ಕಾರಣಕಾರ್ಯವಲ್ಲ, ಕರ್ಮವಲ್ಲ,....... ಅರಿವಲ್ಲ, ಶೂನ್ಯವಲ್ಲ, ನಿರ್ವಾಣವಲ್ಲ, ನಿರ್ವಾಣವಲ್ಲದೆಯೂ ಅಲ್ಲ, ದೇಹವಲ್ಲ, ವಿದೇಹವಲ್ಲ, ಚಿತ್ತವಲ್ಲ, ತಿಳಿಯಬಹುದಾದದ್ದಲ್ಲ, ತಿಳಿಯದೇ ಇರುವುದೂ ಅಲ್ಲ, ಗಮ್ಯವಲ್ಲ, ದ್ವೈತಾದ್ವೈತವಲ್ಲ........" ನಾಗಾರ್ಜುನ ಗುರು ಹೇಳುವಂತೆ ಇದು ನಿರಂತರ ಇದಿರಾಗುತ್ತಲೇ ಇರುವ ಸಂರಚನೆಗಳಿಗೆ ಜೋತುಬೀಳದೆ ಆ ಕ್ಷಣಕ್ಕೆ ಅವುಗಳನ್ನು ನಿರ್ವಹಿಸಿ ಮುಂದಿನ ಕ್ಷಣಕ್ಕೆ ಉಳಿಯದ ಹಾಗೆ ನಿರಸನಗೊಳಿಸುವ ಮನೋಲಯ, ಅಮನಸ್ಕ, ಮನೋನಿರಸನ ಮುಂತಾಗಿ ಕರೆಯಲ್ಪಡುವ ಸಾಧನೆ. ಅದನ್ನು ಅಚಲದ ಒಳಗೆ ಪರಿಪೂರ್ಣವೆನ್ನುತ್ತಾರೆ. ಅಚಲದ ಜೊತೆಗಿನ ಬೌದ್ಧ ಎಳೆಗಳು ಇದಿಷ್ಟೇ ಅಲ್ಲ. ಬೌದ್ಧ "ಪ್ರಜ್ಞಾಪಾರಮಿತಸೂತ್ರ"ದಲ್ಲಿ ಹೇಳಿದ ಶೂನ್ಯತಾ ತತ್ವವೇ ಅಚಲರ ಬಯಲು.

ಸಾಂಸ್ಕೃತಿಕ ವಸಾಹತುಶಾಹಿಯನ್ನು ಧಿಕ್ಕರಿಸುತ್ತ ಗಾಢವಾದ ತತ್ವನಿಷ್ಠೆಯನ್ನು ಮೆರೆಯುತ್ತ ಬಂದಿರುವ ಕೆಲವು ಪ್ರದೇಶಗಳು ನಮ್ಮ ನಡುವೆ ಇವೆ. ಅದರಲ್ಲಿ ನಿಸ್ಸಂಶಯವಾಗಿ ಕೋಲಾರ ಪ್ರಾಂತವೂ ಒಂದು. ತೆಲುಗು ಮತ್ತು ತಮಿಳಿನೊಡನೆ ಗಾಢವಾದ ಸಾಂಸ್ಕೃತಿಕ ಸಂಬಂಧವನ್ನು ಹೊಂದಿರುವ ಈ ನೆಲದಲ್ಲಿ ಮೇಲ್ನೋಟಕ್ಕೆ ಭಾಷಿಕ ಸಾಮರಸ್ಯವೊಂದು ಗೋಚರವಾಗುವುದಾದರೂ ನಿಜವಾಗಿ ಆ ನೆಲದ ಸತ್ವ ವ್ಯಕ್ತವಾಗುವುದು, ಅಲ್ಲಿನ ಕೆಳಸ್ತರಗಳಲ್ಲಿ ಆಚರಣಾ ರೂಪವಾಗಿ ದೃಢವಾಗಿ ಬೆಳೆಯುತ್ತಿರುವ ತತ್ವಪ್ರಸ್ಥಾನಗಳಲ್ಲಿ. ಅವುಗಳಲ್ಲಿ ಇಂದಿಗೂ ತನ್ನ ಅಂತಃಸತ್ವವನ್ನು ವಿಸ್ತರಿಸಿಕೊಳ್ಳುತ್ತಲೇ ಇರುವ ಮತ್ತು ಈ ಹೊತ್ತಿಗೂ ಸಾವಿರಾರು ಜನರ ಬದುಕಿನ ಕ್ರಮವಾಗಿರುವ ಅಚಲ ಪರಂಪರೆಯನ್ನು ಕನ್ನಡದ ಸಂಸ್ಕೃತಿ ಅಧ್ಯಯನವು ಒಳಗೊಳ್ಳದಿರುವುದು ಅದರ ಅಸೂಕ್ಷ್ಮತೆಗೆ ಹಿಡಿದ ಕನ್ನಡಿಯಂತಿದೆ. ಅಚಲವನ್ನು ಬುದ್ಧಮಾರ್ಗವೆಂದು ಎಲ್ಲ ಹಂತಗಳಲ್ಲಿ ಅವರು ಘೋಷಿಸಿಕೊಳ್ಳದಿದ್ದರೂ ತಾತ್ವಿಕತೆಯ ಅತ್ಯುನ್ನತ ಪಠ್ಯಗಳಲ್ಲಿ ಅದನ್ನು ಅವರು ಸ್ಪಷ್ಟಗೊಳಿಸಿಕೊಂಡೇ ಅನುಸಂಧಾನ ಮಾಡುತ್ತಿದ್ದಾರೆ. ಇದೇ ಮಾದರಿಯು ನಾಥಪಂಥದಲ್ಲಿ, ಝೆನ್ ಪಂಥದಲ್ಲಿ, ಅನೇಕ ತಂತ್ರ ಪಂಥಗಳಲ್ಲಿ ಪಾಲಿತವಾಗಿರುವುದು ಚರಿತ್ರೆಯ ಅಧ್ಯಯನದಿಂದ ಕಂಡುಬರುತ್ತದೆ. ಹಾಗೆ ನೋಡಿದರೆ ಬೌದ್ಧ ಧರ್ಮದ ಅಲಾಯಿದ ವೈಶ್ವಿಕ ಮಾದರಿಯೊಂದನ್ನು ಹುಡುಕಹೋಗುವುದೇ ವ್ಯರ್ಥ. ಬೌದ್ಧ ಧರ್ಮವೆನ್ನುವುದು ಆಯಾ ಕಾಲದೇಶಗಳೊಡನೆ ಸ್ಥಳೀಯ ಜ್ಞಾನ ಪರಂಪರೆಗಳೊಡನೆ ನಡೆದ ಜ್ಞಾನದ ವಿಸ್ತರಣೆಯ ಮಹಾಯಾನವಾಗಿದೆ.

**ಕರ್ನಾಟಕದಲ್ಲಿ ಅಚಲ ಪರಂಪರೆ**

ಅಚಲವೆನ್ನುವುದು ಒಂದು ಜೀವನ ಕ್ರಮ. ಬೌದ್ಧ ಮಧ್ಯಮಮಾರ್ಗವಾದ ಶೂನ್ಯತೆಯ ಅನುಸಂಧಾನವು ಅವರ ಮಾರ್ಗ. ಜಾತಿ, ಅಸ್ಪೃಶ್ಯತೆ, ಲಿಂಗತಾರತಮ್ಯದಂತಹ ಯಾವ ಕೇಡಿನ ಸಂರಚನೆಗಳೂ ಹತ್ತಿರ ಸುಳಿಯಲೂ ಇವರು ಬಿಡುವುದಿಲ್ಲ. ಮನಸ್ಸಿನ ಮೂಲೆಯಲ್ಲಿ ಕೂಡ ಲೋಕಕ್ಕೆ ಮುಚ್ಚಿಟ್ಟು ಬಾಳುವುದು ಏನೂ ಇರಕೂಡದು ಎಂದು ನಂಬಿ ಬದುಕುವ ಅವರು ತಮ್ಮನ್ನು ಬಹಿರಂಗಿಗಳು ಎಂದು ಕರೆದುಕೊಳ್ಳುತ್ತಾರೆ. ಅಚಲ ಸಂಪ್ರದಾಯದ ಕೆಲವು ಕ್ಷೇತ್ರಗಳನ್ನು ಹೆಸರಿಸುವುದಾದರೆ, ತಮಿಳುನಾಡಿನ ಬಾಗಲೂರು, ಹೊಸಕೋಟೆ (ಬೆಂಗಳೂರು ಗ್ರಾಮಾಂತರ ಜಿಲ್ಲೆ), ಕೈವಾರ, ಚಿಕ್ಕಬಳ್ಳಾಪುರ, ಮಿಣಕನಗುರ್ಕಿ, ಭೀಮೇಶ್ವರನ ಬೆಟ್ಟ, ಗಟ್ಟಿಹಳ್ಳಿ, ಬೇರಿಕೆ, ದೊಡ್ಡಿ, ಆಂಧ್ರದ ಕದಿರಿ, ಶ್ರೀಶೈಲ, ಹಿಂದೂಪುರ, ಶ್ರೀಕಾಕುಲಂ, ಅನಂತಪುರಂ ಹಾಗೂ ಆಂಧ್ರ ಪ್ರದೇಶದಲ್ಲಿರುವ ಸಾವಿರಾರು ಅಚಲ ಮಠಗಳು, ತುಮಕೂರು ಜಿಲ್ಲೆಯ ಬೆಳ್ಳಾವಿ, ಯರಗುಂಟೆ, ಕತಿಕ್ಯಾತನಹಳ್ಳಿ, ಪಾವಗಡ, ಪಶ್ಚಿಮ ಗೋದಾವರಿ ಜಿಲ್ಲೆಯ ಅನೇಕ ಹಳ್ಳಿಗಳು, ಹಗರಿಬೊಮ್ಮನಹಳ್ಳಿ, ನಾಗದೇವಪುರ, ನಾರಾಯಣಪುರ, ಮುಂತಾದುವುಗಳನ್ನು

ಹೆಸರಿಸಬಹುದು. ಈ ಪ್ರಾಂತದ ಉದ್ದಗಲಕ್ಕೂ ನೂರಾರು ಅಚಲಮಠಗಳಿವೆ. ಅಚಲ ತತ್ವದ ಪ್ರಧಾನ ಆಕರಗಳೆಂದು ನಾಗಾರ್ಜುನನ ದಶಭೂಮಿ ವಿಭಾಷಾಸೂತ್ರ, ಸರಹನ ದೋಹಾಕೋಶ, ಸಾಂದೀಪಾನ ಅಸಂಬದ್ಧ ದೃಷ್ಟಿ ನಿರಸನ, ಶಿವರಾಮದೀಕ್ಷಿತರ ಬೃಹದ್ವಾಶಿಷ್ಠ, ದೇಸಿಕ ಪ್ರಭುಗಳ ಶಕ್ತಿದ್ವಯ ನಿರಸನ ಮತ್ತು ಕ್ಷರಾಕ್ಷರೋಪಾಧಿ ದ್ವಯದೋಷ ನಿರಸನ, ಅಚಲಾನಂದ ಕಪಿಲಮುನಿಯ ಭ್ರಾಂತಿರಹಿತಾಚಲನುಭವಮು, ಮತ್ತು ಸಾವಿರಾರು ಬಿಡಿ ತತ್ವಪದಗಳನ್ನು ಗುರುತಿಸಿಕೊಳ್ಳಲಾಗಿದೆ. ಈ ಮಾರ್ಗದ ಸಾಧಕರು ಲಕ್ಷಾಂತರ ಸಂಖ್ಯೆಯಲ್ಲಿದ್ದಾರೆ.

ಅಚಲಿಗರಿಗೆ ಸುದೀರ್ಘವಾದ ಗುರುಪರಂಪರೆಯಿದೆ. ಅವರು ತಮ್ಮ ಗುರುಪರಂಪರೆಯನ್ನು ಸದಾ ಸ್ಮರಣೆಯಲ್ಲಿಟ್ಟುಕೊಂಡು ಸಾಗುತ್ತಾರೆ. ಪರಿಪೂರ್ಣವನ್ನು ಸಾಧಿಸಿಕೊಂಡ ಗುರುವನ್ನು ಅರಿವಿನ ರೂಪವೆಂದೇ ಗೌರವಿಸುತ್ತಾರೆ. ತಣ್ಣಗೆ ಸಮಾನತೆಯನ್ನು ಅನ್ವಯಿಸಿಕೊಂಡು ಬಾಳುವುದು ಎಂತಹ ಇಕ್ಕಟ್ಟು ಎಂಬುದು ತಕ್ಷಣಕ್ಕೆ ಅರಿವಿಗೆ ಬರುವ ಸಂಗತಿ. ಪ್ರಕ್ಷುಬ್ಧಗೊಂಡಿರುವ ನಮ್ಮ ಆವರಣದ ಎಲ್ಲ ಪಂಥಗಳಿಂದ ಬಿಡಿಸಿಕೊಂಡು 'ಸುಮ್ಮನೆ' ಬಾಳುವ ಬಗೆಗೆ ಮಾತನಾಡುವುದು ಕೂಡ ಅಪರಾಧದಂತೆ ಕೇಳಿಸುತ್ತದೆ. ಮನೋಕೇಡುಗಳಿಂದ ಮುಕ್ತನಾಗುವುದು ಸರಳ ಸಂಗತಿಯಾಗಿ ಕಂಡರೂ ನಮ್ಮ ನಡುವೆ ಇಡುಕಿರಿದಿರುವ ಬಿಕ್ಕಟ್ಟುಗಳ ನಿವಾರಣೆ ಸರಳ ಸಂಗತಿಯಲ್ಲ. ಅದನ್ನು ಅಲ್ಲಮ ಸರಹಪಾದರೂ ನಿರ್ವಹಿಸಿದ್ದಾರೆ :

*ಚಂಚಲ ಕುದುರೆಯ ಹಾಗೆ ಉಸಿರ ಎಳೆದು ಬಿಡುವೆಯಲ್ಲ!*
*ಸಹಜದಲ್ಲಿ ಸುಮ್ಮನಿರು ನಿಶ್ಚಲನಾಗಿ.*
*ಪವನವ ನಿರ್ಬಂಧಿಸಿ ನಿನ್ನ ಬಗ್ಗೆಯೇ ಧ್ಯಾನಿಸುವುದ ಬಿಡು*
*ಕಟ್ಟಾಜೋಗಿ, ಮೂಗಿನ ತುದಿಯ ನೋಡುತ್ತ ಕೂರಬೇಡ.* (ಸರಹಪಾದ)
*ಮನ ಉಂಟೆ ಮರುಳೆ, ಶಿವಯೋಗಿಗೆ?*
*ಮತ್ತೊಮ್ಮೆ ಮನಮಗ್ನ ಉಂಟೆ ಶಿವಯೋಗಿಗೆ?*
*ಇಲ್ಲದ ಮನವನುಂಟೆಂದು ನುಡಿದು*
*ಅಡಗಿಸಿದೆನೆಂಬ ಮಾತು ಮನವ ನೆಲೆಮಾಡಿ ತೋಱುತ್ತದೆ*
*ಗುಹೇಶ್ವರನನಱಿದ ಶರಣಂಗೆ ತೋಱಲಿಲ್ಲ ಅಡಗಲಿಲ್ಲ ಕೇಳಾ* (ಅಲ್ಲಮಪ್ರಭು)

**ಅಚಲ ತತ್ವದ ಅನುಸಂಧಾನ**

ಅಚಲ ತಾತ್ವಿಕತೆಯು ಸಾವಿರಾರು ತತ್ವಪದಗಳ ರೂಪದಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಹರಡಿಕೊಂಡಿದೆ. ಅದರ ನಿತ್ಯಾನುಸಂಧಾನವನ್ನು ಅಚಲಿಗರೆಲ್ಲ ಮಾಡುತ್ತಾರೆ. ಅದೊಂದು ಗುರುಮಾರ್ಗ. ಗುರುವಿನ ಮಾರ್ಗದರ್ಶನದಲ್ಲಿ ಅರಿತು ನಡೆಯುವ ಸಾಧಕ ಮಾರ್ಗ. ಸ್ಥಗಿತ ಪುಸ್ತಕ ರೂಪದ ಅರಿವು ಅರಿವಲ್ಲ. ಅರಿವಿನ ಚಲನಶೀಲತೆಯನ್ನು ಕಾಪಾಡಿಕೊಡುವ ಗುರುವಿಗೆ ಮಹತ್ವದ ಸ್ಥಾನ. ಅದು ಕಲಿತು ಸಂಗ್ರಹಿಸಿಕೊಳ್ಳುವ ಜ್ಞಾನವಲ್ಲ; ಬದಲಿಗೆ ಇಲ್ಲವಾಗಿಸಿಕೊಳ್ಳುವುದರ ಮೂಲಕ ಬಯಲಾಗಿ ತುಂಬಿ ಬದುಕುವ ದಾರಿ.

ಕನ್ನಡದ ಶೈಕ್ಷಣಿಕ ಬದುಕು ತನ್ನ ಮೆಳ್ಳೆಗಣ್ಣಿಗೆ ಕಂಡದ್ದನ್ನೇ ಕನ್ನಡದ ಸಂಸ್ಕೃತಿಲೋಕವೆಂದು ಈವರೆಗೆ ಮುಂದಿಡುತ್ತಾ ಬಂದಿದೆ. ಇದೀಗ ತತ್ವಪದಗಳ ಮೂಲಕ ಅಚಲ, ಶಾಕ್ತ, ಶೂನ್ಯತೆ, ಅದ್ವಯ, ಚಿತ್ತ ಮಾತ್ರ ಸತ್ಯದಂತಹ ತತ್ವಪ್ರಸ್ಥಾನಗಳ ಬದುಕು ಮತ್ತು ತಾತ್ವಿಕತೆ ಮುನ್ನೆಲೆಯ ಚರ್ಚೆಗೆ ಬರುತ್ತಿವೆ. ಗುರುಮಾರ್ಗಿಗಳಾದ ಅಚಲಿಗರು ಬದುಕನ್ನು ಅತ್ಯಂತ ಸಮಾಧಾನದಿಂದ ಇದಿರಾಗುವ ದಾರಿ ತೋರುವ ಕರುಣಾ ಮೈತ್ರಿಯ ಸಾಧಕರು. ಪ್ರಜಾಸತ್ತಾತ್ಮಕವಾದ ಬದುಕೇ ನಮಗೆ ಇರುವ ಬಿಡುಗಡೆಯ ದಾರಿಯೆಂದು ತೋರಿಸಿಕೊಟ್ಟ ಅಚಲಮಾರ್ಗಿಗಳನ್ನು ಮನೆಯೊಳಕ್ಕೆ ಕರೆದು ಅವರ ಜೊತೆ ಬಾಳಬೇಕಿದೆ.

ಅಚಲ ಮಾರ್ಗದ ಒಂದು ತತ್ವಪದ:

**ಇಲ್ಲ ಇಲ್ಲವೋ ಎಲ್ಲಿಯೂ ಮುಕ್ತಿ**

ಇಲ್ಲ ಇಲ್ಲವೋ । ಎಲ್ಲಿಯೂ ಮುಕ್ತಿ ।
ಇಲ್ಲ ಇಲ್ಲ ಲವಲೇಶವೂ ।
ಸಾಧನೆ ಮಾಡುವ ಸೋದರರಿಗೆಲ್ಲವು ॥ ಇಲ್ಲ ॥

ಹೊತ್ತು ಹೊತ್ತಿಗೂ ಹೊಳೆಗೆ ಹೋಗಿ ।
ನೀರ ಕೋಳಿಯಂತೆ ನೀರಲಿ ಮುಳಗಲು ॥ ಇಲ್ಲ ॥

ಜಠರದ ಒಳಗೆ ಜಲವನು ಹೀರುತ ।
ಪಟು ಸಾಧನೆಯಲಿ ಕುಟಿಲವ ತೊಳೆದರೂ ॥ ಇಲ್ಲ ॥

ಗಾಣವ ತಿರುಗುವ ಬರಿದೇಗತಿ ।
ಬಿಟ್ಟೆ ಪ್ರದಕ್ಷಿಣೆ ಬಿಡದೇ ತಿರುಗಲು ॥ ಇಲ್ಲ ॥

ಇಳೆ ಸಂಸಾರವ ತೊರೆದೆವೆನುತಲಿ ।
ಬಲದಿ ಹಸಿವನು ತಡೆದುಕೊಂಡರೂ ॥ ಇಲ್ಲ ॥

ಸ್ನಾನ ಸಂಧ್ಯಾ ಜಪತಪ ಹೋಮ ।
ಬಿಡದೆ ಮಾಡುತ ಮಹಿಮೆ ತೋರಿದರೂ ॥ ಇಲ್ಲ ॥

ಹಿತ್ತಲೊಳು ಮೇಕೆ ಹೊಡೆದ ರೀತಿ
ಗಡ್ಡ ಬಿಟ್ಟರೂ । ಹಿರಿತನಕೆ ಗಡ್ಡವ ಬೆಳೆಸಿದರೂ ॥ ಇಲ್ಲ ॥

ಬಿಲದೊಳು ಸುಂಡಿಲಿಯಂತೆ ।
ತಲೆ ಕೆಳಗು ಮಾಡಿ ತಪವಗೈದರೂ ॥ ಇಲ್ಲ ॥

ತಿರುಮಣಿ ತಿರುಚೂರ್ಣಗಳೆಲ್ಲವ ।
ಒತ್ತೊತ್ತಗೆ ತಿದ್ದುತಲಿದ್ದರೂ ॥ ಇಲ್ಲ ॥

ರುದ್ರಾಕ್ಷಿ ಭಸ್ಮಾಂಗ ಧರಿಸುತ ।
ರುದ್ರನ ಪೂಜೆಯ ರೂಢಿಯೊಳಿದ್ದರೂ ॥ ಇಲ್ಲ ॥

ಮೇಕೆಯಂದದಿ ಎಲೆಗಿಡಗಳನು ।
ಬಿಡದೆ ಭಕ್ಷಣೆ ಗೈದರೂ ॥ ಇಲ್ಲ ॥

ಮಡದಿ ಮಕ್ಕಳ ತೊರೆದು ಊರೂರುತಿರುಗುತಾ ।
ವೈರಾಗ್ಯವ ತಾ ಧೀರತ್ವದಿ ನುಡಿದರೂ ॥ ಇಲ್ಲ ॥

ಆಸನ ಲಕ್ಷ್ಯಾಭ್ಯಾಸಗಳಗೈದು ।
ನಾಸಿಕಾಗ್ರದೊಳು ನೋಡುತಲಿದ್ದರೂ ॥ ಇಲ್ಲ ॥

ಮುದ್ರೆಯ ನೋಡುತ ಚಿದ್ರುಕ್ಕನ ಕಂಡು ।
ತದ್ರೂಪದೊಳು ತನ್ಮಯ ಹೊಂದಿದರೂ ॥ ಇಲ್ಲ ॥

ಕಾಯದೊಳಗಿಹನು ದೇವನೆಂದು ।
ಸಾವಿರ ವಿಧದೊಳು ಹುಡುಕಿ ನೋಡಿದರೂ ॥ ಇಲ್ಲ ॥

ಹರಿಹರ ಬ್ರಹ್ಮರು ಸ್ಥಿರವೆನುತ ಭಾವಿಸಿ ।
ನಿರತವು ಪ್ರಾರ್ಥನೆ ಮರೆಯದೆ ಮಾಡಲು ॥ ಇಲ್ಲ ॥

ಸಾರ್ಥಕವೆನುತಾ ಸರ್ವ ಕಾಲಗಳು ।
ತೀರ್ಥಯಾತ್ರೆಗಳು ತಿರುಗಿ ನೋಡಿದರೂ ॥ ಇಲ್ಲ ॥

ಇರುವುದು ಬಯಲೆಂದು ಗುರುವಿನಿಂದ ।
ತನ್ನ ತಾನು ಬಿಡಲಾಗದಿದ್ದರೆ ॥ ಇಲ್ಲ ॥

ದ್ವಾದಶಿ ಷೋಡಶಿ ಸ್ಥಿರವ ತಿಳಿದುಕೊಂಡು
ವಾದ ಭೇದಗಳು ಹೊರ ದೂಡದಿದ್ದರೆ ॥ ಇಲ್ಲ ॥

ಧರಣಿಯೊಳು ವೀರೇಶ್ವರ ಸದ್ಗುರು ।
ಕರುಣೆ ಹೊಂದದ ನರರಿಗೆ ಯಾವ ವಿಧದೊಳೂ ॥ ಇಲ್ಲ ॥

ಸ್ಪಷ್ಟವಾಗಿ ಶ್ರೀಕೃಷ್ಣನ ಮೊರೆಯಾಲಿಸಿ ।
ವ್ಯಷ್ಟಿ ಸಮಷ್ಟಿಗಳ ನಷ್ಟವ ಮಾಡದೆ

**ಎಸ್. ನಟರಾಜ ಬೂದಾಳು**
ಪ್ರಾಧ್ಯಾಪಕರು
'ಗೌರಿ' ಸಪ್ತಗಿರಿ ಬಡಾವಣೆ, ತುಮಕೂರು – ೫೭೨ ೧೦೧

